ಅಂತರ ಭಾರತೀಯ ಪುಸ್ತಕ ಮಾಲೆ

# ಗುಜರಾತಿ ಏಕಾಂಕಗಳು

(ಗುಜರಾತಿ ಭಾಷೆಯ ಹನ್ನೆರಡು ಏಕಾಂಕ ನಾಟಕಗಳ ಕನ್ನಡ ಅನುವಾದ)

ಸಂಪಾದನೆ

**ಎ.ಎಮ್. ರಾವಲ್**

ಅನುವಾದ

**ಪ್ರೇಮಾ ಕಾರಂತ**



**ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ**

# ಪೀಠಿಕೆ

ಗುಜರಾತಿ ನಾಟಕದ ಇತಿಹಾಸ ಸುದೀರ್ಘವಾದುದೇನೂ ಅಲ್ಲ. ಅನ್ಯ ಭಾರತೀಯ ಭಾಷೆಗಳಲ್ಲಿದ್ದಂತೆ ಗುಜರಾತಿ ಭಾಷೆಯಲ್ಲೂ ಸಹ ನಾಟಕ ಸಾಹಿತ್ಯ ಪ್ರಾರಂಭವಾದುದು ಕಳೆದ ಶತಮಾನದ ಉತ್ತರಾರ್ಧದಲ್ಲಿ ಅಂದರೆ ಬ್ರಿಟಿಷ್ ಆಳ್ವಿಕೆಯಲ್ಲಿ ಆಂಗ್ಲ ಸಾಹಿತ್ಯದ ಸಂಪರ್ಕ ಪಡೆದು ಗದ್ಯ, ಕಾದಂಬರಿ ಮುಂತಾದ ಸಾಹಿತ್ಯ ಪ್ರಕಾರಗಳು ಪ್ರಾರಂಭವಾದ ಕಾಲದಲ್ಲಿ. ಮಧ್ಯಕಾಲದಲ್ಲಿ ಗುಜರಾತಿ ಭಾಷೆಯಲ್ಲಿ ಕೆಲವು ಸಂಸ್ಕೃತ ನಾಟಕಗಳು ಬರೆಯಲ್ಪಟ್ಟವು ಮತ್ತು ಅವುಗಳಲ್ಲಿ ಕೆಲವು ನಾಟಕಗಳ ಪ್ರಯೋಗವೂ ನಡೆದಿತ್ತು. ಆದರೆ ಜನ ಸಾಮಾನ್ಯರ ನಾಟ್ಯ ಪ್ರಕಾರವಾಗಿ ನಿಂತುದು "ಭವಾಯಿ". ಮಲಬಾರಿನ ಕಥಕ್ಕಳಿ, ಮಹಾರಾಷ್ಟ್ರದ ಲಲಿತ ಮತ್ತು ದಶಾವತಾರ ನಟನೆ (ಸ್ವಾಂಗ್), ಉತ್ತರಪ್ರದೇಶದ ರಾಮಲೀಲೆ, ಬಂಗಾಳ ಮತ್ತು ಒರಿಸ್ಸಾದ ಜಾತ್ರಾ ಮತ್ತು ವ್ರಜ-ಮಥುರಾದ ರಾಸಲೀಲೆಗಳಂತೆ ಭವಾಯಿ ಗುಜರಾತಿನ ವಿಶಿಷ್ಟವಾದ ಜಾನಪದ ನಾಟ್ಯ . ಪೌರಾಣಿಕ ಪಾತ್ರಗಳ ಕಥೆ, ಮಾನ ಭಟ್ಟರ ಆಖ್ಯಾನ, ಭಾಟಚಾರಣರ ಜಾನಪದ ಕಥೆಗಳು, ಮೇಲಾ, ಭಜನ ಮಂಡಲಿಗಳು, ನೃತ್ಯೋತ್ಸವ, ಮರದ ಗೊಂಬೆಯಾಟ, ರಾಸ ಮತ್ತು ಗರಬೀಗಳಂತೆಯೇ ಭವಾಯಿ ಸಹ ಮಧ್ಯಯುಗದ ಜನ ಜೀವನವನ್ನು ರಂಜಿಸುವುದರಲ್ಲಿ ಹೆಚ್ಚಿನ ಪಾತ್ರವನ್ನು ವಹಿಸಿದೆ.

ಈ ರಂಗಭೂಮಿ ಹಳ್ಳಿಯ ಬಟ್ಟ ಬಯಲು ಪ್ರದೇಶದಲ್ಲಿ. ಪ್ರೇಕ್ಷಕರು ವರ್ತುಳಾಕಾರದಲ್ಲಿ ಕುಳಿತುಕೊಳ್ಳುತ್ತಾರೆ. ಅವರ ಮಧ್ಯೆ ಭವಾಯಿಯ 'ವೇಷ' (ಆಟ)ಗಳು ನಡೆಯುತ್ತವೆ. 'ವೇಷ' ಎಂಬುದು ಭವಾಯಿಯ ಒಂದು ಏಕ. ಪ್ರತಿಯೊಂದು ಭಾಗವೂ ಒಂದು ಪುಟ್ಟದಾದ ಸ್ವತಂತ್ರ ನಾಟಕ. ಒಂದು ರಾತ್ರಿಯಲ್ಲಿ ಅನೇಕ ವೇಷಗಳನ್ನು ಆಡುತ್ತಾರೆ. ಇವುಗಳಲ್ಲಿ ಕಥಾವಸ್ತು ಸರಳವಾಗಿದ್ದು ಕಾರ್ಯಕ್ರಮ ಮತ್ತು ಸಂಭಾಷಣೆಗಳು ಆಗಲೇ ಬರೆದವುಗಳಾಗಿರುತ್ತವೆ. ಮಧ್ಯೆ ಅಬೋಲಾಂ, ಹರಿಯಾಲಿ, ಭಾವಪೂರ್ಣ ಭಜನೆ ಮತ್ತು ನೀತಿ ಬೋಧಕ ಕವಿತೆಗಳು ಬರುತ್ತವೆ. ಜಾನಪದ ನೃತ್ಯಕ್ಕೆ ಇಲ್ಲಿ ಸಂಗೀತದಷ್ಟೇ ಮಹತ್ವ. ಪಾತ್ರಗಳ ವೇಷಭೂಷಣ, ಅಭಿನಯ ಮತ್ತು ಸಂಗೀತ ನೃತ್ಯಗಳಿಂದ, ಸಂಭಾಷಣೆಯಲ್ಲಿ ಬ್ರಾಹ್ಮಣ, ಯೋಗಿ, ವೈಶ್ಯ, ಫಕೀರ, ಮಿಯಾ, ರಾಜಪೂತ, ಸಿಪಾಹಿ ಮುಂತಾದವರ ಪಾತ್ರೋಚಿತ ಭಾಷೆಯಿಂದ ಹಾಗೂ ರಂಗಲಾ ಮತ್ತು ಜೂಠನ್ ಎಂದು ಕರೆಯಲಾಗುವ ವಿದೂಷಕರ ಹಾಸ್ಯದಿಂದ ಪ್ರೇಕ್ಷಕರಿಗೆ ಸಾಕಷ್ಟು ದೃಶ್ಯ ಹಾಗೂ ಶ್ರವ್ಯ ಮನರಂಜನೆಯುಂಟಾಗುತ್ತದೆ. ವೇಷದ ಕಥಾವಸ್ತು ಕೆಲ

ಅಂಶಗಳಲ್ಲಿ ಪೌರಾಣಿಕವಾಗಿದ್ದರೂ ಅದರಲ್ಲಿ ಸಾಮಾಜಿಕತೆಯ ಅಂಶ ಹೆಚ್ಚಾಗಿರುತ್ತಿದ್ದುದರಿಂದ ಸಾಮಾನ್ಯವಾಗಿ ಹಾಸ್ಯಕ್ಕಾಗಿ ಅತಿಶಯೋಕ್ತಿ ಪೂರ್ಣವಾದ ಸಮಾಜ ದರ್ಶನವನ್ನು ತರಲಾಗುತ್ತಿತ್ತು. ಸಾಮಾನ್ಯ ಜನರಿಗಾಗಿ ಸಾಮಾನ್ಯ ಜನರಿಂದಲೇ ರಚಿಸಲಾಗುತ್ತಿದ್ದ ಭವಾಯಿಯ ಈ ವೇಷಗಳಲ್ಲಿ ಹಾಸ್ಯ ಮತ್ತು ಶೃಂಗಾರ ಈ ಎರಡು ರಸಗಳು ಪ್ರಧಾನವಾಗಿದ್ದು ಗಾಂಭೀರ್ಯವಿಲ್ಲದ ಕಾರಣ ಇವು ಸ್ಥೂಲವಾಗಿ ಬಿಡುತ್ತಿದ್ದವು.

ಬ್ರಿಟಿಷರ ಕಾಲದಲ್ಲಿ ಆಂಗ್ಲ ಶಿಕ್ಷಣ ವ್ಯಾಪ್ತಗೊಳ್ಳುವ ಪ್ರಾರಂಭದಲ್ಲಿ ಶಿಕ್ಷಿತ ವ್ಯಕ್ತಿಗಳ ರಸವೃತ್ತಿ ಬದಲಾವಣೆ ಹೊಂದಿ ಹೆಚ್ಚು ಸುಸಂಸ್ಕೃತವಾದ ಕಾರಣ ಅವರಿಗೆ ಭವಾಯಿ ರುಚಿಸದೇ ಹೋಯಿತು. ಮುಂಬೈನ ಕಂಪನಿ ಸರಕಾರದ ಕೆಲಸಗಾರರ ಮನೋರಂಜನೆಗಾಗಿ ಇಂಗ್ಲೆಂಡಿನಿಂದ ಬಂದ ಮಂಡಲಿಗಳು ಪ್ರಸ್ತುತ ಪಡಿಸಿದ ನಾಟಕಗಳು ಇಲ್ಲಿನ ನಾಟಕಗಳಿಗೆ ಮಾರ್ಗದರ್ಶನ ಮಾಡಿಕೊಟ್ಟರೆ. ಆ ಮಂಡಳಿಗಳು ಸ್ಥಾಪಿಸಿದ ನಾಟಕ ಗೃಹಗಳು ನಮ್ಮ ನಾಟಕ ಗೃಹಗಳಿಗೆ ಮಾರ್ಗ ತೋರಿಸಿದವು. ಮುಂಬೈನಲ್ಲಿ ಇಂತಹ ನಾಟಕ ಗೃಹಗಳು ಸ್ಥಾಪಿತವಾದುದರಿಂದ ನಾಟಕಗಳ ಬೇಡಿಕೆ ಹೆಚ್ಚಾಯಿತು. ಎಲ್‌ಫಿನ್‌ಸ್ಟನ್ ಕಾಲೇಜಿನಲ್ಲಿ ನಾಟಕವಾಡುತ್ತಿದ್ದ ಪಾರಸೀ ಯುವಕರು ತಮ್ಮ ಶಿಕ್ಷಣ ಪೂರ್ತಿಗೊಂಡ ಮೇಲೂ ತಮ್ಮ ಅಭಿರುಚಿಯನ್ನು ಹಾಗೇ ಕಾಪಾಡಿಕೊಂಡು ಥಿಯೇಟ್ರಿಕಲ್ ಕ್ಲಬ್‌ಗಳನ್ನು ಸ್ಥಾಪಿಸ ತೊಡಗಿದರು. ಈ ಕ್ಲಬ್‌ಗಳು ಪ್ರಾರಂಭದಲ್ಲಿ ಇಂಗ್ಲೀಷು ತರುವಾಯ ಇಂಗ್ಲೀಷು ನಾಟಕಗಳನ್ನು ಪಾರಸೀಗೆ ರೂಪಾಂತರಿಸಿ ಆಡುತ್ತಿದ್ದರು. ಈ ಮಂಡಲಿಗಳಿಂದಲೇ ಮೊದಲು ಗುಜರಾತಿ ಆ ಮೇಲೆ ಉರ್ದು ನಾಟಕಗಳನ್ನು ಆಡುವ ವೃತ್ತಿ ನಾಟಕ ಮಂಡಳಿಗಳು ಹುಟ್ಟಿಕೊಂಡವು. ಇವುಗಳಲ್ಲಿ ಕೆಲವು ಭಾರತದಲ್ಲಿ ಸಂಚರಿಸಿ ನಾಟಕ ಹಾಗೂ ರಂಗಭೂಮಿಯ ಬೆಳವಣಿಗೆಗೆ ಸಹಾಯಕವಾದವು. ಇದಾದ ಮೇಲೆ ಉತ್ಸಾಹಿ ಗುಜರಾತಿ ಹಿಂದೂಗಳು ಈ ಹೊಸ ವೃತ್ತಿಯ ಕಡೆ ಆಕರ್ಷಿತರಾದ್ದರಿಂದ ಗುಜರಾತಿ ನಾಟಕಗಳನ್ನು ಪ್ರದರ್ಶಿಸುವ ನಾಟಕ ಮಂಡಲಿಗಳು ಹುಟ್ಟಿಕೊಂಡವು. ಈ ರೀತಿ ಗುಜರಾತಿ ರಂಗಭೂಮಿ ಪ್ರಾರಂಭವಾದ್ದರಿಂದ ಬೇಡಿಕೆ ಮತ್ತು ಪೂರೈಕೆಗಳ ನಿಯಮಕ್ಕನುಸಾರವಾಗಿ ನಾಟಕ ಬರೆಯುವ ಕಲೆಯೂ ವಿಕಾಸಗೊಂಡಿತು. ವಿಶ್ವವಿದ್ಯಾನಿಲಯದ ಶಿಕ್ಷಣದಿಂದಾಗಿ ಶೇಕ್ಸ್‌ಪಿಯರನ ಇಂಗ್ಲೀಷ್ ನಾಟಕಗಳ ಹಾಗೂ ಕಾಳಿದಾಸ, ಭವಭೂತಿ ಮುಂತಾದವರ ಸಂಸ್ಕೃತ ನಾಟಕಗಳಿಂದಾಗಿ ಶಿಕ್ಷಿತರಿಗೆ ಸಾಹಿತ್ಯದರ್ಶನದ ಅರಿವು ಉಂಟಾಗಿ ಅದು ಅವರಿಗೆ ಪ್ರೇರಣಾದಾಯಕವೂ ಮಾರ್ಗದರ್ಶಕವೂ ಆಯಿತು.

ಪ್ರಾರಂಭ ಕಾಲದಲ್ಲಿ ಗುಜರಾತಿ ನಾಟಕವು ಪರಂಪರೆಯಿಂದ ಬಂದ ಭವಾಯಿಯ ಪ್ರಭಾವದೊಂದಿಗೆ ಸಂಸ್ಕೃತ ಮತ್ತು ಇಂಗ್ಲೀಷ್ ನಾಟಕಗಳ ಪ್ರಭಾವವನ್ನು ಪಡೆದುಕೊಂಡು ತ್ರಿವೇಣಿ ಸಂಗಮವಾಯಿತು. ಭವಾಯಿಯ ಪ್ರಭಾವ 'ರಂಗಲಾ'ದಲ್ಲಿ ಮತ್ತು ವೃತ್ತಿ ರಂಗ ಭೂಮಿಯ ಮೇಲೆ ಆಡುವ 'ಕಾಮಿಕ್' ಎಂದು ಹೆಸರುವಾಸಿಯಾಗಿರುವ ಪ್ರಹಸನದಲ್ಲಿ ಹಾಗೂ ಅದರ ಹಾಸ್ಯರಸದಲ್ಲಿ ಕಾಣಿಸಿಕೊಳ್ಳುತ್ತದೆ. ಸಂಸ್ಕೃತ ನಾಟಕದ ಪ್ರಭಾವವನ್ನು ಅದರಲ್ಲಿ ಮಾನ್ಯವಾಗಿರುವ ಐದು ಅಥವಾ ಅದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿರುವ ಅಂಕಗಳು, ನಾಂದಿ-ಸೂತ್ರಧಾರರ ಪ್ರಸ್ತಾವನೆ, ಪ್ರವೇಶ್ವಕ, ವಿಷ್ಕಂಭಕ, ಗರ್ಭಾಂಕ, ಪತಾಕ, ಐತಾನಕ ಮುಂತಾದವುಗಳ ಯೋಜನೆ, ದೃಶ್ಯ ಸೂಚನೆ, ಸ್ವಗತ, ಮಧ್ಯೆಮಧ್ಯೆ ಬರುವ ಶ್ಲೋಕಾತ್ಮಕ

ಕವಿತಾ ಪದ್ಧತಿ, ನಾಟಕಗಳ ಸುಖಾಂತ್ಯ ಹಾಗೂ ಭರತವಾಕ್ಯದಲ್ಲಿ ಅದು ಸಮಾಪ್ತಗೊಳ್ಳುವುದರಲ್ಲಿ ಕಾಣಬಹುದು. ಗುಜರಾತಿ ನಾಟಕಗಳು ಗ್ರೀಕ್ ಅಥವಾ ಶೇಕ್ಸ್‌ಪಿಯರ್‌ನ ನಾಟಕಗಳಲ್ಲಿರುವಂತೆ ಪದ್ಯವನ್ನು ಪ್ರಯೋಗಿಸದೆ ಪದ್ಯ ಮಿಶ್ರಿತ ಗದ್ಯವನ್ನು ಅಳವಡಿಸಿಕೊಂಡಿತು. ಇದೂ ಸಂಸ್ಕೃತ ನಾಟಕಗಳ ಅನುಕರಣೆಯೇ ಆಯಿತು. ಆದರೆ ಪಾಶ್ಚಾತ್ಯ ನಾಟಕ ಪ್ರಕಾರಗಳ ಅನುಕರಣೆ ಸಂಸ್ಕೃತ ನಾಟಕಗಳಿಗಿಂತಲೂ ಹೆಚ್ಚು ಆಕರ್ಷಣೆ ಉಂಟುಮಾಡುತ್ತಿತ್ತು. ನಾಂದಿ-ಪ್ರಸ್ತಾವನೆ ಬಿಟ್ಟಿರುವುದು, ನಾಟಕದಲ್ಲಿ ಬಾಹ್ಯಾಂತರ ಸಂಘರ್ಷ ಪ್ರಧಾನವಾಗಿರುವುದು ಬಹುಶಃ ಈ ಕಾರಣದಿಂದಲೇ ಇರಬೇಕು. ಕಲಾಪೂರ್ಣ ಪ್ರಧಾನ ಪಾತ್ರವು ನಾಟ್ಯಸಾಧನೆಯ ವಿಷಯವಾಯಿತು. ಸಂಸ್ಕೃತ ನಾಟಕಗಳಲ್ಲಿ ನಿಷಿದ್ಧವಾದ 'ದುಃಖಾಂತ' ಗುಜರಾತಿ ನಾಟಕಗಳಲ್ಲಿ ಒಪ್ಪಿಗೆ ಪಡೆಯಿತು. ಇದು ಇಂಗ್ಲೀಷು ನಾಟಕಗಳಿಂದಾದ ಗಮನಾರ್ಹ ಪರಿಣಾಮ. 'ದುಃಖಾಂತ' ನಾಟಕ ವಿಧಾನ ಭಾರತೀಯ ಪರಂಪರೆಗೆ ಅಪರಿಚಿತವಾದದ್ದು, ಅಂದರೆ ಸಂಸ್ಕೃತ ನಾಟಕಗಳು ಜೀವನದಲ್ಲಿನ ಕರುಣ ತತ್ತ್ವವನ್ನು ಕಡೆಗಣಿಸಿರುತ್ತವೆ ಎಂದರ್ಥವಲ್ಲ. ಆದರೆ ಅಭಿಜ್ಞಾನ ಶಾಕುಂತಲಮ್ ಉತ್ತರರಾಮಚರಿತ ಮತ್ತು ಮೃಚ್ಛಕಟಿಕದಂತಹ ನಾಟಕಗಳು ಕರುಣರಸದ ಎಲ್ಲೆಯನ್ನೇ ಮೀರಿದ್ದರೂ ಸಹ ಕೊನೆಯಲ್ಲಿ ಸುಖಾಂತವಾಗಿಯೇ ಇವೆ. ಪಾಶ್ಚಾತ್ಯ ಪ್ರಭಾವದಿಂದಲೇ ಎಲ್ಲ ರೀತಿಯಲ್ಲೂ ಸಂಸ್ಕೃತ ನಾಟ್ಯಶೈಲಿಯಿಂದ ಕೂಡಿದ ಗುಜರಾತಿಯ ಶಿಷ್ಟ ನಾಟಕ 'ಕಾಂತಾ' ದುಃಖಾಂತವಾಯಿತು.

ಕ್ರಿ.ಶ. 1850 ರಿಂದ 1900ರವರೆಗೆ ಆಡ್ಪಾದ ನಾಟಕಗಳಲ್ಲಿ ಅನೇಕ ನವೋದಿತ ಲೇಖಕರ ನಾಟಕಗಳೊಂದಿಗೆ ದಲಪತ್ ರಾಮ್, ನರ್ಮದಾ ಶಂಕರ, ನವಲರಾಮ್, ರಣಛೋಡ್ ಭಾಯಿ, ಉದಯರಾಮ್, ಮಣಿಲಾಲ್ ದ್ವಿವೇದಿ, ಹರಿಲಾಲ್ ಧ್ರುವ್, ಭೀಮರಾವ್ ದಿವೇಟಿಯಾ ಮುಂತಾದ ಸಾಹಿತಿಗಳ ನಾಟಕಗಳೂ ಇವೆ. ಇದರಿಂದ ನಾಟಕ ರಚನೆ ಸಾಹಿತಿಗಳನ್ನು ಎಷ್ಟರ ಮಟ್ಟಿಗೆ ಆಕರ್ಷಿಸಿತ್ತು ಎಂಬುದು ಅರ್ಥವಾಗುತ್ತದೆ. ಗುಜರಾತಿ ನಾಟಕದ ಪ್ರಾರಂಭಕಾಲದ ಒಂದೆರಡು ಸೋಪಾನಗಳಲ್ಲಿ ಉಲ್ಲೇಖಾರ್ಹವಾದ ನಾಟಕಗಳೆಂದರೆ "ಮಿಥ್ಯಾಭಿರಾಮ್" (ದಲಪತ್ ರಾಮ್), "ಲಲಿತಾ ದುಃಖ ದರ್ಶಕ್" (ರಣಛೋಡ್ ಭಾಯಿ), "ವೀರಮತಿ" (ನವಲರಾಮ್), "ಪ್ರತಾಪನಾಟಕ್" (ಗಣಪತ್ ರಾಮ್), " ಕಾಂತಾ" ( ಮಣಿಲಾಲ್ ದ್ವಿವೇದಿ) ಮುಂತಾವುಗಳು. ಮೊದಲು ಉಲ್ಲೇಖಿಸಿದ ಭವಾಯಿ ಕಳೆದ ಶತಮಾನದ ಉತ್ತರಾರ್ಧದ ನಾಟಕ ಕಾಲದಲ್ಲಿ ಸಂಸ್ಕೃತ ಹಾಗೂ ಶೇಕ್ಸ್‌ಪಿಯರ್ ನಾಟಕಗಳ ಪ್ರಭಾವವನ್ನು ಹೆಚ್ಚುಕಡಿಮೆ ಸೂಚಿಸುತ್ತದೆ. ಈ ಕಾಲದಲ್ಲಿ ಬರೆಯಲ್ಪಟ್ಟ ಅಥವಾ ಪ್ರಯೋಗಿಸಲ್ಪಟ್ಟ ನಾಟಕಗಳು ಸಾಮಾನ್ಯವಾಗಿ ಪೌರಾಣಿಕ, ಐತಿಹಾಸಿಕ ಅಥವಾ ಧಾರ್ಮಿಕವಾದ ಕಥಾವಸ್ತುವನ್ನು ಹೊಂದಿರುತ್ತಿದ್ದವು. ಆ ಕಾಲದಲ್ಲಿ ಸಮಾಜ ಸುಧಾರಣೆಯಿಂದ ಉಂಟಾದ ನವಜಾಗೃತಿಯು ಯುಗಯುಗಧರ್ಮವಾಗಿದ್ದು ಅದೂ ಸಹ ಸಾಮಾಜಿಕ ನಾಟಕಗಳ ಕಥಾವಸ್ತುವಾಯಿತು. ನವೋದಿತ ಸ್ವದೇಶ ಪ್ರೇಮವೂ ಸಹ ಕೆಲವು ನಾಟಕಗಳಲ್ಲಿ ಮೂಡಿ ಬಂದಿತ್ತು.

ಸಾಹಿತಿಗಳಲ್ಲಿ ರಣಛೋಡ್ ಭಾಯಿ, ಕಾಬರ್‌ಜೀ ಮತ್ತು ಮಣಿಲಾಲ್ ಮುಂತಾದವರ ನಾಟಕಗಳು ರಂಗಮಂಚದ ಮೇಲೆ ಬಂದುವಾದರೂ ನಾಟಕಗಳನ್ನು ವೃತ್ತಿಯಾಗಿ

ಪರಿಗಣಿಸಿದ್ದ ಯಶಸ್ವಿ ರಂಗಮಂಚಗಳು ಸಾಹಿತಿಗಳ ಕೃಪೆಯನ್ನವಲಂಬಿಸಿ ಎಲ್ಲಿಯವರೆಗೆ ಬದುಕ ಬಲ್ಲವಾಗಿದ್ದವು? ಆದ್ದರಿಂದ ಹೆಚ್ಚುತ್ತಿದ್ದ ಬೇಡಿಕೆಗಳನ್ನು ಪೂರೈಸಲು ನಾಟಕ ಕರ್ತೃಗಳ ಒಂದು ಹೊಸ ವರ್ಗವೇ ಹುಟ್ಟಿಕೊಂಡಿತು. ಇವರಲ್ಲಿ ನತ್ಥೂರಾಮ್ ಶುಕ್ಲ, ಡಾಹ್ಯಾ ಭಾಯಿ ಧೋಲ್‌ಶಾಜಿ, ಫೂಲ್ ಚಂದ್ ಶಾಹ್, ಮೂಲಶಂಕರ ಮೂಲಾಣಿ, ನೃಸಿಂಹ ವಿದ್ಯಾಧರ್ ಮುಂತಾದವರ ರಚನೆಯಲ್ಲಿ ಕಂಡು ಬಂದ ಸಂಭಾಷಣೆ ಮತ್ತು ಗೀತೆಗಳಲ್ಲಿ ಸಾಹಿತ್ಯಕತೆ ಕಂಡು ಬಂದರೂ ಸಮಕಾಲೀನ ದರ್ಶಕರನ್ನು ತೃಪ್ತಿಗೊಳಿಸುವಲ್ಲಿ ಸಫಲವಾದ ನಾಟಕಗಳು ವೃತ್ತಿ ರಂಗಮಂಚವನ್ನೂ 'ಕವಿ' ಎಂದು ಪರಿಚಿತರಾದ ಅವುಗಳ ಲೇಖಕರನ್ನೂ ಹಾಗೂ ಪ್ರೇಕ್ಷಕರ ಅಭಿರುಚಿಯನ್ನೂ ಹೇಗೆ ಸೆರೆಹಿಡಿದವು ಎಂದರೆ ಕ್ರಮೇಣ ಸಾಹಿತಿಗಳ ನಾಟಕಗಳು ರಂಗ ಭೂಮಿಗೆ ಯೋಗ್ಯವಲ್ಲವೆಂಬ ಹಾಗೂ ರಂಗಭೂಮಿಯ ನಾಟಕಗಳು ಸಾಹಿತ್ಯಶ್ರೇಣಿಯಲ್ಲಿ ಬರಲು ಅಯೋಗ್ಯವಾದವುಗಳು ಎಂಬ ಪರಿಸ್ಥಿತಿ ಉಂಟಾಯಿತು. ರಂಗಭೂಮಿಯ ನಾಟಕಗಳು ಹಾಗೂ ಸಾಹಿತ್ಯಾತ್ಮಕ ನಾಟಕಗಳ ಮಧ್ಯೆ ಉಂಟಾದ ಈ ಬಿರುಕಿನಿಂದ ಎರಡಕ್ಕೂ ಹಾನಿ ಉಂಟಾಯಿತು. ಸಾಹಿತಿಗಳು ರಂಗ ತಂತ್ರವನ್ನು ಅರಿಯದ ಕಾರಣ ಅವರ ನಾಟಕಗಳು ರಂಗಭೂಮಿಗೆ ಯೋಗ್ಯವೆನಿಸಲಿಲ್ಲ. ಆದ್ದರಿಂದ ರಂಗಭೂಮಿ ಅವರ ಸಾಹಿತ್ಯದಿಂದ ವಂಚಿತಗೊಂಡು ಪ್ರಗತಿಯನ್ನು ಸಾಧಿಸಲಾರದೆ ಹೋಯಿತು. 1900ನಂತರ ಪರಿಸ್ಥಿತಿ ಕ್ರಮೇಣ ಹೀಗೆಯೇ ಮುಂದುವರೆಯಿತು. 1930ರ ತರುವಾಯ ಸಿನೆಮದಿಂದ ಇದಕ್ಕೆ ಭಾರಿ ಧಕ್ಕೆ ಬಂದಿತು. ಆದರೆ ಆ ವೇಳೆಗಾಗಲೇ ವೃತ್ತಿ ರಂಗಭೂಮಿ ಬಹಳ ಯಶಸ್ವೀ ಹಾಗೂ ಜನಪ್ರಿಯವಾಗಿ ಬಿಟ್ಟಿತ್ತು.

ಇಂತಹ ಪರಿಸ್ಥಿತಿಯಲ್ಲಿ ಸಾಹಿತಿಗಳನ್ನು ನಾಟಕ ರಚನೆಯ ಕಡೆ ಎಳೆಯಬಲ್ಲ ಪ್ರೋತ್ಸಾಹಕರು ಇಲ್ಲವಾದಂತಾಯ್ತು. ಆದರೂ ಸಾಹಿತ್ಯಕ್ಷೇತ್ರದಲ್ಲಿ ನಾಟಕ ಬರೆಯುವ ಪ್ರವೃತ್ತಿ ಪೂರ್ತಿಯಾಗಿ ಅಳಿಸಿ ಹೋಗಲಿಲ್ಲ. 1900 ಮತ್ತು 1920ರ ಮಧ್ಯೆ ಸಂಸ್ಕೃತ ಹಾಗೂ ಶೇಕ್ಸ್‌ಪಿಯರ್ ನಾಟಕ ಸ್ವರೂಪಗಳ ಮಿಶ್ರಿತ ಮಧುರ ಪರಿಪಾಕದಂತಿದ್ದ "ರಾಯಿನೋ ಪರ್ವತ್" ( ರಮಣ ಭಾಯಿ ನೀಲಕಂಠ) ಡಾಲನ್ ಶೈಲಿ ಎಂದು ರಚನಾಕಾರರು ಪ್ರಚಲತ ಗೊಳಿಸಿದ ರಾಗಾತ್ಮಕ ಗದ್ಯಶೈಲಿಯಲ್ಲಿ ಬರೆದ ಶೃಂಗಾರಮಯ ಭಾವಪ್ರಧಾನ ಕಾವ್ಯಕಲ್ಪ ನಾಟಕ "ಇಂದು ಕುಮಾರ-1" ಮತ್ತು "ಜಯಾಲಿನೆ ಜಯಂತ್" (ಕವಿ ನ್ಹಾನಾ ಲಾಲ್ ) ಎಂಬ ನಾಟಕಗಳು ಗುಜರಾತಿಯಲ್ಲಿ ಬರೆಯಲ್ಪಟ್ಟವು. ಇದಲ್ಲದೆ ಕವಿ ನ್ಹಾನಾಲಾಲರು ಇದೇ ರೀತಿಯ 10-12 ನಾಟಕಗಳನ್ನು ರಚಿಸಿದ್ದಾರೆ. 1920ರಿಂದ 1930 ರವರೆಗಿನ ಹತ್ತು ವರ್ಷಗಳಲ್ಲಿ ಗುಜರಾತಿನ ಸಮರ್ಥ ಕವಿಗಳಾದ ಕಾಂತ್ ಮತ್ತು ಬಲವಂತರಾಮ್ ಠಾಕುರ್‌ರವರ ನಾಟಕಗಳು ಪ್ರಕಟವಾದವು. ಇವರಲ್ಲಿ ಕಾಂತ್‌ರವರ ದೃಷ್ಟಿ ವಿಶೇಷವಾಗಿ ವ್ಯಾವಸಾಯಿಕ ರಂಗಮಂಚದ ಕಡೆಗಿತ್ತು. ಆದರೆ ಠಾಕುರ್‌ರವರು ತಮ್ಮ "ಉಗತೀ ಜುವಾನೀ" ನಾಟಕದಲ್ಲಿ ವಾಸ್ತವಿಕತೆ ಹಾಗೂ ಆಧನಿಕತೆಯ ಕಡೆ ಹೊರಟಿರುವುದು ವೇದ್ಯವಾಗುತ್ತದೆ. ಆಧುನಿಕತೆಯ ಕಡೆ ಒಲವು ಹೆಚ್ಚುತ್ತಲೇ ಹೋಯಿತು. ಗಲಾಟೆ ಆರ್ಭಟಗಳಿಂದ ಕೂಡಿದ ಕಥೆ, ಟ್ಯಾಬ್ಲೋದಂತಿರುವ ದೃಶ್ಯಗಳು, ಮುಖ್ಯ ಕಥಾವಸ್ತುವಿಗೆ ಸಂಬಂಧವಿಲ್ಲದೆ ಆದರೆ ನಗಿಸುವುದಕ್ಕೆ ಮಾತ್ರ ಸೇರಿಸುವ ಕಾಮಿಕ್ ಅಭಿನಯ ಮತ್ತು ಸಂಭಾಷಣೆಯಲ್ಲಿ ಕಂಡುಬರುವ ಅತಿಯಾದ ನಾಟಕೀಯತೆ, ಯಾವುದೇ

ಸಂದರ್ಭದಲ್ಲಾದರೂ ಗೊತ್ತು ಗುರಿಯಿಲ್ಲದೆ ತೂರಿಸಲ್ಪಡುವ ಕಾವ್ಯ ಹೀನವಾದ ಗೀತೆಗಳು, ದರ್ಶಕರಿಂದ ' ಒನ್ಸ್ ಮೋರ್' ಎಂದು ಕೂಗಿಸಿಕೊಳ್ಳುವ ಉಪಾಯಗಳು - ಈ ತರಹ ರೂಢಿಸಿಕೊಂಡು ಬಂದ ಮನೋರಂಜನೆಯ ಸಾಮಗ್ರಿಗಳನ್ನು ಹೊಂದಿದ ವ್ಯಾವಸಾಯಿಕ ನಾಟಕಗಳು ಸುರುಚಿ ಸಂಪನ್ನರಾದವರಲ್ಲಿ ಅರುಚಿನ್ನೇ ಹುಟ್ಟಿಸಿದವು. ಅಲ್ಲದೆ ಸಂಸ್ಕೃತ ಹಾಗೂ ಶೇಕ್ಸ್‌ಪಿಯರ್ ನಾಟಕಗಳು ಪ್ರೇರಣಾದಾಯಕವಾಗಲಾರದೇ ಹೋದವು. ಕಳೆದ ಶತಮಾನದಲ್ಲಿ ಯೂರೋಪಿನಲ್ಲಿ ಇಬ್ಸನ್‌ನಿಂದ ಯಶಸ್ವಿಯಾದ, ಯಥಾರ್ಥದಿಂದ ಕೂಡಿದ ಸಮಸ್ಯಾಪ್ರಧಾನ ಗದ್ಯ ನಾಟಕಗಳು ಹಾಗೂ ಅವುಗಳ ತರುವಾಯ ವಿಕಾಸಹೊಂದಿದ ಏಕಾಂಕ ನಾಟಕ ಪ್ರಕಾರಗಳು ಉತ್ಸಾಹಿಯಾದ ಯುವ ಪೀಳಿಗೆಯನ್ನು ಆಕರ್ಷಿಸಿರುವುದು ಸ್ವಾಭಾವಿಕವೇ ಆಗಿದೆ. ಬಟ್ಟೂಭಾಯಿ ಉಮರ್‌ವಾಡಿಯಾ, ಪ್ರಾಣ ಜೀವನ್ ಪಾಠಕ್ ಮತ್ತು ಯಶವಂತ ಪಂಡ್ಯಾರವರು ಈ ಪ್ರಭಾವವನ್ನು ಎತ್ತಿ ತೋರಿಸಿದರು. ಇವರುಗಳಿಂದಲೇ ಏಕಾಂಕ ನಾಟಕಗಳ ರಚನೆ ಪ್ರಾರಂಭವಾಯಿತು.

ಇದೇ ವೇಳೆಯ ಸುಮಾರು ಗುಜರಾತಿನಲ್ಲಿ ಹವ್ಯಾಸಿ ರಂಗಮಂಚವೂ ಹುಟ್ಟಿಕೊಂಡಿತು. ನಾಟ್ಯರಸಿಕರೂ, ಅಭಿನಯನಿಪುಣರೂ ಹಾಗೂ ಸುರುಚಿ ಸಂಪನ್ನರೂ ಆದ ಯುವಕ ಯುವತಿಯರು ಸಾಹಿತ್ಯಕ ನಾಟಕಗಳನ್ನು ರಂಗಮಂಚದ ಮೇಲೆ ತರುವ ಮೂಲಕ ಇದನ್ನು ಪ್ರಾರಂಭಿಸಿದರು. ಇದರಲ್ಲಿ ಚಂದ್ರವದನ ಮೆಹತಾರವರ ಪಾತ್ರ ದೊಡ್ಡದು. ಅವರು ತಮ್ಮ ಮಿತ್ರರೊಂದಿಗೆ ನಾಟಕಗಳಲ್ಲಿ ಅಭಿನಯಿಸಿದ್ದಲ್ಲದೆ ಅನೇಕ ನಾಟಕಗಳನ್ನೂ ಬರೆದರು. ಚಂದ್ರವದನ ಮೆಹತಾರವರಂತೆಯೇ ಅಥವಾ ಇನ್ನೂ ಹೆಚ್ಚಿನ ಕೊಡುಗೆಯನ್ನಿತ್ತವರು ಕನ್ಹೈಯಾ ಲಾಲ್ ಮುಂಶೀ ಅವರು. ಇಬ್ಬರೂ ವಿನೋದ ಪ್ರಧಾನ, ಸುಖಾಂತ, ದುಃಖಾಂತ ಮುಂತಾದ ಎಲ್ಲಾ ಬಗೆಯ ನಾಟಕಗಳನ್ನೂ ರಚಿಸಿ ರಂಗ ಭೂಮಿಯ ಮೇಲೆ ಪ್ರಸ್ತುತ ಪಡಿಸಿದರು. ಸಾಹಿತ್ಯಪೂರ್ಣ ಮತ್ತು ರಂಗ ಭೂಮಿಯ ನಾಟಕಗಳ ಮಧ್ಯೆ ಇದ್ದ ಬಿರುಕನ್ನು ಮುಚ್ಚುವುದರಲ್ಲಿ ಇವರಿಬ್ಬರ ಪಾತ್ರ ಬಹಳ ಹಿರಿದಾದುದು. ಇಬ್ಬರ ನಾಟಕಗಳಲ್ಲೂ ರಂಗಭೂಮಿಗೆ ಸಂಬಂಧಿಸಿದ ಧುರೀಣತೆ ಸಾಕಷ್ಟು ಇದ್ದುದರಿಂದಲೇ ಇದು ಸಾಧ್ಯವಾಯಿತು. 1930ರ ತರುವಾಯ ವ್ಯಾವಸಾಯಿಕ ರಂಗಮಂಚ ದುರ್ದಶೆಗೀಡಾದಾಗ ಈ ಹವ್ಯಾಸಿ ರಂಗಮಂಚದ ಚಟುವಟಿಕೆಗಳು ಕ್ರಮೇಣ ಹೆಚ್ಚುತ್ತಾ ಹೋದವು. ಶಾಲಾ ಕಾಲೇಜುಗಳ ವಾರ್ಷಿಕೋತ್ಸವಗಳಲ್ಲಿ ನಾಟಕಗಳು ಪ್ರಮುಖ ಭಾಗವನ್ನು ವಹಿಸುತ್ತಿದ್ದುದರಿಂದಲೂ ಮತ್ತು ಬೊಂಬಾಯಿ, ಅಹಮದಾಬಾದ್, ಸೂರತ್, ಬರೋಡ ಮುಂತಾದ ನಗರಗಳಲ್ಲಿ ಜನ್ಮತಾಳಿದ ಸುರುಚಿಸಂಪನ್ನವಾದ ಹವ್ಯಾಸಿ ನಾಟಕ ಮಂಡಲಿಗಳ ಚಟುವಟಿಕೆಗಳಿಂದಲೂ ಇದರ ವಿಕಾಸ ಹೆಚ್ಚುತ್ತಾ ಹೋಯಿತು. ಇದರಿಂದ ವ್ಯಾವಸಾಯಿಕ ರಂಗಮಂಚದ ದುರವಸ್ಥೆಯಿಂದುಂಟಾದ ಶೂನ್ಯಾಕಾಶವನ್ನು ತುಂಬುವುದರ ಜೊತೆಗೆ ನಾಟಕ ರಚನೆ, ಪ್ರಕಾಶನ ಮತ್ತು ಅಭಿನಯಕ್ಕೂ ಅನುಕೂಲಕರವಾದ ಪರಿಸ್ಥಿತಿ ಉಂಟಾಯಿತು. ಕೊನೆಯ 35 ವರ್ಷಗಳಲ್ಲಿ ಲೋಕಶಿಕ್ಷಣ ಹಾಗೂ ಜನಮನರಂಜನೆಯ ಮಹತ್ವಪೂರ್ಣ ಮಾಧ್ಯಮವಾದ ರೇಡಿಯೋ ಸಹ ನಾಟಕ ಕ್ಷೇತ್ರದಲ್ಲಿ ಹವ್ಯಾಸಿ ರಂಗಮಂಚದಷ್ಟೇ ಉತ್ಸಾಹವರ್ಧಕವಾಯಿತು. ಇದರ ಪರಿಣಾಮವಾಗಿ ಅನೇಕ ಪ್ರಸಿದ್ಧ ಸಾಹಿತಿಗಳಿಂದ ಮತ್ತು ಉತ್ಸಾಹಿ ನವೋದಿತ ಲೇಖಕರಿಂದ ಅನ್ಯಭಾಷೆಗಳಿಂದ ರೂಪಾಂತರಗೊಂಡ ಕೃತಿಗಳೂ ಸ್ವಂತ ರಚನೆಗಳೂ - ದೊಡ್ಡ ಮತ್ತು ಏಕಾಂಕ ನಾಟಕಗಳು

ಪ್ರಾಪ್ತವಾಗತೊಡಗಿದವು. ಇವುಗಳಲ್ಲಿ ಕೆಲವು ರಂಗಭೂಮಿಯ ಮೇಲೆ ಅಭಿನಯಿಸಲ್ಪಟ್ಟವು. ಇದರಿಂದಾಗಿ ಗುಜರಾತಿ ನಾಟಕ ಸಾಹಿತ್ಯ ನಿಃಸತ್ವವಾಗದೆ ಉಳಿಯಿತು.

ಆದರೆ ಗುಜರಾತಿ ಕಾವ್ಯ, ಕಾದಂಬರಿ ಮತ್ತು ಸಣ್ಣ ಕಥೆಗಳಲ್ಲಿ ಕಾಣುವ ಸತ್ವ ಹಾಗೂ ವಿಪುಲತೆ ನಾಟಕ ಸಾಹಿತ್ಯದಲ್ಲಿ ಕಾಣಬರುವುದಿಲ್ಲ. ಅನೇಕ ಸೋದರ ಭಾಷೆಗಳಲ್ಲೂ ಇದೇ ಸ್ಥಿತಿ ತಾನೆ ಇರುವುದು! ನಾಟಕದ ಸಾಹಿತ್ಯ-ಸ್ವರೂಪವೇ ಇದಕ್ಕೆ ಕಾರಣ ಎನ್ನಬಹುದು. ಈ ಸಾಹಿತ್ಯ ಪ್ರಕಾರ ರಂಗಮಂಚದ ಮೇಲೆ ಅಭಿನಯಿಸಲ್ಪಡುವಂತಹದು. ರಂಗಮಂದಿರದಲ್ಲಿ ಉಂಟಾಗುವ ಸಾಮೂಹಿಕ ಆನಂದದಲ್ಲೇ ಇದರ ಸಾರ್ಥಕತೆ ಅಡಗಿದೆ. ನಾಟಕಕಾರನಲ್ಲಿ ಸಾಹಿತ್ಯಕಲೆ ಒಂದೇ ಇದ್ದರೆ ಸಾಲದು. ಅವನಲ್ಲಿ ತೀವ್ರವಾದ ನಾಟ್ಯ ದೃಷ್ಟಿ ಅಂದರೆ ಅಭಿನಯ ದೃಷ್ಟಿ, ಮಂಚದೃಷ್ಟಿ ಮತ್ತು ರಂಗತಂತ್ರಗಳ ತಿಳುವಳಿಕೆ ಸಹ ಸಾಕಷ್ಟು ಪ್ರಮಾಣದಲ್ಲಿ ಇರಲೇ ಬೇಕು. ಅಲ್ಲದೆ ನಾಟಕ ಕರ್ತೃವಾದವನು ಯಾವಾಗಲೂ ನೇಪಥ್ಯದಲ್ಲಿದ್ದು ಪಾತ್ರಗಳು ಮತ್ತು ನಾಟ್ಯಪೂರ್ಣ ಪರಿಸ್ಥಿತಿಗಳನ್ನು ಹಿಡಿತದಲ್ಲಿಟ್ಟುಕೊಂಡು ಅತ್ಯಂತ ವಿದಗ್ಧತೆಯಿಂದ ಯಥಾರ್ಥಕ್ಕೆ ಸಾಕಾರ ರೂಪವನ್ನು ಕೊಡಬೇಕಾಗುತ್ತದೆ. ಒಳ್ಳೆಯ ನಾಟಕವನ್ನು ಬರೆಯುವುದು ಕಠಿಣ ಕಾರ್ಯ. ಅದಕ್ಕೆ ಬೇಕಾದುದು ಉತ್ಕಟ ಸಾಧನೆ ಹಾಗೂ ವಿಪುಲತೆ. ಅಲ್ಲದೆ ಸ್ಫೂರ್ತಿಯಿಂದ ಕೂಡಿದ ರಂಗಮಂಚದ ನೆರವು ಇಲ್ಲದೆ ಹೋದರೆ ನಾಟಕ ಸಂಪೂರ್ಣವಾಗಿ ಅರಳಲಾರದು.

ಮೊದಲೇ ಹೇಳಿದಂತೆ ಗುಜರಾತಿಯಲ್ಲಿ ಏಕಾಂಕ ನಾಟಕಗಳ ಪ್ರಾರಂಭ 1921 ಮತ್ತು 1930ರ ಮಧ್ಯೆ ಅಂದರೆ ಬಂಗಾಳಿ, ಮರಾಠಿ, ಹಿಂದಿ ಮುಂತಾದ ಸೋದರ ಭಾಷೆಗಳಲ್ಲಿ ಅವುಗಳ ಅವತರಣವಾಗುವುದಕ್ಕೆ 10 ವರ್ಷ ಮುಂಚೆಯೇ ಆಗಿತ್ತು. ಹಿಂದೆ ಹವ್ಯಾಸಿ ರಂಗಮಂಚ ಹಾಗೂ ರೇಡಿಯೋದಿಂದ ಬೆಂಬಲ ದೊರೆಯಿತು ಎಂದು ಹೇಳಲಾಗಿದೆ. ಈ ಬೆಂಬಲ 1930 ರ ನಂತರ ಬಂದ ಏಕಾಂಕಗಳಿಗೆ ದೊರೆಯಿತೇ ಹೊರತು ಪ್ರಾರಂಭ ಕಾಲದ ಏಕಾಂಕಗಳಿಗಲ್ಲ. ಪ್ರಾರಂಭಿಕ ಪ್ರಯೋಗಗಳ ಶ್ರೇಯಸ್ಸು ಅವುಗಳ ಲೇಖಕರ ಸೃಜನಾತ್ಮಕತೆಗೆ ದೊರೆಯಬೇಕು. ಆಸ್ಕರ್ ವೈಲ್ಡ್, ಗಾಲ್ಸ್‌ವರ್ದಿ, ಷಾ ಮುಂತಾದವರ ನಾಟಕಗಳನ್ನು ಓದಿದ ಪರಿಣಾಮವಾಗಿ ಅದೇ ಪ್ರಕಾರದ ನಾಟಕಗಳನ್ನು ರಚಿಸಿದರು ಎಂದು ಹೇಳುತ್ತಾರೆ. ಗುಜರಾತಿ ನಾಟಕದ ಮೊದಲ ಪ್ರಯೋಜಕರಾದ ಬಟ್ಟೂಭಾಯಿ ಉಮರವಾಡಿಯಾರವರ ದೃಷ್ಟಿಯಲ್ಲಿ ಗುಜರಾತಿ ಏಕಾಂಕ ಸಂಸ್ಕೃತದ ಏಕಾಂಕ ಪ್ರಕಾರವೂ ಅಲ್ಲ, ಭವಾಯಿಯೂ ಅಲ್ಲ. ಅದು ಪಾಶ್ಚಾತ್ಯ ಏಕಾಂಕಗಳಿಗೆ ಸಂಬಂಧಿಸಿದೆ. ಮಧ್ಯಕಾಲೀನ ಯೂರೋಪಿನ ಏಸುಲೀಲಾ ಮತ್ತು ನೀತಿ ಬೋಧಕಗಳಾದ ಮಿಸ್ಟ್ರೀ, ಮಿರೆಕಲ್ ಮತ್ತು ಮೊರೇಲಿಟಿ ಎಂಬ ಹೆಸರಿನಿಂದ ಪರಿಚಿತವಾದ ಉಪರೂಪಕ ಇಂಟರ್‌ಲ್ಯೂಡ್ ಎಂಬ ಅಂತರ್ನಾಟಕ ಮತ್ತು ಮುಖ್ಯ ನಾಟಕಗಳ ಮೊದಲು ಅಥವಾ ಆಮೇಲೆ ಪ್ರಸ್ತುತ ಪಡಿಸಲ್ಪಡುತ್ತಿದ್ದ ಪಟೋದ್ಘಾಟಕ (ಕರ್ಟನ್ ರೈಸರ್) ಉಪಸಂಹಾರ (ಆಫ್ಟರ್ ಪೀಸ್) ಎಂಬ ಲಘು ನಾಟಕಗಳು ಕ್ರಮೇಣ ತಮ್ಮ ಸ್ವತಂತ್ರವಾದ ವ್ಯಕ್ತಿತ್ವವನ್ನು ಸಂಪಾದಿಸಿಕೊಂಡವು. ಅವುಗಳ ವಂಶೀಕರಾದವುಗಳೇ ಪಾಶ್ಚಾತ್ಯ ಏಕಾಂಕ ನಾಟಕಗಳು. ಆಯರ್ಲೆಂಡಿನ ಸಾಹಿತ್ಯಕತೆಯ ಗಾಳಿ ಬೀಸಿ ಇವಕ್ಕೆ ನೆರವುಂಟಾಯಿತು. ಅದರಿಂದ ಪೋಷಿತವಾಗಿ ವಿಕಸಿತಗೊಂಡ ಈ ಲಘು ನಾಟಕ-ಪ್ರಕಾರಕ್ಕೆ 'ಲಿಟಲ್' ಮತ್ತು 'ಆರ್ಟ್ಸ್' ಥಿಯೇಟರುಗಳ ಚಟುವಟಿಕೆಗಳಿಂದ ಜನಾದರಣೆ ಹಾಗೂ

ಸಾಹಿತ್ಯಕ್ಷೇತ್ರದಲ್ಲಿ ಮನ್ನಣೆ ದೊರೆಯಿತು. ಬಟ್ಟೂ ಭಾಯಿ ಉಮರವಾಡಿಯಾ ರವರಂತಹ ಏಕಾಂಕ ನಾಟಕಕಾರರು ಏಕಾಂಕಕ್ಕೆ ಒಂದೇ ಅಂಕದ ಮಿತಿಯನ್ನು ಒಪ್ಪಿಕೊಂಡರಾದರೂ ಅದನ್ನು ಸಂದರ್ಭಕ್ಕೆ ತಕ್ಕಂತೆ 4-5 ದೃಶ್ಯಗಳಲ್ಲಿ ಹಂಚಿದರು. ಪಿಕ್ಚರ್ ಫ್ರೇಮ್ ಮಂಚದ ವಾಸ್ತವಿಕತೆಯ ಆಗ್ರಹದಿಂದಾಗಿ ರಂಗಮಂಚದ ಮೇಲೆ ವಾಸ್ತವಿಕ ದೃಶ್ಯ ಜೋಡಣೆಯ ಅವಶ್ಯಕತೆ ಉಂಟಾಯಿತು. ಈ ವಾಸ್ತವಿಕ ದೃಶ್ಯ ಜೋಡಣೆಗೆ ಹೆಚ್ಚು ಖರ್ಚು ತಗಲುತ್ತಿದ್ದರಿಂದ ಆದಷ್ಟು ಕಡಿಮೆ ದೃಶ್ಯಗಳಲ್ಲಿ ನಾಟಕವನ್ನು ಸಮಾಪ್ತಗೊಳಿಸುವುದು ಅನಿವಾರ್ಯವಾಯಿತು. ಅದರೊಂದಿಗೆ ನಾಟಕದಲ್ಲಿ ಕಲಾ ವಿಧಾನವೂ ಅಗ್ಗವಾಗತೊಡಗಿತು. ಮೂರು ಅಂಕದ ನಾಟಕಗಳಿಗೆ ಎರಡು ಅಥವಾ ಮೂರು ಸೆಟ್‌ಗಳು ಸಾಕಾದರೆ ಏಕಾಂಕಗಳಿಗೆ ಒಂದೇ ಸೆಟ್ ಅಂದರೆ ಒಂದೇ ಸ್ಥಳ ಮತ್ತು ಒಂದೇ ಸಮಯದ ವಿಧಾನ ನಾಟಕದ ಪ್ರಯೋಗವನ್ನು ಸರಳಗೊಳಿಸುವುದಲ್ಲದೆ ಏಕಾಂಕದ ಲಾಘವ ಹಾಗೂ ಚೆನ್ನಾಗಿ ಹೆಣೆದ ನಾಟ್ಯಬಂಧಕ್ಕೆ ಸಹಕಾರಿಯಾಗಿರುತ್ತದೆ ಎಂದು ತಿಳಿಯಲಾಯಿತು. ಈ ಕಾರಣದಿದಲೇ ಪಾಶ್ಚಾತ್ಯ ಏಕಾಂಕಗಳು ಏಕಸ್ಥಳಾಂಕಗಳಾಗ ತೊಡಗಿದವು. ಅಂದರೆ ಸ್ಥಾನ, ಸಮಯ ಮತ್ತು ಕಾರ್ಯ ಇವುಗಳ "ತ್ರಯ" ಉಂಟಾಯಿತು. ಪ್ರಾರಂಭ ಕಾಲದ ಗುಜರಾತಿ ಏಕಾಂಕ ನಾಟಕಕಾರರ ದೃಷ್ಟಿ ಇಬ್ಸನ್‌ನ ನಾಟಕಗಳ ಮೇಲಿದ್ದು ಅವರು ಅಂತಹ ಅಂಕಗಳನ್ನು ದೃಶ್ಯವನ್ನಾಗಿಸಿ ಲಘು ರೂಪವನ್ನು ಕೊಂಡಬೇಕೆಂದು ಪ್ರಯತ್ನ ಪಟ್ಟರಾದರೂ 1930ರ ತರುವಾಯ ಬಂದ ಏಕಾಂಕ ನಾಟಕಕಾರರು ಪಶ್ಚಿಮದ ಏಕ ಸ್ಥಳಾಂಕ ನಾಟಕಗಳ ಮೆರಿಯಟ್ ಮತ್ತು ಮಾಯಾರ್ಗೋ ಎಂಬ ವಾರ್ಷಿಕ ಸಂಗ್ರಹಗಳ ಹಾಗೂ ಮೂಲ ಪುಸ್ತಕಗಳ ಪಠನದಿಂದ ಪ್ರಭಾವಿತರಾಗಿ ಏಕಾಂಕಗಳಿಗೆ ಅದೇ ರೂಪ ಕೊಡತೊಡಗಿದರು. ಅಗತ್ಯವಾದ ಪಾತ್ರಗಳನ್ನು ಮಾತ್ರ ಆದಷ್ಟು ಕಡಿಮೆ ಸಂಖ್ಯೆಯಲ್ಲಿ ಉಪಯೋಗಿಸಿಕೊಳ್ಳುವುದು, ವಾತಾವರಣವನ್ನು ಸೃಷ್ಟಿಸುವಲ್ಲಿ ಕಾರ್ಯಸಾಧಕ ಸಂಭಾಷಣೆಯನ್ನು ಬರೆಯುವ ಚಾತುರ್ಯ ಮತ್ತು ಕೃತಿಗಳಲ್ಲಿ ಸಮಗ್ರತೆಯನ್ನು ರೂಪಿಸುವ ಲಾಘವ, ಕಲಾಕೌಶಲ -ಇವೆಲ್ಲವನ್ನು 1930ರ ತರುವಾಯ ಬಂದ ಗುಜರಾತಿ ಏಕಾಂಕ ನಾಟಕಕಾರರು ಹೇಗೆ ತಮ್ಮ ಏಕಾಂಕಗಳಿಗೆ ಅಳವಡಿಸಿ ಕೊಂಡಿದ್ದಾರೆ ಎಂಬುದಕ್ಕೆ ಈ ಸಂಗ್ರಹದಲ್ಲಿ ಕೊಟ್ಟಿರುವ ನಾಟಕಗಳೇ ಸಾಕ್ಷಿಯಾಗಿವೆ. ರೇಡಿಯೋ ಮತ್ತು ವಿದ್ಯುತ್ತಿನ ಸೌಲಭ್ಯಗಳಿಂದ ವಿಕಸಿತಗೊಂಡ ಪ್ರಕಾಶ ಸಂಯೋಜನೆಯ ಕಲಾತ್ಮಕತೆ ಒಂದೇ ದೃಶ್ಯದಲ್ಲಿ ಎಲ್ಲ ಲೀಲೆಗಳನ್ನೂ ಮುಗಿಸಿ ಬಿಡಬೇಕೆಂಬ ಸ್ವೇಚ್ಛಾ ಬಂಧನವನ್ನು ಕಿತ್ತೊಗೆದು 'ಆಕ್ಷನ್'ನ ಲಾಭ ಪಡೆಯುವಂತೆ ಮಾಡಿತು. ಇದು ಏಕಾಂಕಗಳ ನಾಟಕ-ಸ್ವರೂಪದಿಂದ ಪಡೆದ ವಿಕಾಸದ ಅಂತಿಮ ಸೋಪಾನ. ನಾಟ್ಯ ವಸ್ತುವಿನ 'ವರ್ತಮಾನ'ವನ್ನು 'ಭೂತ' ದೊಂದಿಗೆ ಜೋಡಿಸಲು ಸಿನೆಮಾ ಮತ್ತು ರೇಡಿಯೋದಲ್ಲಿ ಬಳಸುವಂತಹ ಪೂರ್ವದೀಪ್ತಿ (ಫ್ಲಾಷ್ ಬ್ಯಾಕ್) ತಂತ್ರವನ್ನು ಬಳಸಿ ವಿಭಿನ್ನ ದೇಶಕಾಲವನ್ನು ಪ್ರತಿಬಿಂಬಿಸುವ ಅಗತ್ಯ, ಭಿನ್ನ ದೃಷ್ಟಿಯನ್ನುಂಟುಮಾಡದ ರಂಗಮಂಚ, ಪ್ರಕಾಶ ಸಂಯೋಜನೆ, ಮತ್ತು ಅತ್ಯಾಧುನಿಕ ಸಲಕರಣೆಗಳ ಸಹಾಯ ಇವೆಲ್ಲವುಗಳನ್ನು ಇಂದಿನ ಏಕಾಂಕ ನಾಟಕ ಲೇಖಕರು ಹೇಗೆ ಪ್ರಯೋಜನ ಪಡೆದುಕೊಳ್ಳುತ್ತಾರೆ ಎಂಬುದನ್ನು ಈ ಸಂಗ್ರಹದಲ್ಲಿನ ಮೂರು ನಾಟಕಗಳಲ್ಲಲ್ಲಿ ಕಾಣಬಹುದು.

ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ಇವರು ದೇಶದ ವಿರಾಟ ಜನತೆಯಲ್ಲಿ

ಭಾವೈಕ್ಯತೆಯನ್ನುಂಟು ಮಾಡುವ ಉದ್ದೇಶದಿಂದ ಪುಸ್ತಕಗಳನ್ನು ಆದಾನ-ಪ್ರದಾನ ಮಾಡಿಕೊಂಡು ಪ್ರಕಟಿಸುವ ಪ್ರಯತ್ನ ಮಾಡುತ್ತಿದ್ದಾರಷ್ಟೇ. ಈ ಯೋಜನೆಯ ಪ್ರಕಾರ ಅವರು ನಿಗದಿಗೊಳಿಸಿರುವ ಪುಟಸಂಖ್ಯೆಯಲ್ಲಿ ಕೆಲವು ಹಳೆಯ ಹಾಗೂ ಕೆಲವು ಹೊಸ ಲೇಖಕರ ರಚನೆಯನ್ನು ಈ ಸಂಗ್ರಹದಲ್ಲಿ ಕೊಟ್ಟಿದ್ದೇವೆ. ಈ ಸಂಗ್ರಹವನ್ನು ತಯಾರಿಸುವಾಗ ಸಾಹಿತ್ಯದ ಇತರ ಪ್ರಕಾರಗಳಿಗಿಂತ ವಯಸಿನಲ್ಲಿ ಕಿರಿದಾದ ಏಕಾಂಕ ಸ್ವರೂಪವನ್ನು ಗುಜರಾತಿನ ಸೃಜನಾತ್ಮಕತೆ ಹೇಗೆ ಸ್ವೀಕರಿಸಿತು, ಗುಜರಾತಿನ ಏಕಾಂಕ ನಾಟಕಗಳು ಎಷ್ಟು ವಿಕಾಸ ಹೊಂದಿವೆ, ಸಮೃದ್ಧವಾಗಿವೆ ಎಂಬುದನ್ನು ಎತ್ತಿತೋರಿಸುವವರಷ್ಟೇ ಅಲ್ಲದೆ ವಿಭಿನ್ನ ಸಮಯ ಸಂದರ್ಭಗಳ ಭೂಮಿಕೆಯಲ್ಲಿ ಗುಜರಾತಿನ ಸ್ಪಷ್ಟ ಚಿತ್ರವೂ ಮೂಡಿಬರಲಿ ಎಂಬುದನ್ನು ಗಮನದಲ್ಲಿಟ್ಟುಕೊಳ್ಳಲಾಗಿದೆ. ಮೊದಲಲ್ಲಿ ಕಿಂವದಂತಿ ಮತ್ತು ಇತಿಹಾಸದ ಅಸ್ಪಷ್ಟ ಸಂಧಿಕಾಲದ ಇಬ್ಬರು ತೇಜಸ್ವಿನಿ ಗುರ್ಜರ ರಮಣಿಯರ ವೀರವ್ಯಕ್ತಿತ್ವವನ್ನು ನಾಟಕವಸ್ತುವಾಗುಳ್ಳ ಒಂದು ಕೃತಿಯನ್ನು ಕೊಡಲಾಗಿದೆ. "ಮೈನಾ ಗೂಜರೀ" (ಮೈನಾ ಗೌಳಿತಿ)ಯ ನಾಟಕವನ್ನು ರಚನಾಕಾರರು ಹಳೆಯ ಜಾನಪದ ಗರಬಾದ ಕಥಾವಸ್ತುವಿನೊಂದಿಗೆ ತಮ್ಮ ಕಲ್ಪನೆಯನ್ನೂ ಸೇರಿಸಿ ಬರೆದಿದ್ದಾರೆ. ಇದಾದ ಮೇಲೆ ಬಂದಿರುವ ನಾಟಕ 40 ವರ್ಷಗಳ ಹಿಂದೆ ಒಬ್ಬ ಕುಶಲ ಯುವಕ ನಾಟಕಕಾರನಿಂದ ರಚಿತವಾದ ಹಾಗೂ ಈಗಿನ ಏಕಾಂಕ ಸ್ವರೂಪಕ್ಕೆ ಹತ್ತಿರ ಬರುವಂತಿರುವ ಏಕಾಂಕ " ಝೂಕಡನೂ ಮೋತಿ"(ಇಬ್ಬನಿಯ ಮಂಜು). ಇದು ಒಳಗೊಂಡಿರುವುದು ಶಿವಮೋಹಿನಿಯರ ಪೌರಾಣಿಕ ಕಥಾ ವಸ್ತುವಾದರೂ ಇದಕ್ಕೆ ಅರ್ವಾಚೀನ ರೂಪ ಕೊಡಲಾಗಿದೆ. 'ಹಂಸಾ' ನಾಟಕದಿಂದ ಪಾಠಕರು ಆಧುನಿಕ ಯುಗವನ್ನು ಪ್ರವೇಶಿಸುತ್ತಾರೆ. ಇದರಲ್ಲಿ ದಾಂಪತ್ಯದ ಒಂದು ಸಮಸ್ಯೆಯನ್ನು ಮನೋವೈಜ್ಞಾನಿಕತೆ ಎಂಬ ರಸತೃಪ್ತಿ ಉಂಟುಮಾಡುತ್ತಾ ಏಕಾಂಕ ಮಾಧ್ಯಮದಲ್ಲಿ ಬಹಳ ಆಹ್ಲಾದಕರವಾಗಿ ನಿರೂಪಿಸಲಾಗಿದೆ. ಈ ನಾಟಕದ ಹಾಗೂ ಮೈನಾ ಗೌಳಿತಿಯ 5-5 ದೃಶ್ಯಗಳು ಗುಜರಾತಿಯ ಪ್ರಾರಂಭ ಕಾಲೀನ ಏಕಾಂಕಗಳಿಗೆ ನಿದರ್ಶನವಾಗಿವೆ. 'ಹಂಸಾ' ನಂತರ ಇರುವುದು 'ಪಡಘಾ' ( ಮಾರ್ದನಿ). ಇದರ ಲೇಖಕರು ಪ್ರಥಮ ಪ್ರಯತ್ನದಲ್ಲೇ ಏಕಾಂಕ ಕಲೆಯಲ್ಲಿ ಗಮನಾರ್ಹ ಸಿದ್ಧಿಗಳಿಸಿದ ಉಮಾಶಂಕರ ಜೋಷಿಯವರು. ಇದರಲ್ಲೂ ದಂಪತಿಗಳಿದ್ದಾರೆ ಆದರೆ ಅವರು ಹಿಂದುಳಿದು ಅವರ ಉದ್ಗಾರಗಳ ಮತ್ತು ವ್ಯವಹಾರಗಳ ಪ್ರತಿಧ್ವನಿ ಅಥವಾ ಮಾರ್ದನಿ ಮಕ್ಕಳ ನಿರ್ದೋಷವಾದ ಆಟದಲ್ಲಿ ಕೇಳಿ ಬರುತ್ತದೆ. ಜೀವನ ನಿರ್ವಾಹಕ್ಕಾಗಿ ಬೊಂಬಾಯಿಗೆ ಬಂದು ಅಲ್ಲಿನ ಚಾಳುಗಳಲ್ಲಿ ವಾಸವಾಗಿರುವ ಮಧ್ಯಮ ವರ್ಗದ ಜನಗಳ ಜೀವನ, ಆ ನಗರ ಜೀವನದ ಜೊತೆ ಮಕ್ಕಳ ಆಟದ ಮೂಲಕ ಅವರು ಹಿಂದೆ ವಾಸಿಸುತ್ತಿದ್ದ ಊರಿನ ಜೀವನದ ಮಾರ್ದನಿ ಕೇಳಿ ಬರುತ್ತದೆ. ಪರಿಸರದ ಜನಜೀವನ ಹಾಗೂ ಮನೋವೈಜ್ಞಾನಿಕತೆ ಈ ನಾಟಕವನ್ನು ಸಮಾಜದರ್ಶಿಯಾಗಿ ಮಾಡುತ್ತದೆ. ಇದೇ ನಾಟಕದ ವೈಶಿಷ್ಟ್ಯ. ಇದರ ತರುವಾಯ ಬರುವ ನಾಲ್ಕು ಏಕಾಂಕಗಳಲ್ಲಿ ವಾಸ್ತವಿಕತೆಯನ್ನು ಅರಸುತ್ತಾ ನಡೆದಿರುವ ಸಮಾಜದರ್ಶನದೊಂದಿಗೆ ಅದರ ಎಲ್ಲಾ ಶುಭಾಶುಭ ಪಕ್ಷಗಳ ಹಾಗೂ ಮಾನವೀಯ ವೃತ್ತಿ-ವ್ಯವಹಾರಗಳ ಸಹಜ ಹಾಗೂ ಕಲಾತ್ಮಕ ನಿರೂಪಣೆ ಕಂಡು ಬರುತ್ತದೆ. ಇವುಗಳ ಇನ್ನೊಂದು ವೈಶಿಷ್ಟ್ಯವೆಂದರೆ ಪಾತ್ರಗಳ ಸಹಜ ಬಣ್ಣ ಹಾಗೂ ಭಾಷೆ. ಈ ಸಹಜ ಸಂಭಾಷಣೆಯಿಂದಾಗಿ ಪಾತ್ರಗಳು ಜೀವಂತವಾಗಿ ಕಂಡು ಬಂದು ನಾಟಕಕ್ಕೆ ಬೇಕಾದ

ವಾತಾವರಣ ಒದಗಿ ಬಂದಿದೆ. ಇದಾದಮೇಲೆ ಬರುವ ನಾಟಕ ಜಯಂತೀ ದಲಾಲ್‌ರವರು ಬರೆದಿದ್ದು. ಈ ನಾಟಕ ರಂಗಭೂಮಿ ಮತ್ತು ಅಂಧಕಾರ- ಪ್ರಕಾಶ ಸಂಯೋಜನೆಯನ್ನುಪಯೋಗಿಸಿಕೊಂಡು ಭೂಮಿಯ ಹಾಗೂ ಚಿತ್ರಗುಪ್ತನ ಆಸ್ಥಾನದ ದೃಶ್ಯಗಳನ್ನು ಒಂದಾದಮೇಲೆ ಒಂದರಂತೆ ಪಕ್ಕಪಕ್ಕದಲ್ಲೇ ಜೋಡಿಸಿರುವ ಮತ್ತು ಸಮಾಜದಲ್ಲಿ ಸೇವಾಭಾವ ಹಾಗೂ ಔದಾರ್ಯದಿಂದ ಕೂಡಿರುವ ಗೃಹಸ್ಥರು ಎನಿಸಿಕೊಂಡ ಉಚ್ಚವರ್ಗದ ಹಿಂದೆ ಅಡಗಿರುವ ವಾಸ್ತವಿಕತೆಯನ್ನು ಬಯಲಿಗೆಳೆಯುವಂತಹುದು. ಬೈಬಲಿನಲ್ಲಿ ಶ್ರೀಮಂತರನ್ನು ಕುರಿತು ಏಸುವು ಹೇಳಿದ ಒಂದು ಉಕ್ತಿಯ ಆಧಾರದ ಮೇಲೆ ಈ ನಾಟಕಕ್ಕೆ ನಾಮಕರಣ " ಸೋಇನೂ ನಾಕು" (ಸೂಜಿಯ ಮೊನೆ). ಸ್ವರಾಜ್ಯಕ್ಕಾಗಿ 1930 ರಿಂದ 1942 ರವರೆಗೆ ನಡೆಸಿದ ಚಳುವಳಿಗಳಲ್ಲಿ ಹಾಗೂ ಸ್ವಾತಂತ್ರ್ಯ ನಂತರ ವಿಭಜನೆಯಿಂದಾಗಿ ನಮ್ಮ ಜನತೆ ಎಷ್ಟೊಂದು ಯಾತನೆಗಳನ್ನು ಅನುಭವಿಸ ಬೇಕಾಯಿತು ಹಾಗೂ ಈ ಸಂದರ್ಭದಲ್ಲಿ ಬಾಲಕರು ಮತ್ತು ಯುವಕರು ಹೇಗೆ ತಮ್ಮ ಪರಾಕ್ರಮವನ್ನು ತೋರಿದರು ಎಂಬುದನ್ನು ವಸ್ತುವಾಗಿಟ್ಟುಕೊಂಡ ಮೂರು ನಾಟಕಗಳನ್ನು ಕೊನೆಯಲ್ಲಿ ಕೊಡಲಾಗಿದೆ. ಈ ಮೂರು ನಾಟಕಗಳು ತಮ್ಮ ಶೀರ್ಷಿಕೆಗಳನ್ನು ಹೇಗೆ ಸಾರ್ಥಕ ಮಾಡಿಕೊಂಡಿವೆ ಎಂಬುದನ್ನು ಬುದ್ಧಿವಂತರಾದ ಪಾಠಕರೇ ತಿಳಿಯಬಹುದಾಗಿದೆ. ಕೊನೆಯ ರಚನೆಯಲ್ಲಿ ಪಾತ್ರ ಮತ್ತು ಸ್ಥಾನ ಬಂಗಾಳಕ್ಕೆ ಸಂಬಂಧಿಸಿವೆಯಾದರೂ ಅದರ ಕರ್ತೃ ಕಲಕತ್ತೆಯಲ್ಲಿ ವಾಸಿಸುವ ಗುಜರಾತಿಯೇ ಆಗಿದ್ದಾರೆ.

ವಾಸ್ತವವಾಗಿ ಈ ಸಂಗ್ರಹದ ಹಿನ್ನೆಲೆಯಲ್ಲಿ ಗುಜರಾತ್ ಕಾಣಿಸಿಕೊಳ್ಳುತ್ತದೆಯಾದರೂ ಗುಜರಾತ್ ಪ್ರದೇಶ ದೇಶದ ಅನ್ಯ ಪ್ರದೇಶಗಳಿಗಿಂತ ಭಿನ್ನವಾದುದೇನೂ ಅಲ್ಲ. ಈ ಸಂಗ್ರಹದಲ್ಲಿನ ಸಾಮಗ್ರಿ ಭಾಷಾಂತರದ ಮೂಲಕ ಸೋದರ ಭಾಷೆಗಳ ಪ್ರದೇಶವನ್ನು ತಲುಪಿದಾಗ ಅಲ್ಲಿನ ಓದುಗರಿಗೆ ಇಲ್ಲಿನ ಜನ ಜೀವನ ಹಾಗೂ ಜನಗಳ ಬಗ್ಗೆ ಆತ್ಮೀಯತೆ ಅಥವಾ ಆತ್ಮೈಕ್ಯತೆಯ ಭಾವನೆ ಉಂಟಾಗುತ್ತದೆ ಎಂಬುದರಲ್ಲಿ ಸಂದೇಹವಿಲ್ಲ. ಈ ಸಂಗ್ರಹದಲ್ಲಿ ಬಂದಿರುವ ನಾಟಕಗಳ ಕಲಾತ್ಮಕತೆಯನ್ನು ಇತರ ಭಾಷೆಗೆ ಹೋಲಿಸಿ ನೋಡಬಹುದು. ಅನ್ಯ ಭಾಷೆಗಳ ಸಹೃದಯರಾದ ಓದುಗರೇ ಈ ಸಂಗ್ರಹದಲ್ಲಿ ಕಲಾತ್ಮಕತೆ ಎಷ್ಟರ ಮಟ್ಟಿಗಿದೆಯೆಂದು ನಿರ್ಣಯಿಸಿ ಹೇಳಬೇಕು. ಈ ಪರಸ್ಪರ ಹೋಲಿಕೆಯಿಂದ ಸಾಹಿತ್ಯದ ಉಭಯ ಪಕ್ಷಗಳಿಗೂ ಲಾಭ. ನನ್ನನ್ನು ಈ ಕಾರ್ಯದಲ್ಲಿ 'ನಿಮಿತ್ತ'ವಾಗಿ ಮಾಡಿದ ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ ಇವರಿಗೆ ನಾನು ಆಭಾರಿಯಾಗಿದ್ದೇನೆ.

[illegible] ರಾವಲ್

## ಪಾತ್ರವರ್ಗ

ಮೈನಾ

ರೂಪಾ

ಅಮಥಿ ಕಾಕಿ

ಮೈನಾಳ ಅತ್ತೆ

ಶೋಭಾ

ಇತರ ಸ್ತ್ರೀಯರು

ಬಾದಶಹ

ಹೀರಾ

ಯುವಕ ಮತ್ತು ಬ್ರಾಹ್ಮಣ

ಗ್ರಾಮಸ್ಥರು

## ದೃಶ್ಯ-1

**ಬಾವಿ ಕಟ್ಟೆಯ ಬಳಿ ಹೆಂಗಳೆಯರ ಗುಂಪು ನಿಂತಿದೆ. ಕೆಲವರು ಬರುತ್ತಿದ್ದಾರೆ. ಕೆಲವರು ಹೋಗುತ್ತಿದ್ದಾರೆ. ಕೆಲವರು ತಮ್ಮ ಸರದಿ ಕಾಯುತ್ತಿದ್ದಾರೆ. ಗುಂಪಿನಲ್ಲಿ ಹೆಚ್ಚು ಮಂದಿ ಯುವತಿಯರೇ ಇದ್ದಾರೆ.**

**ಹತ್ತಿರದಲ್ಲಿ ತುಂಬಾ ಹೂ ಬಿಟ್ಟಿರುವ ಮಲ್ಲಿಗೆ ಗಿಡವಿದೆ. ರೂಪಾ ಹೂ ಕುಯ್ಯುತ್ತಾ, ಹಾಡು ಗುನುಗುನಿಸುತ್ತಿದ್ದಾಳೆ.**

**ಹಾಡು** ಬಾವಿ ಕಟ್ಟೆ ಮೇಲೆ ...............
ಅರಳಿವೆ ಮಲ್ಲಿಗೆ ಹೂವು- ಓ ನನ್ನರಸ
ಮಲ್ಲಿಗೆ ಹೂ ಬಾಗಿ ನಿಂತಿದೆ ಸ್ವೀಕರಿಸೋ ನನ್ನರಸ

**ಅಮಥಿ ಕಾಕಿ** :-ಎಯ್ ರೂಪಾ, ಯಾವ ಪ್ರಿಯತಮನಿಗಾಗಿ ಹೂವು ಆರಿಸ್ತಾ ಇದ್ದೀಯೇ?

**ರೂಪಾ** : - ಕಾಕೀ, ನಿನಗೆ ವಯಸ್ಸಾದರೂ ತಮಾಷೆ ಬುದ್ಧಿ ಹೋಗಿಲ್ಲ.

**ಅ. ಕಾಕೀ** :- ನಮ್ಮ ಕಾಲದಲ್ಲಿ ನಡಿತಾ ಇದ್ದದ್ದನ್ನ ಈಗಿನ ಕವಿ ಕೂಡ ಯೋಚಿಸಕ್ಕಾಗೊಲ್ಲ. ಈಗಿನ ಕಾಲದವಳಾದ ನಿಂಗೇನು ಗೊತ್ತಾಗುತ್ತೆ.

**ರೂಪಾ** : - ಕಾಕೀ, ನೀನು ಚಿಕ್ಕವಳಿದ್ದಾಗ ಯಾವ ಪ್ರಿಯತಮನಿಗಾಗಿ ಹೂ ಆರಿಸ್ತಿದ್ದೀ?

**ಅ. ಕಾಕೀ**: - ನಿಂಗೇನೇ ಅದ್ರಿಂದ? ನಾವೇನ್ಮಾಡ್ತಿದ್ವೋ ಮಾಡ್ತಿದ್ವಿ. ನಮ್ಮ ಕಾಲಾನೇ ಬೇರೆ ಇತ್ತು. ಸರಿ ಅಲ್ಲೋಡು, ಜಾಗ ಖಾಲಿ ಆಯ್ತು. ಹೋಗಿ ನೀರು ತುಂಬ್ಕೋ ಹಾಗೇ ನಂಗೂ ಕೊಂಚ, ರಾತ್ರಿಯಿಂದ ಸೊಂಟ ಹಿಡ್ಕೊಂಡ್ಬಿಟ್ಟಿದೆ. ನೀರು ಎಳೆಯಕ್ಕೆ ಆಗೊಲ್ಲ.

**[ರೂಪಾ ಕೊಡ ತೆಗೆದುಕೊಂಡು ಬಾವಿಯ ಬಳಿ ಹೋಗುತ್ತಾಳೆ. ಶೋಭಾ ನೀರು ತುಂಬಿಕೊಂಡು ಕಾಕಿಯ ಹತ್ತಿರ ಬರುತ್ತಾಳೆ]**

**ಅ. ಕಾಕೀ** : - ಶೋಭಾ, ಕೊಂಚ ಹೊತ್ತು ಕೂತ್ಕೊ. ರೂಪಾ ಬರಲಿ.

**ಶೋಭಾ** : - ಕಾಕಿ, ನಾನು ಬೇಗ ಹೋಗ್ಬೇಕು. ಮಗು ಏನಾದ್ರೂ ಅಳ್ತಿತ್ತು ಅಂದ್ರೇ, ನಮ್ಮತ್ತೆ ನನ್ನ ತರಾಟೆಗೆ ತೊಗೊಳ್ತಾಳೆ.

**ಅ. ಕಾಕೀ** : - ಕೂತ್ಕೊಳ್ಳೆ ಸಾಕು. ನಾನು ನಿಲ್ಲಿಸಿಕೊಂಡಿದ್ದೆ ಅಂತ ನಿಮ್ಮತ್ತೆಗೆ ಹೇಳ್ತೀನಿ.

**[ಶೋಭಾ ಹೂ ಆರಿಸುತ್ತಾಳೆ ಜೊತೆಗೆ ಹಾಡು ಹೇಳುತ್ತಾಳೆ.]**

**ಹಾಡು** ಬಟ್ಟಲೊಳಗೆ ಕೇಸರಿ ನೆನಸಿದೆ- ಓ ನನ್ನರಸ
ಬಣ್ಣ ಬಣ್ಣದಲ್ಲಿ ಸೇರಿ ಹೋಯಿತು ಓ ನನ್ನರಸ.

**ಅ. ಕಾಕೀ** : - ಏನೇ ಶೋಭಾ. ಈಗಿನ ಕಾಲದ ಹುಡುಗೀರ್ ಬರೀ ಪ್ರಿಯತಮವೆಂದೇ ಹಾಡು ಹೇಳ್ತಿರಾ. ಯಾವಾಗ ನೋಡಿದ್ರೂ ಪ್ರಿಯತಮನನ್ನೇ [illegible] ಇರ್ತಿ, ಮದುವೆ ಮಾಡ್ಕೊಂಡು ಸಂತೋಷವಾಗಿಲ್ವೇನೆ?

**ಶೋಭಾ** : - **(ನಗುತ್ತಾ)** ಕಾಕೀ, ಮದುವೆಯಾದೋನು ಪ್ರಿಯತಮಾ ಆಗೋಲ್ವೇ? ನಿಮ್ಮ ಕಾಲದಲ್ಲಿ ಗಂಡನೇ ಬೇರೆ, ಪ್ರಿಯತಮಾನೇ ಬೇರೆ ಇರ್ತಿದ್ರು. ಅಲ್ವಾ ಕಾಕೀ?

**ಅ. ಕಾಕೀ** : - ನಡಿಯೇ ಕಂಡಿದ್ದೇನೆ. ನಂದೂ ನಿಮ್ಮತ್ತೆದೂ ಎರಡೂ ಬೇರೆ. ಬೇರೆ ಕಾಲನೇನ? ನಿಮ್ಮ ಅತ್ತೆ ಹತ್ರ ಅಂದು ನೋಡು.

**ಶೋಭಾ** : - **(ಹೂ ಕಾಕೀ ಮುಂದೆ ಸುರಿಯುತ್ತಾ)** ಕಾಕೀ, ನಂದೂ ಮತ್ತು ರೂಪಾದು ಇಬ್ಬರ ಹಾರಗಳನ್ನೂ ನಿನ್ನ ಕತ್ತಿಗೆ ಹಾಕ್ತೀನಿ. ನೀನೇ ನಮ್ಮ ಪ್ರಿಯತಮ. **(ರೂಪಾ ಬರುತ್ತಾಳೆ)** ರೂಪಾ, ಕಾಕೀ ನಮ್ಮ ಪ್ರಿಯತಮ.

**ಅ. ಕಾಕೀ** : - ಸಾಕು ಸುಮ್ನಿರೇ. ನೋಡು ಆ ಕೊಡ ಕೊಂಚ ಹೀಗೆ ತಂದು ಕೊಡು.

**ರೂಪಾ** : - ಶೋಭಾ, ಎಲ್ಲಾ ಹೆಂಗಸರೂ ಏನು ಮಾತಾಡ್ಕೊತ್ತಿದ್ದಾರೆ ಗೊತ್ತಾ?

**ಶೋಭಾ** : - ಏನು?

**ರೂಪಾ** : - ದಿಲ್ಲೀ ಬಾದಶಾಹನ ಡೇರಾ ನಮ್ಮ ಊರಿನ ತೋಟದ ಪಕ್ಕದಲ್ಲಿದೆಯಂತೆ.

**ಶೋಭಾ** : - ಹಾಗಾದ್ರೇ ನಮ್ಮೂರನ್ನು ನೋಡಲು ಬರ್‍ತಾನೆ.

**ರೂಪಾ** : - ಇಲ್ಲ ಕಣೇ, ಕಾಬುಲ್‌ನಿಂದ ವಾಪಸ್ಸು ಬರ್‍ತಾ ಇಲ್ಲಿ ಡೇರಾ ಹಾಕಿದ್ದಾನಂತೆ.

**ಅ. ಕಾಕೀ** : - ಶೋಭಾ, ಈಗ ಹೊತ್ತಾಗಿಲ್ವಾ? ನಿಮ್ಮತ್ತೆ ಏನೂ ಅನ್ನೊಲ್ವಾ?

**[ಶೋಭಾ ಕಾಕೀ ಕೊಡ ತೆಗೆದುಕೊಂಡು ಬರ್‍ತಾಳೆ. ಮೂವರೂ ಒಟ್ಟಿಗೆ ಹೊರಡುತ್ತಾರೆ]**

**ರೂಪಾ** : - ಕಾಕೀ, ಬಾದಶಾನ ಡೇರ ನೋಡಿದ್ದೀಯಾ?

**ಅ. ಕಾಕೀ** : - ನಾನು ಬೇಕಾದಷ್ಟು ನೋಡಿದ್ದೀನಿ. ಆದರೇ ನಮ್ಮ ಕಾಲನೇ ಬೇರೆ ಇತ್ತು.

**ಶೋಭಾ** : - **(ಹೆದರಿಕೆಯಿಂದ)** ಕಾಕೀ, ನಾವು ನೋಡಬಹುದ?

**ಅ. ಕಾಕೀ** : - ಇಲ್ಲ, ನಮ್ಮ ದಿನಗಳೇ ಬೇರೆ. ಅದರಲ್ಲಿ ಆ..........

**ರೂಪಾ** : - **(ಧೈರ್ಯವಾಗಿ)** ನಾಚ್ಕೆ ಬಿಟ್ಬಿಟ್ರೆ ನಾವೂ ಹೋಗಬಲ್ವಿ. ಆದ್ರೇ ನಮಗೆ ಬೇಕಾಗಿಲ್ಲ.

**[ಎದುರಿನಿಂದ ಮೂರು ನಾಲ್ಕು ಜನ ಬರುತ್ತಾರೆ. ಅವರಲ್ಲಿ ಸುಂದರಿಯಾದ ಮೈನಾ ಇದ್ದಾಳೆ. ಎದರು ಸಂದಿಸಿದಾಗ ರೂಪಾ ಮೈನಾಳನ್ನು ಮಾತನಾಡಿಸುತ್ತಾಳೆ. ಎಲ್ಲಾರೂ ನಿಲ್ಲುತ್ತಾರೆ.]**

**ರೂಪಾ** : - ಮೈನಾ, ಬಾದಶಾಹನ ಡೇರೆ ಬಂದಿದೆಯಂತೆ.

**ಮೈನಾ** : - ಹೌದು, ನಿನಗ್ಯಾರು ಹೇಳಿದ್ರು?

**ರೂಪಾ** : - ಬಾವಿ ಕಟ್ಟೆ ಹತ್ರ ಹೆಂಗಸ್ರೆಲ್ಲಾ ಮಾತಾಡ್ತಿದ್ರು. ನಿಂಗೇ ಯಾರು ಹೇಳಿದ್ರು?

**ಮೈನಾ** : - ನನ್ನ ಮೈದುನ, ಕುದುರೆ ಸವಾರಿಗೆ ಹೋಗಿದ್ದಾಗ ಸುದ್ದಿ ತಂದ.

**ರೂಪಾ** : - ನೀನು ನೋಡಕ್ಕೋಗಲ್ವಾ?

**ಅ. ಕಾಕೀ** : - ಈಗಿನ ಕಾಲದ ನಿಮಗೆ ಆಗೋಲ್ಲ. ನಮ್ಮ ದಿನಗಳೇ ಬೇರೆ ಇತ್ತು.

**ಮೈನಾ** : - ಯಾಕಾಗೋಲ್ಲ. ನಾ ನೋಡೋಕೆ ಹೋಗ್ತೀನಿ. **(ಜೊತೆ ಹೆಂಗಸರಿಗೆ)** ಏನೇ ಸುಖಾ, ನೀವು ಕೂಡ ಹೋಗಕ್ಕೆ ಯೋಚಿಸ್ತಿದ್ದೀರಿ ಅಲ್ವಾ? ಅಲ್ವೇನೆ ದುಲ್ಹಾ?

**ರೂಪಾ, ಶೋಭಾ** : - ಹಾಗಾದ್ರೇ ನಾವೂ ಬರ್‍ತೀವಿ. ನಡೀರೆ ಹೋಗೋಣ.

**ಅ. ಕಾಕೀ** : - ಅಲ್ರೇ, ಕೊಡ ರಸ್ತೆ ಮಧ್ಯೆ ಇಟ್ಟು ಹೋಗ್ತಿಲ್ಲ ತಾನೇ. ಆ ಡೇರೆಲಿ ನಿಮ್ಮದೇನು ಕೆಲಸವಿಲ್ಲ. ಆದರೇ............

**ಶೋಭಾ** : - ಅಧರಲ್ಲೇನಿದೆ? ನಾವು ನೋಡೋಕೆ ಹೋಗ್ತಿದ್ದೀವಿ ಅಷ್ಟೇ.

**ಅ. ಕಾಕೀ** : - **(ಸಿಡುಕಿ)** ನೀವು ಹೋಗಿ ನೋಡೋಣ. ಹೇಗೆ ಹೋಗ್ತೀರೋ ನೋಡೋಣ.

ನಿಮ್ಮ ಅತ್ತೆಯರ ಹತ್ತಿರ ಹೇಳ್ತೀನಿ.

**ಶೋಭಾ** : - ಕಾಕೀ, ನೀನು ನಿನ್ನ ದಾರಿ ಹಿಡಿ. ಲೇ ಮೈನಾ ನೀನು ಹೋಗಿ ನೀರು ತುಂಬ್ಕೊಂಡು ಬಾ. ನಾವಿಲ್ಲೇ ಇರ್ತೀವಿ.

**ಅ. ಕಾಕೀ** :- ಈ ಹುಡುಗಿಯರಿಗೆ ತಮ್ಮ ವಯಸ್ಸಿನ ಯೋಚನೇನು ಇದ್ದಂಗಿಲ್ಲ. ಇದರಲ್ಲಿ ಅಣುಕಿಸುವಂಥಾದ್ದು ಏನಿದೆ? ನಿಮ್ಮ ಗಂಡಂದಿರು ಕಳಿಸೋದಾದ್ರೆ ಹೋಗಿ. ಬೇಕಾದ್ರೆ ಬಾದಶಾಹನಿಗೆ ಹೆಂಡಂದಿರಾಗಿ, ನಂಗೇನಾಗ್ಬೇಕು.

**ಮೈನಾ** : - ಕಾಕೀ, ನೀನು ಬೇಡ ಅಂದ್ರೆ ನಾವು ಹೋಗಲ್ಲ. ಆದ್ರೆ ಕಾಕೀ ಆವತ್ತು ನೀನು, ನಮ್ಮತ್ತೆ ಇಬ್ರು ಸೇರಿ ಡೇರೆ ನ್ನೋಡೋದಕ್ಕೆ ಹೋಗಲಿಲ್ವಾ. ಆವತ್ತು ನೀನೇ ನನಗೆ ಹೇಳ್ದಿ. ನಾನು ನೀರು ತುಂಬಿಸಿಕೊಂಡು ನಿಮ್ಮನೆಗೆ ಬರ್ತೀನಿ. ಆಗ ಹೇಗೆ ಹೇಳ್ತಿ ನೋಡೋಣ.

**(ಶೋಭಾ, ರೂಪಾರಿಗೆ ಕಣ್ಣು ಸನ್ನೆ ಮಾಡಿ)** ಹೋಗ್ರೆ ಕಾಕೀನ ಮನೆಗೆ ತಲುಪಿಸಿ ಬಿಡಿ.

**(ಗುಂಪು ಹೊರಡುತ್ತದೆ. ಮೈನಾ ಹಾಡು ಹೇಳುತ್ತಾಳೆ, ಕೆಲವರು ನರ್ತಿಸುತ್ತಾರೆ)**

**ಹಾಡು: -** ತುರಗವನೇರಿ ಕಾಬುಲಿನಿಂದ ಬಂದಿಹನೋ ದೀವಾನ
ಅಥವಾ ದಿಲ್ಲಿಯ ಸುಲ್ತಾನಾ
ತೋಟದ ನಡುವೆ ಸೇನೆಯನಿಳಿಸಿ
ಪಾಳೆಯ ಹಿಡಿದವನೋ \\ ಓ ಸಖಿ
ನೋಡಿ ಬರುವೆನೂ ನಾನು\\

## ದೃಶ್ಯ - 2

**(ಮೈನಾ ಮತ್ತು ಆವಳ ಸಖಿಯರು ಡೇರೆ ನೋಡಲು ಹೊರಟಿದ್ದಾರೆ. ಬೆಳಗಿನ ಒಂಬತ್ತು ಗಂಟೆಯ ಸಮಯ. ಗೊಲ್ಲತಿಯರು ಮೊಸರು ಮಾರಲು ಹೊರಟಿದ್ದಾರೆ. ಎಲ್ಲಾರ ತಲೆಯ ಮೇಲು ಮೊಸರಿನ ಮಡಿಕೆ ಇದೆ. ಮೈನಾಳ ತಲೆಯ ಮೇಲೆ ಕೆಂಪು ಮಡಿಕೆ ಇದೆ. ಮೈನಾ ಹಾಡು ಶುರುಮಾಡುತ್ತಾಳೆ, ಬಾಕಿಯವರು ದನಿ ಕೂಡಿಸುತ್ತಾರೆ)**

**ಹಾಡು: -** ಜಾಗೃತವಾಯಿತು ಗುರ್ಜರದೇಶ
ಗುರ್ಜರಗಿತ್ತಿ ಪೂಜಿಸು ಬಾ
ಕೇಸರಿ ಬಣ್ಣದ ವೇಷವ ಧರಿಸಿದ
ಅವನೇ ಅಲ್ಲವೆ ಗುರ್ಜರ ವೀರ
ಕೇಸರಿ ರಂಗಿನ ರಣ ಧೀರ

ಮಾವಿನ ಮರದಲಿ ಅರಳಿದೆ ಹೂವೋ
ಗುರ್ಜರ ಧರಿಸಿದ ಹೂ ಮಾಲೇನೋ
ಗುರ್ಜರ ಯೋಧ ವಜ್ರದಂತೆ ಕಠಿಣ
ಹೂವಿನಂತೆ ಮಧುರ
ಗುರ್ಜರ ಯೋಧ ಕುಣಿಯುತಲಿಹನೋ
ಬೀಸಿದೆ ಇಂದು ಜೇನಿನಗಾಳಿ
ಸುತ್ತು ಹಾಕುತಿದೆ ಆ ಗಾಳಿ

ನಿಂತಲಿ ನಿಲ್ಲದೆ ಬೀಸಿದೆ ಗಾಳಿ
ಗುರ್ಜರಗಿತ್ತಿ ಸುತ್ತೋಣ.

**ರೂಪಾ** : - ಯಾಕೇ ಮೈನಾ, ಹಾಡು ಅರ್ಧಕ್ಕೆ ನಿಲ್ಲಿಸಿ ಬಿಟ್ಟೆ? ಪೂರಾ ಹೇಳು. ಡೇರೆ ಇನ್ನೂ ದೂರ ಇದೆ.

**ಮೈನಾ** : - ಮುಂದೆ ಜ್ಞಾಪಕಕ್ಕೆ ಬರ್‍ತಾ ಇಲ್ಲ.

**ರೂಪಾ** : - ನಿನಗೆ ಬರೋಲ್ಲ ಅಂದ್ರೇ ನಂಬ್ತೀವಾ?

**ಬಾಕಿ ಗೊಲ್ಲತಿಯರು** : - ಹೌದೌದು.

**ರೂಪಾ** : - **(ಮೈನಾಳ ಮುಂದೆ ಬಂದು)** ಹೊತ್ತು ಹೇಗೆ ಸಾಗ್ತು. ನಿನಗೆ ಏನಾದ್ರು ಕೇಳಸ್ತಾ?

**ಮೈನಾ** : - ಏನು ಕೇಳಿಲ್ವಾ? ನಡೀ. ಆ ಮಾವಿನ ಮರದ ಕೆಳಗೆ ಮಡಿಕೆ ಇಳಿಸಿ ಕೊಂಚ ವಿಶ್ರಾಂತಿ ತಗೋಳೋಣ.

**[ಮಾವಿನ ಮರದ ಕೆಳಗೆ ಮಡಿಕೆಗಳನ್ನು ಇಳಿಸಿ ಮುಖ ತಮ್ಮ ಸೆರಗಿನಿಂದ ಒರೆಸಿಕೊಳ್ಳುತ್ತಾರೆ. ಪ್ರತಿಯೊಬ್ಬರ ಹತ್ತಿರ ಒಂದು ಕತ್ತಿ ಮತ್ತು ಸತಿ ಡಬ್ಬಿ (ವಿಷದ ಡಬ್ಬಿ)ಇದೆ. ಮೈನಾ ಡೇರೆ ಕಡೆ ನೋಡುತ್ತಿರುತ್ತಾಳೆ]**

**ರೂಪಾ** : - ಮೈನಾ, ಯಾಕೆ ಸಪ್ಪಗಿದ್ದಿ? ನೀನು ಬರೋವಾಗ ನಿಮ್ಮತ್ತೆ ಏನಾದ್ರೂ ಅಂದ್ರ?

**ಮೈನಾ** : - **(ಕಣ್ಣಲ್ಲಿ ನೀರು)** ನಮ್ಮತ್ತೇ ....... ಅಂದ್ರೇನಂತೆ ನಾನು ಬಾದಶಾಹನ ನೋಡಕ್ಕೆ ಹೋಗ್ತಾರ್‍ದ?

**ಶೋಭಾ** : - ಏನಂದ್ರೇ?

**ಮೈನಾ** : - ಅದೇ, ನಾನು ಬಾದಶಾಹನ ಬೇಗಂ ಆಗೋಕ್ಕೆ ಡೇರೆ ನೋಡಕ್ಕೆ ಹೋಗ್ತಿದ್ದೀನಿ ಅಂತ.

**ರೂಪಾ** : - ಅದಕ್ಕೆ ನೀನೇನಂದಿ?

**ಮೈನಾ** : - ಯಾಕೆ ಅನುಮಾನ ಪಡ್ತೀರಿ ಅಂತ?

**ರೂಪಾ** : - ಆ ಮೇಲೆ?

**ಮೈನಾ** : - ಕೋಪದಿಂದ ಮತ್ತೆ ಅವರು ಅದನ್ನೇ ಹೇಳಿದ್ರು. ಅದಕ್ಕೆ ನಾನ್ಹೇಳ್ದೆ............

**ಶೋಭಾ** : - ಏನು?

**ಮೈನಾ** : - ಏನೂ ಇಲ್ಲ.

**ರೂಪಾ, ಶೋಭಾ** : - ಪರವಾಗಿಲ್ಲ ಹೇಳು.

**ಮೈನಾ** : - ನಿಮ್ಮ ಮಗನಿಗೆ ನನ್ನ ಮೇಲೆ ಪ್ರೀತಿ, ವಿಶ್ವಾಸ ಇದ್ರೆ ನಾನ್ಯಾಕೆ ಬಾದಶಾಹನ ಬೇಗಂ ಆಗ್ತೀನಿ? ಒಂದು ವೇಳೆ ಬಾದಶಾ ನನ್ನ ಹಿಡ್ಕೊಂಡ್ರೂ ಅವರು ನನ್ನ ಬಿಡಿಸಿಕೊಂಡು ಬರೋಲ್ವೇ? ಇಲ್ದೇ ಇದ್ರೆ ನನ್ನ ಮುದ್ದಿನ ಮೈದುನ ಬಿಡಿಸಿಕೊಂಡು ಬರ್‍ತಾನೆ. **(ಕೊಂಚ ಸಮಯದ ನಂತರ)** ನಂಗೆ ಅತ್ತೇ ಏನಂದ್ರೂ ಪರವಾಗಿಲ್ಲ. ಆದ್ರೆ ಇವತ್ತೊಂದು ಅಪಶಕುನ ಆಗೋಯ್ತು. ಅದಕ್ಕೆ ಮನಸ್ಸಿಗೆ ಬೇಜಾರು. ಪರವಾಗಿಲ್ಲ ನಡಿರೀ ಹೋಗೋಣ.

**[ಮೈನಾ ಎದ್ದು ಬಟ್ಟೆ ಸರಿ ಮಾಡಿಕೊಳ್ಳುತ್ತಾ ತನ್ನ ಕತ್ತಿ ಮತ್ತು ಡಬ್ಬಿ ಹುಡುಕುತ್ತಾಳೆ, ಅದು ಇರುವುದಿಲ್ಲ]** ರೂಪಾ, ನನ್ನ ಕತ್ತಿ ಮತ್ತು ಡಬ್ಬಿ ಮರೆತು ಬಂದಿದ್ದೇನೆ. ಅಪಶಕುನ ಎರಡು ಆಯ್ತು. ನೀವೆಲ್ಲಾ ಹೋಗಿ ಡೇರೆ ನೋಡ್ಕೊಂಡು ಬನ್ನಿ. p-8

**ರೂಪಾ, ಶೋಭಾ :** - ಮತ್ತೆ ನೀನು?

**ಮೈನಾ :** - ನಾನು ಈ ಮಾವಿನ ಮರದ ಕೆಳಗೆ ನಿಮಗೋಸ್ಕರ ಕಾಯ್ತಿರ್ತೀನಿ.

**ರೂಪಾ :** - ಅದು ಹೇಗೆ ಸಾಧ್ಯ? ನಿನಗೋಸ್ಕರ ನಾವೆಲ್ಲಾ ಬಂದ್ವಿ. ಮತ್ತೆ ನೀನೆ ಬೇಡ ಅಂದ್ರೆ ಹೇಗೆ?

**ಮೈನಾ :** - ನಾನು ಬರೋಲ್ಲಾ. ನನ್ನ ಹತ್ತಿರ ಕತ್ತಿ ಅಥವಾ ಡಬ್ಬಿ ಇದ್ದಿದ್ರೇ ನಾನು ಬರ್ತಾ ಇದ್ದೆ. ನೀವೆಲ್ಲಾ ಹೊರಡಿ. ರೂಪಾ ನನ್ನ ಮಡಿಕೆ ಮೊಸರನ್ನೂ ಮಾರ್ಕೊಂಡು ಬಾ. ಮತ್ತೆ ಯಾವಾಗಾದ್ರೂ ಡೇರೆ ನೋಡ್ಕೊಂಡು ಬರ್ತೀನಿ.

**[ಎಲ್ಲರೂ ಹೋಗುತ್ತಾರೆ. ರೂಪಾ ಮೈನಾಳ ಮಡಿಕೆ ಎತ್ತಿಕೊಳ್ಳುತ್ತಾಳೆ. ಮೈನಾ ಡೇರೆಯ ಕಡೆ ತನ್ನ ದೃಷ್ಟಿಯನ್ನು ನೆಟ್ಟಿರುತ್ತಾಳೆ. ಇದ್ದಕ್ಕಿದ್ದಂತೆ ತನ್ನೆಡೆಗೆ ಬರುತ್ತಿರುವ ಒಬ್ಬ ತುರ್ಕನ ಕೈಯಲ್ಲಿ ತನ್ನ ಕೆಂಪು ಮಡಿಕೆಯನ್ನು ನೋಡುತ್ತಾಳೆ. ರೂಪಾ ಕೂಡ ಅವನ ಜತೆ ಇದ್ದಾಳೆ. ಮೈನಾಳನ್ನು ಸೈನಿಕ ಮುಗ್ಧ ದೃಷ್ಟಿಯಿಂದ ನೋಡುತ್ತಿರುತ್ತಾನೆ. ಸ್ವಲ್ಪ ಸಮಯದ ನಂತರ ಒಬ್ಬ ಯುವಕ ತನ್ನ ಕಡೆಯೇ ಕುದುರೆ ಮೇಲೆ ಬರುತ್ತಿರುವುದನ್ನು ನೋಡುತ್ತಾಳೆ. ಅವನ ವೇಷ ಭೂಷಣ ಮತ್ತು ಗತ್ತಿನಿಂತ ಅವನೇ ಬಾದಶಾಹ ಎಂದು ತಿಳಿಯುತ್ತದೆ.]**

**ಶಹಜಾದ :** - ಈ ಮಡಿಕೆ ನಿಂದಾ?

**ಮೈನಾ :** - ಹೌದು ಬಾದಶಾಹ.

**ಶಹಜಾದ :** - **(ನಗುತ್ತಾ)** ಕೆಂಪು ಮಡಿಕೆಯಾ ಗೊಲ್ಲತೀ. ನೀನು ನನ್ನ ಡೇರೆಯನ್ನೇಕೆ ಅಲಂಕರಿಸಲಿಲ್ಲ.

**ಮೈನಾ :** - ಬಾದಶಾಹ ನಂಗೆ ತುಂಬಾ ಆಯಾಸ ಆದ್ದರಿಂದ ನನ್ನ ಸಖಿಯನ್ನು ಮೊಸರು ಮಾರಲು ಕಳುಹಿಸಿದೆ. ನಮಗೆ ಮೊಸರು ಮಾರೋದು ತಾನೇ ಮುಖ್ಯ.

**ಶಹಜಾದ :** - ನೀನೇ ಬಂದಿದ್ರೇ ನೀನು ಕೇಳಿದಷ್ಟು ದುಡ್ಡು ಸಿಕ್ತಿತ್ತು.

**ಮೈನಾ :** - ಎಲ್ಲಾರಿಗೂ ಏನು ಸಿಕ್ತಿತ್ತೋ ಅದೇ ನನಗೂ ಸಾಕಾಗ್ತಿತ್ತು. ದಯವಿಟ್ಟು ತಾವು ಮೊಸರು ತಗೊಂಡು ಮಡಿಕೆ ವಾಪಸ್ಸು ಮಾಡಿ.

**ಶಹಜಾದ :** - ಮಡಿಕೆ ಏನೋ ಖಾಲಿ ಇದೆ. ಆದ್ರೆ ಬೆಲೆ ತಗೋಳ್ಳಕ್ಕೆ ಡೇರೇಗಾದ್ರೂ ಬರ್ಬೇ ಅಲ್ವಾ?

**ಮೈನಾ :** - ಬಾಕಿಯವರಿಗೆ ಏನು ಬೆಲೆ ಕೊಟ್ರೋ ಅದನ್ನು ನನ್ನ ಸಖಿಯರ ಕೈಲಿ ಕೊಟ್ಬಿಡಿ.

**ಶಹಜಾದ :** - ಆದರೇ ಅವರುಗಳ ಜೊತೇಲಿ. ನಿನ್ನ ಬೆಲೆ ಹೇಗೆ ಸಾಧ್ಯ? ಗೊಲ್ಲತಿ?

**ಮೈನಾ :** - ಎಲ್ಲಾರ ಮೊಸರು ಒಂದೇ. ಬಾದಶಃ

**ಶಹಜಾದ :** - **(ಒಂದು ಹೆಜ್ಜೆ ಮುಂದಿಟ್ಟು)**ಮೊಸರು ಒಂದೇ ತರಹ ಇರಬಹುದು. ಆದ್ರೇ ಗೊಲ್ಲತಿಯರು ಒಂದೇ ತರಹ ಅಲ್ವಲ್ಲಾ?

**ಮೈನಾ :** - **(ಒಂದು ಹೆಜ್ಜೆ ಹಿಂದಿಟ್ಟು)** ನೀನು ಮನುಷ್ಯನೋ. ಪಿಶಾಚಿಯೋ?

**ಶಹಜಾದ :** - **(ಆಶ್ಚರ್ಯ)** ಎಲೇ ಹೆಂಗಸೇ. ನಿನ್ಯಾರು ಉತ್ತರ ಕೇಳಲಿಕ್ಕೆ?

**ಮೈನಾ :** - ನಾವು ಗೊಲ್ಲತಿಯರು

**ಶಹಜಾದ :** - **(ಕಾಮಾತುರದಿಂದ)** ನಿನ್ನ ಹೆಸರು?

**ಮೈನಾ :** - ಗೌಳಿಗಿತ್ತಿ ಮೈನಾ.

**ಶಹಜಾದ** : - ಗೌಳಿಗಿತ್ತಿ ಮೈನಾ. ನಿನಗೆ ಆಯಾಸವಾಗಿದ್ರೆ ಪಲ್ಲಕ್ಕಿ ತರಿಸ್ಲಾ? ಆನೆ ಯಾವಾಗ್ಲಾದ್ರೂ ನೋಡಿದ್ಯಾ?

**ಮೈನಾ**:- ಆನೆಯಿಂದೇನು ಪ್ರಯೋಜನ ನಮಗೆ. ಹಾಲು ಕೊಡುವ ಎಮ್ಮೆಯಿಂದ ನಮ್ಮ ಕೆಲಸ. ಪಲ್ಲಕ್ಕಿ ಪರದೆಲಿರೋ ಹೆಂಗಸರಿಗೆ ಬೇಕು ಆನೆ. ಸ್ವತಂತ್ರವಾಗಿ ಹಾರಾಡುವ ಹಕ್ಕಿಗಳಾದ ಗೊಲ್ಲರಿಗೆ ಯಾಕೆ ಬೇಕು ಆನೆ?

**ಶಹಜಾದ** : - ನಮ್ಮ ಅಂತಃಪುರದಲ್ಲಿ ಬಹಳ ಜನ ಹಿಂದೂ ಹೆಂಗಸರಿದ್ದಾರೆ.

**ಮೈನಾ**:-ಬಾದಾಶಹ. ನೀವು ರಾಜಾ. ನಾವು ಪ್ರಜೆ. ನಮ್ಮಿಂದ ಕೆಟ್ಟ ಮಾತುಗಳನ್ನು ಕೇಳಲು ನಿಮಗೆ ಇಷ್ಟವೆ?

**ಶಹಜಾದ** : -ಅದರಲ್ಲೆನಂತೇ ಎಲ್ಲಾ ಮನುಷ್ಯರೂ ಪಿಶಾಚಿಗಳೇ ......

**ಮೈನಾ** : - ನೀನಿರಬಹುದು. ಆದರೆ ಗೊಲ್ಲರಲ್ಲ.

**ಶಹಜಾದ** : -ಅರೇ. ಮೈನಾ ರಾಣಿ.ನಮ್ಮ ಮಹಲಿಗೆ ಬಂದ್ರೆ ಎಲ್ಲಾ ಮರೆತು ಹೋಗುತ್ತೆ. ಎಲ್ಲಾ ಹಿಂದೂ ಹೆಂಗಸರೂ ಅಷ್ಟೇ.

**ಮೈನಾ** : - **(ಆವೇಶದಿಂದ)**ಬಾದಶಾಹ. ಈ ಹೊತ್ತು ನಾನೊಬ್ಬಳೇ ಇದ್ದೀನಿ. ಆದರೇ ನನ್ನ ಹಿಂದೆ ಒಂಬತ್ತು ಲಕ್ಷ ಗೊಲ್ಲರಿದ್ದಾರೆ. **(ಶಕ್ತಿ ಮೈಮೇಲೆ ಬಂದಂತೇ ಹಾಡು ಹೇಳಿ ಕುಣಿಯುತ್ತಾಳೆ)**

**ಹಾಡು** : - ನಾನೊಬ್ಬಳೇ ಎಂದು ತಿಳಿಯದಿರು.
ಒಂಬತ್ತು ಲಕ್ಷ ಗುರ್ಜರು ನನ್ನ ಹಿಂದೆ.

**[ಬಾದಶನಿಗೆ ಇವೆಲ್ಲವೂ ಅಭ್ಯಾಸವಾದಂತೆ ನಗುತ್ತಾನೆ]**

**ಶಹಜಾದ** : -ನನಗೆ ಯಾರ ಭಯವೂ ಇಲ್ಲ. ಪ್ರಪಂಚದ ಸುಂದರಿಯರೆಲ್ಲಾ ನನ್ನವರೇ. [ಮೈನಾ ಏನನ್ನೋ ಹುಡುಕುತ್ತಿರುವುದನ್ನು ನೋಡಿ] ಏನು ಹುಡುಕುತ್ತಿರುವಿ. ನನ್ನ ಗೊಲ್ಲತಿ ಮೈನಾ?

**ಮೈನಾ** : -ಕಠಾರಿ.

**ಶಹಜಾದ** : -ಯಾಕೆ ?

**ಮೈನಾ** : -ನೀನು ಯಾವುದಕ್ಕೂ ಹೆದರೋದಿಲ್ಲ ತಾನೇ? ನಿನ್ನ ಕಠಾರಿ ಕೊಡು. ನಿನ್ನ ಡೇರೆ ನೋಡಲು ಬರುತ್ತೇನೆ ಮತ್ತು ನಿನಗೆ ಕಾಳಿಯ ಕುಣಿತ ತೋರಿಸುತ್ತೇನೆ. **(ಬಾದಶಾಹ ಸುಮ್ಮನಿರುವುದನ್ನು ನೋಡಿ ಯಾಕೆ ಹೆದರ್ರಿ?** ಕಠಾರಿ ಕೊಡಕ್ಕೋ ಅಥವಾ ಗೊಲ್ಲತಿ ಶಿಬಿರಕ್ಕೆ ಬರ್ತಾಳೊ ಅಂತ?

**ಶಹಜಾದ** : -ಎಲೇ ಹೆಂಗಸೇ. ನಿನ್ನ ನಾಲಿಗೆ ಉದ್ದ ಬಿಟ್ಟಿದ್ದೀ .............

**ಮೈನಾ** : -ಬರೀ ನಾಲಿಗೆ ಅಲ್ಲ. ಕೈಯಾ ಕೂಡ. ಕೊಡು ಕಠಾರಿನಾ .............

**[ಮೈನಾ ಆವೇಶದಿಂದ ಮುಂದೆ ಬಂದು ಪ್ರಜ್ಞಾ ಶೂನ್ಯಳಾಗಿ ಬೀಳುತ್ತಾಳೆ. ಬಾದಶಾಹ ಅವಳನ್ನು ಕುದುರೆಯ ಮೇಲೆ ಕೂರಿಸಿಕೊಂಡು ಶಿಬಿರದ ಕಡೆ ಹೋಗುತ್ತಾನೆ]**

**ದೃಶ್ಯ - 3**

**[ಹಳ್ಳಿಯ ಶಾಂತವಾದ ಬೆಳದಿಂಗಳ ರಾತ್ರಿಯಲ್ಲಿ ಹುಡುಗರು ಮಂಡಲ ಕುಣಿತಕ್ಕಾಗಿ ಹೀರಾನನ್ನು ಎದರು ನೋಡುತ್ತಿದ್ದಾರೆ. ಹೀರಾ ಬರುತ್ತಾನೆ]**

**ಎಲ್ಲಾರೂ** : -ಹೀರಾ? ಯಾಕೆ ಇಷ್ಟೊತ್ತಾಯಿತು?

**ಹೀರಾ** : -ಅತ್ತಿಗೇನಾ ಎದರು ನೋಡ್ತಾ ಇದ್ದೆ. ಅವಳು, ಅವಳ ಸಖಿಯರು ಯಾರೂ ಇನ್ನೂ ಬಂದಿಲ್ಲ. ಎಲ್ಲಾರು ಯೋಚನೆ ಮಾಡ್ತಾ ಇದ್ದಾರೆ. ಅಣ್ಣ ಒದ್ದಾಡ್ತಾ ಇದ್ದಾನೇ ...............

**ಯುವಕ** : -ಅದು ನಿನ್ನ ಅಣ್ಣನ ಅಭ್ಯಾಸ. ಯೋಚನೆ ಮಾಡಬೇಡ. ನಡಿ ಶುರು ಮಾಡು.

**ಹೀರಾ** : -ನಡಿರೀ .........ಶುರು ಮಾಡಿ.

**[ಎಲ್ಲಾರೂ ವೃತ್ತಾಕಾರದಲ್ಲಿ ಹಾಡುತ್ತಾ ಕುಣಿಯುತ್ತಾರೆ]**

**ಹಾಡು : -** ಹೊರಟು ನಿಂತನೋ ಅಭಯಸಿಂಹ ||
ಯುದ್ಧಕೆ ಹೊರಟಿಹನೋ ವೀರಸಿಂಹ
ಹೊರಟರು ಐವತ್ತೆರಡು ವೀರರು
ಒಂಭತ್ತು ಲಕ್ಷ ಗುರ್ಜರ ಯೋಧರು
ಹೊರಟಿಹರೋ ತಾಯಿ - ಒಂಬತ್ತು ಲಕ್ಷ
ಹೊರಟಿಹರೋ ತಾಯಿ.
ಕಲಂಕವೊಂದೂ ಬಾರದಂತೆ
ಕರುಣಿಸು ಓ ತಾಯಿ
ಶಿರವನರ್ಪಿಸುವೆ ಚರಣ ಕಮಲದಲಿ
ಸ್ವೀಕರಿಸೇ ತಾಯಿ.
ಅರಿಗಳು ಬಂದು ದೇಶವನಾಳ್ವವರೆ
ಆಗದು ಓ ತಾಯಿ
ಯೋಧ ಪುತ್ರನು ಹುಟ್ಟಿಹನಿಂದು
ದ್ವಾರದಲಿ ಓ ತಾಯಿ
ಕುಲಕ್ಕೆ ಕಳಂಕ ತಟ್ಟಿದರೆ
ನೆತ್ತರಿನಿಂದ ಚರಣವ ತೊಳಿವೆ
ತೊಳಿವೇ ಓ ತಾಯಿ
ಕುದುರೆ ನೆಗೆಯಲಿ, ಧುಳ್ಳು ಏರಲಿ
ಆಕಾಶದಲಿ ಮಿಂಚು ಮಿನುಗಲಿ
ಸುರಿಮಳೆಯಾಗಿ ರಕ್ತ ಸುರಿಯಲಿ
ರಕ್ತ ಸುರಿಯಲಿ ತಾಯಿ
ಯುದ್ಧ ವೇಷವ ತೊಟ್ಟನು ವೀರ
ಸಾವು ಬದುಕಿನ ಆಟ ತೊಡಗಿತು
ಕಳಂಕವೆಂದೂ ಬಾರದಂತೆ
ಕರುಣಿಸು ಓ ತಾಯಿ.

**[ಕೊನೆಯ ಹಾಡಿನ ಸಾಲು ಮುಗಿಯುತ್ತಿದ್ದಂತೆ ಬ್ರಾಹ್ಮಣ ಯುವಕನೊಬ್ಬ ಮೇಲುಸಿರು ಬಿಡುತ್ತಾ ಓಡಿ ಬರುತ್ತಾನೆ]**

**ಬ್ರಾಹ್ಮಣ** : - ಅರೇ ಕೇಳಿ. ಚಂದ್ರನ ಮನೆ ಎಲ್ಲಿ? ಹೀರಾ ಎಲ್ಲಿದ್ದಾನೆ? **(ಕೂಗುತ್ತಾನೆ)**

**[ಬ್ರಾಹ್ಮಣನ ತಿರುಚಾಟದಿಂದ ಎಲ್ಲಾರೂ ಅವನ ಸುತ್ತ ಸೇರುತ್ತಾರೆ]**

**ಹೀರಾ** : -ನಾನೇ ಹೀರಾ. ಏನು ಕೆಲಸ?

**ಬ್ರಾಹ್ಮಣ** : - ನಿನ್ನ ಅತ್ತಿಗೆ ಬಂಧಿಸಲ್ಪಟ್ಟಿದ್ದಾಳೆ.

**ಹೀರಾ** : - **(ಗಾಬರಿ)** ಹಾ! ಆಃ ! ಏನಂದಿ? ಯಾರ ಕೆಲಸ?

**ಬ್ರಾಹ್ಮಣ** : - ಬಾದಶಾಹ ....... ನಿನ್ನ ಅತ್ತಿಗೆ ಒಂದು ಸಂದೇಶ ಕಳಿಸಿದ್ದಾಳೆ.

**ಹೀರಾ** : - ಏನು' ಎಲ್ಲಾ ಹೆಂಗಸರೂ ಬಂಧಿಸಲ್ಪಟ್ಟಿದ್ದಾರಾ?

**ಬ್ರಾಹ್ಮಣ** : - ಬಾದಶಾಹನ ಶಿಬಿರಕ್ಕೆ ಹೋದ ಯಾವ ಹೆಂಗಸರು ವಾಪಸ್ಸು ಬಂದಿದ್ದಾರೆ? ಹೆಂಗಸರನ್ನ ಮನೇಲಿ ಇಟ್ಕೊಳ್ಳೊಳ್ಳೊ ಯೋಗ್ಯತೆ ನಿಮಗಿಲ್ಲ. ನಿಮಗೇನು ಗೊತ್ತು ಇದು ಮ್ಲೇಚ್ಛರ ಯುಗ ಅಂತ.

**ಹೀರಾ** : - ನಾಲಿಗೆ ಬಿಗಿ ಹಿಡಿದು ಮಾತಾಡು. ಸ್ನೇಹಿತರೇ ನೀವು ತಕ್ಷಣ ಕುದುರೆ ಮತ್ತು ಆಯುಧಗಳನ್ನು ಸಿದ್ಧ ಪಡಿಸಿಕೊಳ್ಳಿ. ಜೀವದಿಂದಿರೋ ಹೆಂಗಳೆಯರನ್ನು ಕಾಪಾಡೋಣ.

**[ಪ್ರತಿಯೊಬ್ಬರು ಹೊರಡುತ್ತಾರೆ. ಹಳ್ಳಿಯಲ್ಲಿ ಸುದ್ದಿ ಹರಡುತ್ತದೆ.]**

**ಹಾಡು** : -
ವಿಳಂಬ ಮಾಡದೆ ಹೀರಾ ಧಾವಿಸಿದ ಅಶ್ವಗಳೆಡೆಗೆ
ವೀರ ವೇಷವ ಧರಿಸಿದನೂ. ಮೂಗು ದಾರವ ನಿದಿರಿಸಿದ
ಶೂರರಾದವರು ಬನ್ನಿರಿ ಜತೆಗೆ. ಹೇಡಿಗಳೆಲ್ಲ ಹಿಂದಿರುಗಿ
ಕೇಸರಿ ಬಣ್ಣದ ಪೇಟವ ಧರಿಸು. ಹಾರಲಿ ಕೆಂಪು ಗುಲಾಲಿ
ದಿಲ್ಲಿಯಮೇಲೆ ಧಾಳಿ ನಡೆಸಿದರೆ
ಉಳಿವುದು ನನ್ನಯ ಹೆಸರು
ಹೀರಾ ಏರಿದನೊಂದು ಕುದುರೆ
ಗುರ್ಜರರೇರಿದರೊಂಭತ್ತು ಲಕ್ಷ.

## ದೃಶ್ಯ - 4

**[ದಿಲ್ಲಿಗೆ ಹೋಗುತ್ತಿರುವ ಬಾದಶಾಹನನ್ನು ಹಿಂಬಾಲಿಸುತ್ತಿರುವ ಗೊಲ್ಲರ ಸೇನೆ. ಮೈನಾ ಕಾಳಿಯ ವ್ರತ ಮಾಡಿದ್ದಾಳೆ. ಊಟವನ್ನು ತ್ಯಜಿಸಿದ್ದಾಳೆ. ಪರದೆಯೊಳಗಿನಿಂದ ಹೀರಾ ಮತ್ತು ಗೊಲ್ಲರ ಸೈನ್ಯ ಹಿಮ್ಮೆಟ್ಟಿದ್ದನ್ನು ಕಂಡು]**

**ಮೈನಾ** : - ಅರೇ, ಯಾರಲ್ಲಿ? ನನ್ನನ್ನು ಕೆಳಗೆ ಇಳಿಸಿ. ನನ್ನನ್ನು ಯುದ್ಧ ಮಾಡಕ್ಕೆ ಬಿಡಿ. **(ರೂಪಾ ಬರುತ್ತಾಳೆ)** ಹೀರಾ ಹಿಮ್ಮೆಟ್ಟಿದ್ದಾನೆ. ಗೊಲ್ಲರಿಗೆ ಜೀವದ ಮೇಲೆ ಭಾರಿ ಆಸೆ.

**ರೂಪಾ** : - ಹುಚ್ಚಿ ಹಾಗೆ ಮಾತನಾಡಬೇಡ. ಗೊಲ್ಲರ 9 ಲಕ್ಷಕ್ಕೂ. ಅವರ ಹನ್ನೆರಡು ಲಕ್ಷಕ್ಕೂ ಸಮವೇ?

**ಮೈನಾ** : - ಓಹೋ! ಹಾಗೋ? ನಮ್ಮ ಗೊಲ್ಲತಿಯರ ಸಾಹಸಾನೆ ತೋರಿಸೋಣ. ರೂಪಾ, ಹೀರಾನಿಗೆ ನನ್ನ ಬಳೆ. ಸೀರೆ ಕಳುಹಿಸಿಕೊಡು. ಕತ್ತಿ ನನ್ನ ಕೈಲಿ ಕೊಡು.

**[ಮೈನಾ ಆವೇಶದಿಂದ ಹಾಡುತ್ತಾ, ಕುಣಿಯುತ್ತಾಳೆ. ದೇವಿ ಅವಳ ಮೈಮೇಲೆ ಬಂದಿದೆ]**

**ಹಾಡು**
ಶಹಜಾದನನು ಸೆಣಸಿ ಸೋಲಿಸುವೆ.
ತುಚ್ಛ ಬದುಕನು ಸಾರ್ಥಕ ಗೊಳಿಸುವೆ.

**ರೂಪಾ** : - ಮೈನಾಳ ಮೇಲೆ ದೇವಿ ಬಂದಿದ್ದಾಳೆ. ತಾಯಿ ಅಂಬಾ! ಈಗ ಗೊಲ್ಲರು ಗೆಲ್ತಾರೆ. ಗೊಲ್ಲರು ಗೆಲ್ತಾರೆ.

**[ಶಹಜಾದನ ಹಿಂದೆ ಹೀರಾ ಓಡುತ್ತಾ ಬರುತ್ತಾನೆ]**

**ಶಹಜಾದ** : - ಮೈನಾ. ನನ್ನ ತಂಗಿ. ನನ್ನನ್ನು ಕಾಪಾಡು.

**ರೂಪಾ** : - ಅಂಬಾ ತಾಯೀ .....

**ಹೀರಾ** : - ತಾಯಿ ಅಂಬಾ. ತಾಯಿ ಅಂಬಾ (ಕಾಲ್ಮುಟ್ಟಿ ನಮಸ್ಕರಿಸುತ್ತಾನೆ)

**ಶಹಜಾದ** : - ತಾಯೀ ಅಂಬಾ. **(ಎಂದು ಹೇಳುತ್ತಾ ಮೈನಾಳ ಕಾಲು ಹಿಡಿಯುತ್ತಾನೆ)** ತಮ್ಮ ಹೀರಾ. ನಿನ್ನತ್ತಿಗೆಯನ್ನು ಸನ್ಮಾನ ಪೂರ್ವಕವಾಗಿ ಕರೆದುಕೊಂಡು ಹೋಗು.

**[ಹೀರಾ ಅತ್ತಿಗೆಯ ಕೈ ಹಿಡಿದು ಕರೆದೊಯ್ಯುತ್ತಾನೆ. ಶಹಜಾದ ನೋಡುತ್ತಿರುತ್ತಾನೆ]**

**ದೃಶ್ಯ - 5**

**[ಗೊಲ್ಲರ ಹಳ್ಳಿಯಲ್ಲಿ ವಿಜಯೋತ್ಸಾಹ. ಹೀರಾ ಅತ್ತಿಗೆಯನ್ನು ಮುಂದಿಟ್ಟುಕೊಂಡು ನಡೆದಿದ್ದಾನೆ. ಎಲ್ಲಾರೂ ಸ್ವಾಗತಕ್ಕೆ ಸಿದ್ಧರಾಗಿದ್ದಾರೆ. ಮೈನಾ ಯೋಚಿಸುತ್ತಾ ನಿಲ್ಲುತ್ತಾಳೆ]**

**ಹೀರಾ** : - ನಡಿ ಅತ್ಗೀ. ನಿನ್ನ ವ್ರತ ಪೂರೈಸಿತು. ಮನೆ ಬಂತು.

**ಮೈನಾ** : - ಹೀರಾ ನನ್ನ ಕಾಲುಗಳು ಮುಂದೆ ಹೋಗುತ್ತಿಲ್ಲ. ಮನೆಗೆ ಬಂದರೆ ವ್ಯಂಗ್ಯದ ಚುಚ್ಚು ಮಾತುಗಳನ್ನು ಕೇಳ ಬೇಕಾಗುತ್ತದೆ. ಅದು ನನಗೆ ಇಷ್ಟವಿಲ್ಲ.

**ಹೀರಾ** : - ಏನು ಅತ್ಗೀ. ನಿನಗೆ ಯಾರು ವ್ಯಂಗ್ಯವಾಗಿ ಮಾತಾಡ್ತಾರೆ? ನೀನು ಸಾಕ್ಷಾತ್ ಯೋಗ ಮಾಯೆಯ ಅವತಾರ.

**ಮೈನಾ** : - ನನ್ನ ಸತ್ಯ ಅವಳಿಗೊಬ್ಬಳಿಗೆ ಮಾತ್ರ ಗೊತ್ತು.

**ಹೀರಾ** : - ಅತ್ಗೀ. ನೋಡಲ್ಲಿ. ನಿನ್ನ ಅತ್ತೇ. ನಿನ್ನ ಪುಟ್ಟ ನಾದಿನಿ ಎಲ್ಲಾರೂ ಇದ್ದಾರೆ. ನಡಿ ಅವರೊಡನೆ ಸೇರು. ನಾನು ಹೋಗಬೇಕು. ( **ತಾಯಿಯನ್ನು ನೋಡಿ ಅವಳ ಕಾಲಿಗೆ ಬೀಳುತ್ತಾನೆ)**

**ತಾಯಿ** : - ಸಾವಿರ ವರ್ಷ ಬಾಳು.

**(ಮೈನಾ ಅತ್ತೆಯ ಕಾಲುಗಳನ್ನು ಮುಟ್ಟಲು ಹೋಗುತ್ತಾಳೆ. ಅತ್ತೆ ಕಾಲುಗಳನ್ನು ಹಿಂದಕ್ಕೆ ತೆಗೆಯುತ್ತಾ)** ನನ್ನನ್ನು ಮುಟ್ಟಬೇಡ ಬಾದಶಾಹನ ಬೇಗಂ.........

**ಮೈನಾ** : - ಬಾದಶಾಹನ ಹೆಂಡ್ತಿ? ನಾನು ಬಾದಶಾಹನ ಬೇಗಂ? ಇದಕ್ಕೆ ನಿಮ್ಮಗನ ಯಾಕೆ ಕಳಿಸ್ಬೇಕಾಗಿತ್ತು.

**ಅತ್ತೆ** :- ಗೊಲ್ಲರ ಮಾನ ಕಾಯಕೋಸ್ಕರ. ತುರುಕರ ಮನೇಲಿ ಇದ್ದೋಳ್ಗೆ ಜಾಗ ಕೊಟ್ರೆ ನಮ್ಮ ಕುಲದ ಮರ್ಯಾದೆ ಏನು ಉಳೀತು?

**ಮೈನಾ** : - ನನ್ನಿಂದ ನಿಮ್ಮ ಕುಲಕ್ಕೆ ಕೆಟ್ಟ ಹೆಸರು ಬರುತ್ತಾ? ಹೇ. ಯೋಗಮಾಯೇ. ನನ್ನ ಸತ್ಯ ನಿಂಗೊತ್ತು. ಹೀರಾ. ನಾನು ಹೋಗ್ತೀನಿ. ನಿಮ್ಮ ಅಣ್ಣನಿಗೆ ಹೇಳು ಮೈನಾ ನಿಮ್ಮ ಕುಲಕ್ಕೆ ಕೆಟ್ಟ ಹೆಸರು ತರೋಲ್ಲಾಂತ.

**[ಮೈನಾಳಿಗೆ ಆವೇಶ ಬರುತ್ತದೆ. ಅವಳ ಮೇಲೆ ದೇವಿ ಬಂದಿದ್ದಾಳೆಂದು ಅರಿತ ರೂಪಾ]**

**ರೂಪಾ** : - ದೇವಿ. ಎಲ್ಲಾರನ್ನೂ ಕ್ಷಮಿಸು ತಾಯಿ

**ಎಲ್ಲಾ ಹೆಂಗುಸರು** : - **(ಅತ್ತೆ, ನಾದಿನಿಯರನ್ನು ಹೊರತು)** ಕ್ಷಮಿಸು ತಾಯಿ. ಮಕ್ಕಳ ತಪ್ಪ

ಕ್ಷಮಿಸು.

**[ಮೈನಾ ಶಾಂತಳಾಗುತ್ತಾಳೆ. ತಲೆಗಂಟು ಬಿಚ್ಚುತ್ತದೆ. ಮೈಮೇಲಿನ ದೇವರು ಹೊರಟು ಹೋಗುತ್ತದೆ]**

**ಅತ್ತೆ, ನಾದಿನಿ ಮತ್ತು ಇತರರು** : - ತಾಯೀ ಇರು. ಹೋಗ್ಬೇಡ. ನಮಗೋಸ್ಕರ ಇರು. ದಯವಿಟ್ಟು ಇರು.

**[ಎಲ್ಲಾರು ದೇವಿ ಭಜನೆ ಮಾಡುತ್ತಾರೆ]**

**ಹಾಡು : -** **ಗುರ್ಜರಿ ಮೈನಾ**
**ತೆರಳಿದಳು ಪಾವಾಗಡಕ್ಕೆ**
**ಪಾವಾಗಡದಲ್ಲಿ**
**ಲೋಪವಾದಳು**
**ಕರೆಸಿಕೊಂಡಳು**
**ಮಹಾಕಾಳಿ**

**(ತೆರೆ)**

## ಪಾತ್ರ ವರ್ಗ

ಶಂಕರ

ಪಾರ್ವತಿ

ಮೋಹಿನಿ

ಪುರುಷ

**[ ಸಂಧ್ಯಾಕಾಲ:-ಶರದೃತುವಿನ ಆರಂಭ. ಶಿಖರದ ತುದಿಯಲ್ಲಿ ಶಂಕರ ವಿರಾಜಮಾನನಾಗಿದ್ದಾನೆ. ತೊಡೆಯ ಮೇಲೆ ಪಾರ್ವತಿ ದೇವಿ ಮಂಡಿತಳಾಗಿದ್ದಾಳೆ. ]**

**ಶಂಕರ** : - ಇದ್ಯಾಕೋ, ವಿಪರೀತವಾಯ್ತು ಉಮಾ ........

**ಪಾರ್ವತಿ** : - ಏನು ಹೇಳ್ತಿದ್ದೀರಿ ಸ್ವಾಮಿ

**ಶಂಕರ** : - ನೀನಂತೂ ಒಂದೊಂದು ಸಾರಿ ಯೋಚಿಸ್ದೆ ಮಾತಾನಾಡಿ ಬಿಡ್ತಿ. ಅಧಿಕಾರದ ನಿಜವಾದ ಮೌಲ್ಯ ಅದರ ಸದುಪಯೋಗದಲ್ಲಿದೆ. ಬಾಕೀ ಲಾಭ ಯಾವ ಹಳ್ಳಿಗನಾದ್ರೂ ಪ್ರಾಪ್ತ ಮಾಡ್ಕೋತಾನೆ.

**ಪಾರ್ವತಿ** : - ಎಂದೂ ಇಲ್ಲ. ಇಷ್ಟು ವರ್ಷದ ನಂತರ ನೀವು ನನಗೆ ತಿಳುವಳಿಕೆ ಹೇಳಿಕೊಡ್ತಿದೀರಾ?

**ಶಂಕರ** : - ಯಾಕೆಂದರೇ ನಿನ್ನ ಅಹಂಕಾರ ಕೊಂಚನೂ ಇಳಿದಿಲ್ಲ

**ಪಾರ್ವತಿ** : - ನಿಮ್ಮದು?

**ಶಂಕರ** : - ಪರಿಹಾಸ ಇರಲಿ ಬಿಡು. ವರ್ಷದ ಹನ್ನೆರಡು ತಿಂಗಳಲ್ಲಿ ಮೋಡದ ಆರ್ಭಟ ಬರೀ ಮೂರು ತಿಂಗಳು ಮಾತ್ರ. ಜೀವನದ ಗಂಭೀರ ಸನ್ನಿವೇಶದಲ್ಲೂ ಹಾಸ್ಯ ಕೂಡ ಇಷ್ಟೇ. ಒಂದು ವೇಳೆ ಇದರ ಅತಿವೃಷ್ಟಿ ಆಗಿ ಬಿಟ್ರೆ. ಅನಾವೃಷ್ಟಿಗಿಂತ ಹೆಚ್ಚು ಪಾತಕವಾಗುತ್ತೆ.

**ಪಾರ್ವತಿ** : -ನೀವು ಪತಿಯಿಂದ ಗುರುಸ್ಥಾನ ತಗೋಂಡ್ರಿ, ಆದ್ರೆ ನಾನು, ಖಂಡಿತಾ ಶಿಷ್ಯಸ್ಥಾನ ತಗೋಳಲ್ಲ.

**ಶಂಕರ** : - **(ಶಾಂತದಿಂದ)** ಇದಕ್ಕಿಂತ ನಿನ್ನಿಂದ ನಾನು ಹೆಚ್ಚೇನು ಅಪೇಕ್ಷಿಸುವುದಿಲ್ಲ. ನೋಡು. ನೀನು ಅರ್ಧಾಂಗಿನಿಯಾಗಿರು ಅಷ್ಟೇ ಸಾಕು.

**ಪಾರ್ವತಿ** : - ಇನ್ನೇನಾಗಿದ್ದೀನಿ? ಇಂಥಾ ಮಾತು ಇನ್ಯಾರಾದರೂ ಅಂದಿದ್ರೇ ಎಂಥಾ ಶಾಪ ಕೊಡ್ತಿದ್ದೆ ಗೊತ್ತಾ?

**ಶಂಕರ** : - **(ಸಮಾಧಾನಗೊಳ್ಳಿಸುತ್ತಾ)** ನೋಡು. ನಾನು ಏನು ಹೇಳ್ತೀನೋ ಅದನ್ನು ಧೈರ್ಯವಾಗಿ ಕೇಳು. ಹೇಳೋದು ಒಂದೇ. ಬಿಡೋದು ಒಂದೇ ಆಗಬಾರದು.

**ಪಾರ್ವತಿ** : - ಅಷ್ಟೇ. ಸಾರಾ

**ಶಂಕರ** : - ನಿನ್ನ ಸತಿತ್ವದ ಬಗ್ಗೆ ನನಗೆ ಗೌರವವಿದೆ. ನಂಬಿಕೆ ಇದೆ. ಆದರೇ ಇದರ ದುರುಪಯೋಗ ........

**ಪಾರ್ವತಿ** : - ದುರುಪಯೋಗ? ಏನನ್ನುತ್ತಿ ನೀನು?

**ಶಂಕರ** : - ಯಾವುದರ ಪ್ರಯೋಗದಿಂದ ಯಾವ ಲಾಭವೂ ಇಲ್ಲವೋ. ಅದರಿಂದ ಬೇರೆಯವರ ಪತನವಾಗುತ್ತೋ. ಇದೆಲ್ಲಾ ದುರುಪಯೋಗಕ್ಕಿಂತ ಹೆಚ್ಚು.

**ಪಾರ್ವತಿ** : - ಸರಿ. ಅದರಿಂದ ನಮಗೇನಂತೆ?

**ಶಂಕರ** : - ಕೇಳು. ಚಿತ್ರಕೇತುವಿಗೆ ನೀನು ಕೊಟ್ಟ ಶಾಪ. ದುರುಪಯೋಗವೇ.

**ಪಾರ್ವತಿ** : - ಇಲ್ಲ. ತುಂಬಿದ ಸಭೆಯಲ್ಲಿ ನನ್ನ ಅವಮಾನದ ಪ್ರಶ್ನೆ. ಮುಂದೆ ಯಾರೂ ಈ ತರಹ ಮಾಡದಿರಲಿ ಎಂದು ನಾನು ಅವನಿಗೆ ಅಸುರನಾಗಿ ಹುಟ್ಟುವಂತೆ ಶಾಪಕೊಟ್ಟೆ. ಇದರಲ್ಲಿ ತಪ್ಪೇನಿದೆ?

**ಶಂಕರ** : - **(ನಕ್ಕು)** ಪ್ರಿಯ ಪಾರ್ವತಿ. ನಮ್ಮ ಅಜ್ಞಾನದಿಂದ ಬೇರೆಯವರ

ಮನನೋಯಿಸುವುದು ಸರಿಯಲ್ಲ

**ಪಾರ್ವತಿ** : - ಅಂದ್ರೇ

**ಶಂಕರ** : - ಚಿತ್ರಕೇತು ಸಾಮಾನ್ಯನಲ್ಲ. ಅವನು ಮನಸ್ಸು ಮಾಡಿದ್ದರೆ ನಿನಗೆ ಮರುಶಾಪ ಕೊಡಬಹುದಾಗಿತ್ತು. ಆದರೇ ಕೊಡಲಿಲ್ಲ. ಅದು ಅವನ ಉದಾರತೆ ತೋರಿಸುತ್ತೆ.

**[ಪಾರ್ವತಿಗೆ ತಪ್ಪಿನ ಅರಿವಾಗಿ ನಾಚಿಕೆ ಆಗುತ್ತದೆ]** ನೀನು ತುಂಬಿದ ಸಭೆಯಲ್ಲಿ ನನ್ನ ತೊಡೆಯ ಮೇಲೆ ಕೂತ್ಕೋಬೇಕು ಅಂತ ಹಠಮಾಡಿದಾಗ ಚಿತ್ರಕೇತು ಅದನ್ನ ವಿರೋಧಿಸಿದರೆ ಅದರಲ್ಲಿ ತಪ್ಪೇನು? ನನಗೂ ನೀನು ಮಾಡಿದ್ದು ಸರಿ ಕಾಣಲಿಲ್ಲ. ಏಕಾಂತದಲ್ಲಿ ಬಿಟ್ಟು ಉಳಿದಂತೆ ಪ್ರಾಣಿಗಳೂ ಸಹ ಚೆಲ್ಲಾಟವಾಡಲು ಇಚ್ಛಿಸುವುದಿಲ್ಲ. ಹಾಗಿರುವಾಗ ........ ನೀನು ........ ಏಳು ಪ್ರಹರಗಳೂ ಮತ್ತು 57 ಕ್ಷಣಗಳೂ ನನ್ನ ಜತೆ ಇದ್ರೂ ಕೂಡ ........

**ಪಾರ್ವತಿ** : - **(ಅಳು ದನಿ)** ನಾನು ನಿಮಗೆ ಭಾರವೇ? **(ಕಣ್ಣೀರು ಒರೆಸಿಕೊಳ್ಳುತ್ತಾಳೆ)**

**ಶಂಕರ** : - **(ಅವಳ ಮುಖ ತನ್ನ ಕಡೆ ತಿರುಗಿಸಿ)** ಇಷ್ಟಕ್ಕೇ ......

**(ಪಾರ್ವತಿ ಹುಸಿನಗುತ್ತಾಳೆ]** ಪ್ರಪಂಚದ ಭಾರವನ್ನೇ ಹೊತ್ತಿರುವ ನನಗೆ ನೀನು ಭಾರವೇ? ಪ್ರಿಯೇ ಹೇಳು. ನಿನಗೆ ಈ ಶರೀರದ ಮೇಲ್ಯಾಕೆ ಇಷ್ಟೊಂದು ಮೋಹ?

**ಪಾರ್ವತಿ** : - **(ಗರ್ವದಿಂದ)** ಇದನ್ನು ತಿಳ್ಕೋಬೇಕಾದರೆ ತಾವು ಸಾಕ್ಷಾತ್ ಪಾರ್ವತಿಯ ಅವತಾರ ತಳೆಯ ಬೇಕಾಗುತ್ತದೆ

**ಶಂಕರ** : - ಸರಿ ಬಿಡು. ಒಂದೆರಡು ಕ್ಷಣವಾದರೂ ನನ್ನನ್ನು ಬಿಟ್ಟು ಸುತ್ತಾಡಲು ಮನಸ್ಸಾಗಲ್ವೇ?

**ಪಾರ್ವತಿ** : - ಎಂಥಾ ವಿಚಿತ್ರವಾದ ಪ್ರಶ್ನೆ ಕೇಳ್ತಿರಾ?

**ಶಂಕರ** : - ಹೇಳು - ಮನಸ್ಸಾಗೋಲ್ವೇ?

**ಪಾರ್ವತಿ** : - ಇದನ್ನು ಹೇಳೋದಾದ್ರೆ ಇನ್ನೇನು ಉಳೀತು? ದೂರ ಇರೋಣ ಅನ್ಸುತ್ತೆ. ಆದರೆ ಅಷ್ಟೆ ಹತ್ತಿರನೂ ಇರೋಣ ಅನ್ನಿಸುತ್ತೆ. ಇದಕ್ಕೇನು ಹೇಳುವುದು?

**ಶಂಕರ** : - ಹಾಗೇಕಾಗುತ್ತೆ? ನನ್ನನ್ನೇನು ಮರಳು ಮಾಡ್ತೀನಿ ಅಂತ ತಿಳ್ಕೊಂಡಿದ್ದೀಯಾ? ನಿನ್ನಂಥ ಸುಂದರಿಯನ್ನು ಪಡೆಯಬೇಕಾದರೆ ಪುರುಷನ ಸೌಂದರ್ಯವಾದರೂ ಹೇಗಿರಬೇಕು?

**ಪಾರ್ವತಿ** : - **(ನಗುತ್ತಾ)** ಆಮೇಲೆ ಪಶ್ಚಾತ್ತಾಪ ಪಡಬೇಕಾದ್ರೇ? ಪ್ರಭು ಒಂದ್ವೇಳೆ ಎಲ್ಲಾರೂ ತಮ್ಮ ರೂಪ ನೋಡ್ಕೊಳ್ಳೊ ಹಾಗಿದ್ರೆ ಪ್ರಪಂಚ ಅರ್ಧ ಅಹಂಕಾರದಿಂದ ಮುಳುಗಿರುತ್ತಿತ್ತು.

**ಶಂಕರ** : - ನಿಜವಾಗ್ಲೂ ನಿನ್ನ ಮತ್ತು ಎಲ್ಲಾರ ಹೃದಯವನ್ನು ಚುಚ್ಚುವಂತಹ ಸತ್ಯ ........ ಆದ್ರೇ ಈಗ ಪ್ರಯೋಜನವಿಲ್ಲ.

**ಪಾರ್ವತಿ**:- ಈಗಲೂ ಅದರ ಅವಶ್ಯಕತೆಯಿದೆ.

**ಶಂಕರ** : - ಹೇಗೆ?

**ಪಾರ್ವತಿ** : ನನ್ನ ಪ್ರಭುವಿನಲ್ಲಿ ಎಷ್ಟು ಅಹಂಕಾರ ಇದೆ ಅನ್ನೋದು ಇದರಿಂದ ಗೊತ್ತಾಗುತ್ತೆ.

**ಶಂಕರ** : - ಅಹಂಕಾರ ಕೂಡ ಯಾವುದಾದರೊಂದು ಅಂಶಕ್ಕೆ ಅವಶ್ಯವಾಗಿ ಬೇಕಾಗುತ್ತೆ.

ಶಿವನಿಗೆ ತನ್ನ ಮೇಲೆ ಏನೂ ಅಹಂಕಾರ ಇಲ್ಲ ಅಂದ್ರೆ ಜೀವನದಲ್ಲಿ ಏನೂ ಇಲ್ಲ. ನೀನು ನನ್ನನ್ನು ಸುತ್ತಿಕೊಂಡಿರುವ ಕಾರಣ, ಜನರು ನನ್ನನ್ನು ಶವ ಎಂದು ಕರೆಯತೊಡಗಿದ್ದಾರೆ.

**ಪಾರ್ವತಿ** : - ನಿಜವೇ? ನಾನು ನಿನ್ನ ಸ್ಥಾನದಲ್ಲಿದ್ದರೆ ಖಂಡಿತಾ ನಾನು ಅದನ್ನು ಜನರ ಅಭಿನಂದನೆ ಎಂದು ತಿಳಿಯುತ್ತೇನೆ.

**ಶಂಕರ** : - ಇಲ್ಲ, ನನ್ನ ಜಗತ್ತು ಇಷ್ಟು ಉದಾರವಾಗಿಲ್ಲ. ಅದರ ಒಂದೊಂದು ಅಕ್ಷರದಲ್ಲೂ ಗಂಭೀರಾರ್ಥ ತುಂಬಿದೆ, ವೈಪರೀತ್ಯ ತುಂಬಿದೆ. ಮೊಟಕಾಗಿ ಹೇಳುವುದಾದರೆ, ಅವರ ದೃಷ್ಟಿಯಲ್ಲಿ ನಾನು ಹೆಂಡತಿಯ ಹಿಂದೆ ಹುಚ್ಚನಂತೆ ತಿರುಗುತ್ತಿರುವವನು. ಸುಂದರವಾದ ಶಬ್ದಗಳಲ್ಲಿ ಇದು ಸ್ಪಷ್ಟವಾದ ಬೈಗುಳ, ನಿನಗೆ ತಿಳಿಯಿತು ತಾನೆ? ಅವರಿಗೆ ನಾನು ಜೋಗಿಯಂತೆ ಅಲೆಯುತ್ತೇನೆ ಯಾಕೆ ಗೊತ್ತಾ?

**ಪಾರ್ವತಿ** : - ಇಲ್ಲ

**ಶಂಕರ** : - ನಿನ್ನೊಬ್ಬಳನ್ನು ಬಿಟ್ಟು ಮಿಕ್ಕೆಲ್ಲರಿಗೂ ನಾನು ಅಂದ್ರೆ ಹೆದರಿಕೆ. ಇದೇ ನನ್ನ ಮುಖ್ಯ ಉದ್ದೇಶ. ನಿಜ, ನೀನು ಹೇಳಿದ ಹಾಗೇ ನಾನು ಇರೋದು.

**ಪಾರ್ವತಿ** : - **(ತಲೆ ತಗ್ಗಿಸಿ)** ಇಲ್ಲ,ಅದು ನನ್ನ ತಪ್ಪು. ಮರೆತು ಬಿಡಿ ಅದನ್ನ.

**ಶಂಕರ** : - **(ಆಲಿಂಗನ ಮಾಡಿ)** ಗಿರಿಬಾಲೆ, ನಾಚಬೇಡ, ಈ ಹುಲಿಯ ಚರ್ಮ ನಿನ್ನನ್ನು ಹೆದರಿಸಲಾರದು.

**ಪಾರ್ವತಿ** : - ನನಗೆ ಅಭ್ಯಾಸವಾಗಿ ಬಿಟ್ಟಿದೆ.

**ಶಂಕರ** : - ಕೋಮಲವಾದ ಪುಷ್ಪಗಳು ಇರಬೇಕಾದಲ್ಲಿ ಈ ರುದ್ರಾಕ್ಷಿ ಮಾಲೆ .....

**ಪಾರ್ವತಿ** : - ಹೂವಿನ ಹಾರವನ್ನು ಎಷ್ಟೋ ಬಾರಿ ನಂದಿಗೂ ಹಾಕಿದ್ದೀರ

**ಶಂಕರ** : - ನಿನಗೆ ಚುಚ್ಚುವುದಿಲ್ಲವೇ?

**ಪಾರ್ವತಿ** : - ಹಾಗಾದ್ರೆ ನಿಮಗೆ ನನ್ನ ಮೂಗುತಿ ತೊಂದರೆ ಕೊಡುತ್ತೆ ಅಲ್ವೇ?

**ಶಂಕರ** : - ಈ ಸರ್ಪ ಕುಂಡಲಿ .......

**ಪಾರ್ವತಿ** : - ಸಮಸ್ತ ಸೃಷ್ಟಿಯಲ್ಲಿ ನನ್ನ ಪ್ರಭುವಿನ ಕೈಯಲ್ಲಿ ಮಾತ್ರ ಈ ಅಧಿಕಾರ ಇರುವುದು. **(ತಮಾಷೆಯಾಗಿ)** ಆ.....ದರೆ ....... ಹೌದು ... ಒಂದೊಂದು ಸಲ ನನ್ನ ಮಾತು ನಿಮ್ಮನ್ನು ಬೇಸರ ಪಡಿಸುವುದಿಲ್ಲವೆ?

**ಶಂಕರ** : - ಯಾವಾಗ?

**ಪಾರ್ವತಿ** : - ನಿಮ್ಮ ಎತ್ತು ನೆಗೆಯುತ್ತಾ, ನೆಗೆಯುತ್ತಾ ತನ್ನ ಒರಟು ನಾಲಿಗೆಯಿಂದ ನನ್ನ ಕಪೋಲಗಳನ್ನು ತೇವ ಮಾಡಿದಾಗ ........

**ಶಂಕರ** : - ಹೌದು, ಅದನ್ನು ನಾನು ಹೇಗೆ ಸಹಿಸಲಿ?

**(ಇಬ್ಬರೂ ವಿರುದ್ಧ ದಿಕ್ಕಿಗೆ ಮುಖ ಮಾಡಿಕೊಳ್ಳುತ್ತಾರೆ)** ನಿನಗೆ ಈ ಅಸ್ತವ್ಯಸ್ತವಾಗಿರುವ ಜಟೆಗಳನ್ನು ನೋಡಿ ಅಸಹ್ಯವಾಗೋಲ್ಲವೆ?

**ಪಾರ್ವತಿ** : - **(ಧೈರ್ಯವಾಗಿ)** ಇಲ್ಲ

**ಶಂಕರ** : - ನೀನು ಸ್ತ್ರೀಯೋ ಅಥವಾ ........

**ಪಾರ್ವತಿ** : - ಪತ್ನಿ

**ಶಂಕರ** : - **(ಸ್ವಗತ)** ಎಷ್ಟು ಸರಳವಾದ ಉತ್ತರ .......

**ಪಾರ್ವತಿ** : - **(ಸ್ವಗತ)** ಹೆಂಗಸಾಗಿದ್ದೂ ನಾನೇಕೆ ಹೇಳಲಾರೆ. ಇವನ ಜಟೆಗಳು ಪಿಶಾಚಿಗಳ ಜಟೆಯಿಂತಿವೆ. ಇಷ್ಟು ಒತ್ತಾಯ ಮಾಡಿದ ಮೇಲೆ ಒಂದು ಮಾತು ಹೇಳಿಬಿಟ್ಟದ್ರೇ?

**ಶಂಕರ** : - ಪ್ರಿಯೇ, ನನ್ನ ವಿರುದ್ಧವಾಗಿ ಏನೂ ಹೇಳುವುದಿಲ್ಲವೇನು?

**ಪಾರ್ವತಿ** : - {**(ಸ್ವಗತ)** ಹೇಳಿ ಬಿಡಲೇ? ಇವತ್ತಿನ ಚರ್ಚೆಗೆ ಮುಖ್ಯಕಾರಣ ಮಂದಾಕಿನಿ ತಾನೆ? ಅವಳು ನನ್ನ ಕಣ್ಣಿನ ಮುಂದೆ ಇರದಿದ್ರೆ ನಾನು ಯಾವಾಗಲೂ ಭೋಲಿನಾಥನ ತೊಡೆಯ ಮೇಲೆ ಕೂತಿರುತ್ತಿದ್ದನೆ?} **(ಪ್ರಕಾಶ)** ಇಲ್ಲ, ಹೇಳುವಂಥಾದ್ದೇನೂ ಇಲ್ಲ.

**ಶಂಕರ** : - ಹೇಳಬಾರದಂಥದ್ದೇನೋ ಇದೆಯಲ್ಲ?

**ಪಾರ್ವತಿ** : - **(ಆಶ್ಚರ್ಯ)** ಇರಲಿ ಬಿಡಿ. ತಿಳಿಯದೇ ಇರೋದ್ರಲ್ಲೇ ಆನಂದ.

**ಶಂಕರ**: - **(ಕೋಪ)** ಇದೇನು ಚಮತ್ಕಾರ. ಶಿಷ್ಯೆಯಲ್ಲದವಳು ತಾನೇ ಗುರುವಿನ ಸ್ಥಾನದಲ್ಲಿ ಆಸೀನಳಾಗಿದ್ದಾಳೆ.

**[ಪಾರ್ವತಿ ಶಂಕರನ ಕಡೆ ನೋಡುತ್ತಾಳೆ. ಶಂಕರ ತನ್ನ ಹೃದಯದ ಕಡೆ ನೋಡುತ್ತಾನೆ]**

**ಪಾರ್ವತಿ** : - ನಿಮಗೆ ಕೋಪ ಬರುತ್ತೆ ಅಂತ್ಲೇ ನಾನು ಹೇಳಲಿಲ್ಲ. ಆದರೆ ಹೇಳದೆ ಇದ್ರೂ ನೀವು ಕೋಪಿಸ್ಕೋತೀರಿ. ಆದ್ದರಿಂದ ಈಗ ನಾನು ಒಂದು ಶಬ್ದವನ್ನು ನಿಮ್ಮಿಂದ ಮುಚ್ಚಿಡುವುದಿಲ್ಲ ...... ನೋಡಿ ನಾನು ಏಕೆ ನಿಮ್ಮನ್ನು ಬಿಟ್ಟು ಇರೋಲ್ಲ ಅಂದ್ರೇ ಅದಕ್ಕಿರುವುದು ಒಂದೇ ಕಾರಣ. ನೀವು ನನ್ನ ಕಣ್ಮುಂದೆ ಭಾಗೀರಥಿಯನ್ನುಇಟ್ಕೊಂಡಿರುವುದು. ಅದು ನನಗೆ ದೊಡ್ಡ ಸವಾಲಾಗಿ ಕಾಣಿಸಿದೆ. ನಾನೇ ಆಗಲಿ ಅಥವಾ ಇನ್ಯಾರಾದರೂ ಆಗಲಿ ಇದನ್ನು ಸಹಿಸಲಾರರು. ಅಂತಹ ವಿಷಮ ಪರಿಸ್ಥಿತಿ. ನಾನು ನಿಮ್ಮನ್ನು ಹೇಗೆ ಬಿಡಬಲ್ಲೆ?

**ಶಂಕರ** : - ಹಿಮವಂತೆ, ಗಂಗೆಯ ಗರ್ವವನ್ನು ಅಡಗಿಸಲು ಮಾತ್ರ ನಾನು ಅವಳನ್ನು ಜಟೆಗಳಲ್ಲಿ ಹಿಡಿದಿಟ್ಟಿರುವುದು ...... ಇದು ಯಾರಿಗೆ ತಾನೇ ತಿಳಿದಿಲ್ಲ?

**ಪಾರ್ವತಿ** : - ಹಾಗೆ ಹೇಳಬೇಡಿ. ಬೇರೆಯವರ ಗರ್ವ ಮುರಿಯಲು ಎಷ್ಟು ಜನ ತಮ್ಮ ವ್ಯಕ್ತಿತ್ವನ್ನ ತಾವೇ ಕಳಿದುಕೊಂಡಿಲ್ಲಾ ?

**ಶಂಕರ** : - ಇರಬಹುದು. ಆದ್ರೇ ಪಾರ್ವತಿ ಎನ್ನೋ ಒಬ್ಬ ಹೆಂಗಸಿನೊಡನೆ ನಾನು ಮದುವೆಯಾದ್ದನ್ನು ಮರೆಯುವುದು ಹೇಗೆ ಸಾಧ್ಯ?

**ಪಾರ್ವತಿ** : - ಮರೆಯಬೇಕಾದ ಅವಶ್ಯಕತೆಯಾದ್ರೂ ಏನು? ದೇವ ಪುರುಷರಾದ ನಿಮಗೆ ಎಲ್ಲಿ ಬೇಕಾದ್ರೂ, ಯಾವಾಗ ಬೇಕಾದ್ರೂ ತಮ್ಮ ಮನಸ್ಸು ಬಂದಂತೆ ವ್ಯವಹರಿಸುವ ಅಧಿಕಾರ ಇದೆ. ಆದ್ರೇ ........ ಅವರ ಪತ್ನಿಯರಿಗೆ ಬೇರೆ ಪುರುಷರು ............

**ಶಂಕರ** : - **(ಕೋಪದಿಂದ)** ಜಾಸ್ತಿ ಆಯ್ತು. ಅಸೂಯೆಗೂ ಒಂದು ಮಿತಿ ಇದೆ.

**ಪಾರ್ವತಿ** : - **(ಕೋಪದಿಂದ)** ಕೋಪಾ ಬರುತ್ತೆ ಅಂತ ನಾನು ಹೇಳ್ಳಿಲ್ವಾ?

**ಶಂಕರ** : - ಪಾರ್ವತಿ, ಮಹಾ ಅಗ್ನಿಯನ್ನು ಪ್ರಜ್ವಲಿಸುವುದಕ್ಕೆ ಒಂದು ಸಣ್ಣ ಕಿಡಿ ಸಾಕು. ಕೇವಲ ಪಾರ್ವತಿಯೇ ನನ್ನ ಜೀವ ಎಂದು ಬಗೆದಿರುವ ನನ್ನ ಮೇಲೆ ನೀನೇ ಆರೋಪಗಳನ್ನು ಹೊರಿಸಿದರೆ ಕೋಪ ಬರುವುದರಲ್ಲಿ ತಪ್ಪೇನು? ಈ ಚಂದ್ರನ ಬೆಳಕು ಪಾರ್ವತಿಯ ಗುಣ ಮತ್ತು ಸೂರ್ಯನ ಅಗ್ನಿ ಶಿವನ ವ್ಯಕ್ತಿತ್ವ.

ಜಾಹ್ನವಿಯನ್ನು ಯಾವುದೋ ಕಾರಣದಿಂದ ತಲೆಯ ಮೇಲೆ ಅಲಂಕರಿಸಿದ್ದೇನೆ. ಹೃದಯದ ಮಾತಿರಲಿ, ಶುದ್ಧವಾದ ಕಣ್ಣುಗಳಿಂದಲೂ ಮಿಲನ ಪ್ರಸಂಗ ಬಾರದಿರುವಂತೆ

ಮಾಡಿದ್ದೇನೆ. ಹಣೆಯ ಮೇಲಿನ ಚಂದ್ರಲೇಖೆಯೂ ಅಷ್ಟೆ ನಿರ್ಮಲ. ದಕ್ಷಯಜ್ಞದಲ್ಲಿ ಸೋಮದೇವ ನನಗೆ ಅನ್ಯಾಯ ಮಾಡ್ದಾ. ಇದು ಅದರ ಪ್ರಾಯಶ್ಚಿತ್ತ. ಪಾರ್ವತೀ .... ಮಹೇಶ ಯಾರಿಗೂ ಅನ್ಯಾಯ ಮಾಡಲಾರ. ಯಾರ ಅನ್ಯಾಯವನ್ನೂ ಸಹಿಸಲಾರ.

**ಪಾರ್ವತಿ** : - **(ಸ್ನೇಹದಿಂದ)** ಆದರೇ ಕ್ಷಮಿಸುತ್ತಿರಲ್ಲವೇ?

**ಶಂಕರ** : - ಖಂಡಿತಾ ಕ್ಷಮಿಸುತ್ತೇನೆ

**ಪಾರ್ವತಿ** : - **(ಸಂತೋಷ)** ಶಂಕರನ ಸ್ವಾಭಿಮಾನ ಅಂದ್ರೆ ಕಡಿಮೇನಾ? ಅದೇ ಪಾರ್ವತಿಯ ಸರ್ವಸ್ವ ತಂದೆಯಾದ ದಕ್ಷರಾಜನ ಯಜ್ಞದಲ್ಲಿ ಪುತ್ರಿಯಾದ ಸತಿ ತನ್ನ ದೇಹವನ್ನು ಭಸ್ಮಮಾಡಿದರೆ ಅದಕ್ಕೆ ಇನ್ನಾವುದು ಕಾರಣ? ತಂದೆಯಾದವನು ಪತಿಗೆ ಅವಮಾನ ಮಾಡಿದರೆ ........

**ಶಂಕರ** : - ನೋಡು ..........

**ಪಾರ್ವತಿ** : - ಇಲ್ಲ. ನನ್ನ ಮಾತು ಪೂರಾ ಕೇಳಿ ..... ಅದಕ್ಕೆ ನಾನು ಶರೀರ ತ್ಯಾಗ ಮಾಡಿದ್ದು. ಆದರೆ ಆತ್ಮ ಅಮರವಾಗಿತ್ತು. ಅದು ಉಮಳ ಅವತಾರ ಎತ್ತಿತು. ಆಗಲೂ ರುದ್ರನದೇ ಸೇವೆ.

**ಶಂಕರ** : - ಹೀಗೆಂದು ಗಂಗೆಯನ್ನು ಕಂಡು ಅಸೂಯೇ ಪಡುವುದು ಹಾಸ್ಯಾಸ್ಪದವಲ್ಲವೇ?

**ಪಾರ್ವತಿ** : - ಮತ್ತೆ ಅದೇ ಮಾತು ....... ಸಾಯಲಿ ಬಿಡಿ

**ಶಂಕರ** : - ಹಾಗೆ ಸಾಯುವುದಿಲ್ಲ. ಪ್ರಣಯ ಕಲಹ ಅನಾದಿ ಅನಂತ. **(ಪಾರ್ವತಿ ಮೌನ)** ಹಾ! ಒಂದು ವಿಷಯವನ್ನು ನಾವಿಬ್ಬರೂ ಮರೆತೆ ಹೋದೆವಲ್ಲಾ

**ಪಾರ್ವತಿ** : - ಏನದು?

**ಶಂಕರ** : - ಮೊದಲೇ ಜ್ಞಾಪಕ ಬಂದಿದ್ರೇ ಈ ಜಗಳಾನೇ ಆಗ್ತಿರಲಿಲ್ಲ.

**ಪಾರ್ವತಿ** : - ಅದೇನು ಅಂತೀರಿ?

**ಶಂಕರ** : - ಮದನ ನನ್ನ ದಮನ ಮಾಡಲು ಬಂದಿದ್ದು...... ಅವನು ನನ್ನನ್ನು ಸೋಲಿಸಲು ಬಂದಿದ್ದ. ಆದರೇ ನಾನು ಅವನನ್ನೇ ಸುಟ್ಟು ಅನೇಕರನ್ನು ಉಳಿಸಿದೆ. ಇದು ನಿಜ ತಾನೆ?

**ಪಾರ್ವತಿ** : - **(ರೇಗಿಸುತ್ತಾ)** ನನಗೇನೋ ತದ್ವಿರುದ್ಧ ಅನ್ಸುತ್ತೆ.

**ಶಂಕರ** : - ಏನು ಹಂಗಂದ್ರೇ?

**ಪಾರ್ವತಿ** : - ಮದನ ಜೀವಂತದಿಂದಿರೋವಾಗ ರತಿಯಿಂದ ದೊರೆತ ಅವಕಾಶದ ಕ್ಷಣಗಳಲ್ಲೆ ತನ್ನ ಪ್ರಭಾವ ಬೀರುತ್ತಿದ್ದ. ಅದೂ ಒಂದೇ ಜಾಗದಲ್ಲಿ, ಒಂದೇ ವ್ಯಕ್ತಿಯ ಮೇಲೆ .........

**ಶಂಕರ** : - ಆಮೇಲೆ? ಈಗ? **(ರೇಗುತ್ತಾ)** ಏನು ಪ್ರೇತನಾಗಿ .......

**ಪಾರ್ವತಿ** : - **(ನಗುತ್ತಾ)** ಅಲ್ಲ ..... ಅವನ ಬೂದಿಯ ಕಣಗಳು ಈಗ್ಲೂ ಕೈಲಾಸದ ಸುತ್ತಲೂ ಹರಡಿವೆ ಅಂತ ನನ್ನ ನಂಬಿಕೆ

**ಶಂಕರ** : - ಆದ್ರೇ ನೀನು ಈ ಪ್ರಳಯದ ಅಧಿಷ್ಠಾಯಕನಾದ ಪಿನಾಕಪಾಣಿಯ ಬಳಿ ಕುಳಿತೂ ಮುಂದಿನದನ್ನು ಯೋಚಿಸಬಲ್ಲೆಯಾ? **(ಗರ್ವದಿಂದ)** ನಿನ್ನಲ್ಲಿ ಮಹಾನಾರಾಯಣನ ಸಾಹಸವೂ ಇಲ್ಲ ...... ಖಂಡಿತಾ ಇಲ್ಲ

**ಪಾರ್ವತಿ** : - **(ಎದ್ದು)** ಹಾಗೋ .......**(ಹೋಗುತ್ತಾಳೆ)**

**ಶಂಕರ** : - ಇದೇನು ಇದ್ದಕ್ಕಿದಂತೆ .......

**ಪಾರ್ವತಿ** :- ಇದುವರೆಗೂ ಹೃದಯದಲ್ಲಿ ಇದ್ದ ಕಪಟಕ್ಕೆ ಮೊದಲು ಪ್ರಾಯಿಶ್ಚಿತ್ತವಾಗಲಿ. ಇಂದು ಮಾನಸ ಸರೋವರದ ನೀರು ಇನ್ನೂ ಪವಿತ್ರವಾಗುತ್ತದೆ. **(ಪಾರ್ವತಿ ಹೊರಟು ಹೋಗುತ್ತಾಳೆ)**

**ಶಂಕರ** : - **(ಹರ್ಷದಿಂದ)** ಇಂದಿನಿಂದ ನಮ್ಮ ಜಗಳ ಮುಕ್ತಾಯವಾಯಿತು. ಜೀವನ ಪುಷ್ಪದಲ್ಲಿ ಸೌಂದರ್ಯ ಸುವಾಸನೆ ಎರಡೂ ಸೇರಿದಂತೇ ಬೆರೆತು ಹೋಗುತ್ತದೆ. ಇದಕ್ಕೆ ಹೊಸ ಉಪಮಾನ ಹುಡುಕಬೇಕಾದೀತು.

**[ಹೂವಿನ ಗಿಡದ ಬಳಿ ಹೋಗುತ್ತಾನೆ. ಅಲ್ಲಿ ಹೂವು ಕೀಳುತ್ತಿರುವ ಕೋಮಲಾಂಗಿ ಮೋಹಿನಿಯನ್ನು ನೋಡಿ ಸ್ತಂಭೀತನಾಗಿ ನಿಲ್ಲುತ್ತಾನೆ]**

**ಮೋಹಿನಿ** : - ಅರೇ, ಯಾರು ನೀನು? ಏನು ಹಾಗೇಕೆ ದುರುಗುಟ್ಟಿ ನೋಡುತ್ತಿರುವೆ? ದಯವಿಟ್ಟು ಹೋಗು.

**ಶಂಕರ** : - **(ಸ್ವಗತ)** ಯಾರಿರಬಹುದು? ಈ ರೂಪ, ಈ ತೇಜಸ್ಸು, ಈ ಅಂಗಾಂಗಗಳು .......

**ಮೋಹಿನಿ** : - **(ಗಾಬರಿ)** ನೀನು ಮಹೇಶನಲ್ಲ ತಾನೇ?

**ಶಂಕರ** : - ಕೇಳಬೇಕಾದ ಪ್ರಮಯವೇನು ಬಂತು?

**ಮೋಹಿನಿ** : - ದಾರಿಯಲ್ಲಿ ಪೂಜ್ಯನೀಯಳಾದ ಪಾರ್ವತಿ ಸಿಕ್ಕಿದ್ದಳು ಅದಕ್ಕೆ ಕೇಳಿದೆ.

**ಶಂಕರ** : - **(ಸ್ವಗತ)** ನೀನು ಹೇಳುತ್ತಿದ್ದುದು ಖಂಡಿತಾ ನಿಜ ಪಾರ್ವತಿ. ನಾನು ದೃಢ ನಿಶ್ಚಯನಲ್ಲ. ನೀನು ನನ್ನ ಹತ್ತಿರ ಇದ್ದರೆ ಈ ತುಚ್ಛವಾದ ಆಸೆ ಉಂಟು ಮಾಡುತ್ತಿರಲಿಲ್ಲ. ನೀನು ಪುಣ್ಯ ಸಂಪಾದನೆ ಮಾಡಲು ಹೊರಟೆ..... ಆದರೆ ನಾನು ಪಾಪದ ಗಂಟು ಹೊರುತ್ತಿದ್ದೇನೆ ..... **(ಮೋಹಿನಿಯ ಸೌಂದರ್ಯವನ್ನು ಆರಾಧಿಸುತ್ತಾ)** ಎಂಥಾ ಯೌವನ!............

**[ಶಂಕರ ಮೋಹಿನಿಯ ಕಡೆ ಹೆಜ್ಜೆ ಹಾಕುತ್ತಾನೆ. ಅವಳು ಹಿಂಜರಿಯುತ್ತಾಳೆ]**

**ಮೋಹಿನಿ** : - ನಿನ್ನ ಇಚ್ಛೇಯಾದರೂ ಏನು?

**ಶಂಕರ** : - **(ಸ್ವಗತ)** ಇಚ್ಛೆಯಲ್ಲದಿದ್ರೇ ....... ಧಿಕ್ಕಾರವೇ ಇರಲಿ

**ಮೋಹಿನಿ** : - ನೀವು ಮಹಾ ಪುರುಷರಲ್ಲವೇ?............ನನ್ನಂಥ ತುಚ್ಛ ಜೀವಿ ನಿಮ್ಮ ಕೃಪಕಟಾಕ್ಷವನ್ನು ಪಡೆಯುವುದು........

**ಶಂಕರ** : - **(ಮೌನ)**

**ಮೋಹಿನಿ** : - ನೀವು ಮೌನ ವ್ರತ ಹಿಡಿದಿದ್ದರೆ ತಂಪಾದ ಸ್ಥಳವನ್ನು ಹುಡುಕಿಕೊಂಡು ಹೋಗಿ. ವೃಕ್ಷವೊಂದರ ಕೆಳಗೆ ಸುತ್ತಾಡಿ.

**ಶಂಕರ** : - **(ಮುಂದುವರೆಯುತ್ತಾ)...ಇಲ್ದೆ ಇದ್ರೇ ......**

**ಮೋಹಿನಿ** : - **(ಹಾರುತ್ತಿರುವ ವಸ್ತ್ರವನ್ನು ಹಿಡಿದು)** ಇಲ್ದೆ ಇದ್ರೇ ಬೇಸರ ಕಳೆಯಲು ಹಾಡು ಹೇಳಿಕೊಳ್ಳಿ. **( ಅಂಗವಿನ್ಯಾಸ ಮಾಡುತ್ತಾಳೆ. ಶಂಕರ ಉನ್ಮಾದನಾಗಿದ್ದಾನೆ)** ನನ್ನನ್ನು ನೋಡಿ ಯಾಕೆ ಹುಚ್ಚನಾಗಿರುವೆ? ನಿಮ್ಮ ಉಮಾ ಯುವತಿಯಾಗಿದ್ದಾಗ .... ನಿಮ್ಮ ಉಮಾ ....

**[ಶಂಕರ ಕಾಮಾತುರನಾಗಿ ಮೋಹಿನಿಯನ್ನು ತಬ್ಬಿಕೊಳ್ಳಲು ಹೋಗುತ್ತಾನೆ]**

**ಮೋಹಿನಿ** : - **(ಬಿಡಿಸಿಕೊಳ್ಳುತ್ತಾ)** ಆಗಾ ಇದೇ ಆನಂದ ಕೊಡ್ತಾ ಇದ್ದಳು ....**(ಬಿಡಿಸಿಕೊಂಡು ಓಡುತ್ತಾಳೆ. ಪಾರ್ವತಿ ಮೊದಲಲ್ಲಿದ್ದ ಜಾಗದಲ್ಲಿ ಕಾಣಿಸಿಕೊಳ್ಳುತ್ತಾಳೆ]**

**ಪಾರ್ವತಿ** : - **(ಶಂಕರನನ್ನು ನೋಡದೆ)** ಎಲ್ಲಿದ್ದೀರಿ ನೀವು? ಮತ್ತೇ ತಪಸ್ಸಿನ ಹುಚ್ಚು ಹಿಡೀತಾ? **(ಅಷ್ಟರಲ್ಲಿ ಮೋಹಿನಿ ಬಂದು ಅವಳ ಪಾದಗಳನ್ನು ಹಿಡಿದು)**

**ಮೋಹಿನಿ** : - ರಕ್ಷಿಸು ತಾಯೀ .....

**ಪಾರ್ವತಿ** : - **(ಅವಳನ್ನು ಎತ್ತಿ)** ಯಾರು ನೀನು? ಯಾರಿಂದ ರಕ್ಷಿಸಬೇಕಾಗಿದೆ?

**ಮೋಹಿನಿ** : - ನಾನು ..... ನಾನು ......**[ಪಾರ್ವತಿ ಬೆಚ್ಚಿ ಬೀಳುತ್ತಾಳೆ. ಮೋಹಿನಿಯ ಜಾಗದಲ್ಲಿ ಪುರುಷನೊಬ್ಬನು ಇದ್ದಾನೆ. ಆದರೆ ಅವನನ್ನು ಗುರ್ತಿಸುತ್ತಲೂ ಶಾಂತಳಾಗುತ್ತಾಳೆ. ಅಷ್ಟರಲ್ಲಿ ಶಂಕರ ಮೋಹಿನಿಯನ್ನು ಹುಡುಕಿಕೊಂಡು ಬರುತ್ತಾನೆ]**

**ಶಂಕರ** : - **(ದೂರದಿಂದ)** ಓಹೋ! ಪಾರ್ವತಿ ... ಆದ್ರೇ ಇವನು ಯಾರು?

**ಪಾರ್ವತಿ** : - ಬನ್ನಿ. ಏನು ಹುಡುಕ್ತಾ ಇದ್ದೀರಾ?

**ಪುರುಷ** : - **(ಅಟ್ಟಹಾಸದಿಂದ)** ದಯಮಾಡಿಸಿರಿ, ಮೋಹಿನಿ ಬರುತ್ತಿದ್ದಾಳೆ.

**ಶಂಕರ** : - **(ಸಂಕೋಚದಿಂದ)** ಯಾರು? ನಾರಾಯಣನೇ? ನಾರಾಯಣ, ನಾರಾಯಣ, ನಾರಾಯಣ.

**(ತೆರೆ)**

## ಪಾತ್ರವರ್ಗ

ಹಂಸಾ

ಸುರುಮಾ

ವಿಮಲಾ

ಉರ್ಸುಲಾ

ನರೇಶ

ಜಗದೀಶ

ಜವಾನ

ಧೀಮಂತ

## ದೃಶ್ಯ-1

**[ಸಮಯ:- ಬೆಳಗ್ಗೆ ಹನ್ನೊಂದು ಘಂಟೆ. ಸ್ಥಾನ : - ನರೇಶನ ಮನೆಯ ಒಂದು ಕೋಣೆ. ಹಂಸಾ ಹೂದಾನಿಯನ್ನು ಸರಿಪಡಿಸುತ್ತಿದ್ದಾಳೆ. ಆಗ ಧೀಮಂತ ಪ್ರವೇಶಿಸುತ್ತಾನೆ]**

**ಹಂಸಾ** : -ಬನ್ನಿ, ಹೇಗಿದ್ದೀರಿ?

**ಧೀಮಂತ** : - ನರೇಶ ಎಲ್ಲಾದ್ರೂ ಹೋಗಿದಾನಾ?

**ಹಂಸ** : - ಹೌದು. ಎಂಟು ಗಂಟೆಗೆ ಆಫೀಸಿಗೆ ಹೋದರು. ಇನ್ನೇನು ಬರಬಹುದು. ನೀವು ಕೂತ್ಕೊಳ್ಳಿ.

**(ಇಬ್ಬರೂ ಕೂಡುತ್ತಾರೆ. ಸ್ವಲ್ಪ ಹೊತ್ತಾದ ಮೇಲೆ)**

**ಧೀಮಂತ** : - ನೀವು ವಸಂತೋತ್ಸವಕ್ಕೆ ಹೋಗಿದ್ರಾ? ನಾನಂತೂ ಹೋಗ್ಲಿಲ್ಲ

**ಹಂಸಾ** : - **(ಏನೋ ಯೋಚಿಸುತ್ತಾ)** ಇಲ್ಲ. ನಾನೂ ಹೋಗ್ಲಿಲ್ಲ

**ಧೀಮಂತ** : - ಅರೆ! ಏನೋ ಚಿಂತೆ ಮಾಡುತ್ತಿರುವೆಯಲ್ಲಾ?

**ಹಂಸಾ** : - ಏನಿಲ್ಲ. ಹೀಗೇನೇ! ನಾನು ಹೋಗ್ಲಿಲ್ಲ

**ಧೀಮಂತ** : - ನರೇಶನು ಹೋಗ್ಲಿಲ್ಲವೇನು? ಅವನು ಹೋಗಿಯೇ ಇರಬೇಕು

**(ಹಂಸ ಧೀಮಂತನ ಕಡೆ ನೋಡುತ್ತಾಳೆ)**

**ಹಂಸಾ** : - ಹೌದು ಅವರು ಹೋಗಿದ್ದರು

**(ಹಂಸಾಳ ಮುಖಭಾವ ಬದಲಾಗುತ್ತದೆ. ಧೀಮಂತ ಇದನ್ನು ಗಮನಿಸುತ್ತಾನೆ)**

**ಧೀಮಂತ** : - **(ವ್ಯಗ್ರತೆಯಿಂದ)** ನಿನಗೆ ಬೇಜಾರಾಯ್ತೇನು? ಕ್ಷಮಿಸು. ಸುಮ್ಮನೆ ಹಾಗೇ ಕೇಳಿದೆ ಅಷ್ಟೆ. ಎಲ್ರೂ ಹೀಗೇ ತಾನೆ ಮಾತಾಡೋದು? ನಾನು ಹಾಗೇನೇ ಕೇಳ್ಬಿಟ್ಟೆ. ನನಗೇನು ಗೊತ್ತು ನಿನಗೆ ...........

**(ಧೀಮಂತ ವಾಕ್ಯ ಪೂರ್ತಿ ಮಾಡುವುದಿಲ್ಲ. ಅವನಿಗೆ ಹಂಸಾ ಮಾತು ಕೇಳಿಸಿ ಕೊಳ್ಳುತ್ತಿಲ್ಲ ಎಂದು ಅನ್ನಿಸುತ್ತದೆ. ಸ್ವಲ್ಪ ಹೊತ್ತು ಸುಮ್ಮನಿರುತ್ತಾನೆ. ಧೀಮಂತನ ದೃಷ್ಟಿ ಮೇಜಿನ ಮೇಲಿರುವ ಚಿಹ್ನೆಗಳ ಮೇಲೆ ಬೀಳುತ್ತದೆ)**

............ ಹಂಸಾ ಗೊತ್ತಾಯ್ತು, ಮತ್ತೆ ಜಗಳ ಆಗಿರಬೇಕು

**ಹಂಸಾ** : - ಆಗಿರಬಹುದು

**ಧೀಮಂತ** : - ನಿನ್ನ ಆರೋಗ್ಯ ಸರಿ ಇಲ್ವೇನು?

**ಹಂಸಾ** : - **(ಸಹಜ ನಗೆ ಬೀರುತ್ತಾ)** ಏಕೆ ಚೆನ್ನಾಗಿದೆಯಲ್ಲಾ. ಯಾಕೆ ನೀವು ಕೇಳಿದ್ದು?

**ಧೀಮಂತ** : - ಯಾಕಂದ್ರೇ, ಆ ದಿನದ ಜಗಳ ಆದ ಮೇಲೆ, ಒಂದು ಚಿಕ್ಕ ಮಗೂನೂ ಜಗಳ ಅಂದ್ರೆ ಭಯ ಬೀಳ್ತೇಕು. ನಿನಗೇ ತಿಳಿದಿದೆಯಲ್ಲಾ, ಯಾರಾದರೂ ಈ ದಿನ ದಶಮಿ ಇರಬಹುದು ಅಂದರೆ ನೀನು .........

**ಹಂಸಾ** : - ಈ ಸಣ್ಣ ವಿಷಯದ ಬಗ್ಗೆ ನನಗೇನು ಗೊತ್ತು. ನನಗಂತೂ ಎಲ್ಲಾ ದೇಶಗಳ ಹೆಸರುಗಳು ಸಹಾ ಗೊತ್ತಿಲ್ಲ

**ಧೀಮಂತ** : - ಅದು ನನಗೂ ಗೊತ್ತಿಲ್ಲ ಬಿಡು. ಆದರೆ ಇದರಿಂದ ಏನು ಲಾಭ?

**ಹಂಸಾ** : - ನಿಮ್ಮ ವಿಷಯ ಬೇರೆ. ನೀವೂ ಕಲಿತ್ಕೋಬಹುದು

**ಧೀಮಂತ** : - ಯಾಕೆ. ನೀನು ಕಲಿಯೋದು ಅಸಾಧ್ಯವ? ನೀನು 200 ವರ್ಷಗಳ ಹಿಂದೆ ಇದ್ದಂತೆ ಮಾತಾಡ್ತಿ. ಅದೆ ಉರ್ಸುಲಾನ ನೋಡು

**ಹಂಸಾ** : - ಅವಳ ಮಾತು ಬೇರೆ. ಅವಳು ಎಷ್ಟೊಂದು ಓದಿದ್ದಾಳೆ. ಜಗದೀಶ ಅವಳನ್ನು ಬಿ.ಎ. ಮಾಡಿಸಿದ್ದಾನೆ. ನನಗೆ ನನ್ನ ತಂದೆ ತಾಯಿಗಳು ಏನೂ .........

**ಧೀಮಂತ** : - ಅವಳು ಬಿ.ಎ. ಆದ್ರೂ, ಅಷ್ಟಕಷ್ಟೇ. ನನಗೇನು ಅನ್ಸುತ್ತೆ ಗೊತ್ತಾ? ನಿನಗೆ ಬರೋದ್ರಲ್ಲಿ ಅರ್ಧನೂ ಅವಳಿಗೆ ಬರೋದಿಲ್ಲ

**ಹಂಸಾ** : - ನೀವೊಬ್ಬರೇ ಈ ತರ ಹೇಳೋದು

**ಧೀಮಂತ** : - ಇನ್ಯಾರು ಹೇಳೋದಿಲ್ಲೇನು?

**ಹಂಸಾ** : - **(ನಕ್ಕು)** ...... ಇಲ್ಲಾ ......

**ಧೀಮಂತ** : - ನರೇಶನ್ನ ಬಿಟ್ಟು ಎಲ್ಲಾರೂ ಹೇಳ್ತಾರೆ. ಅವನೊಬ್ಬ ಮೂರ್ಖ.

**ಹಂಸಾ** : - ಹಾಗಂತ ಹೇಳಬೇಡಿ. ಹೋಗಲಿ ಬಿಡಿ. ಇಂತಹ ವಿಷಯಗಳಿಗೂ ನನಗೂ ಏನು ಸಂಬಂಧ? ಹೌದು ಜಗಳ ಆಯ್ತು. ಏನಾಯ್ತು ಈಗ?

**(ಧೀಮಂತ ಹಂಸಾಳ ಕಡೆ ನೋಡುತ್ತಾ .......)**

**ಧೀಮಂತ** : - ಅವನು ಎಷ್ಟು ಭಾಗ್ಯಶಾಲಿ

**ಹಂಸಾ** : - ಏಕೆ? ನಿಮಗೆ ಹೊಟ್ಟೆಕಿಚ್ಚಾ?

**ಧೀಮಂತ** : - ಏಕೆ? ಇರಬಾರದೇನು? ಇಂಥ ಹೆಂಗಸನ್ನ .........

**[ಜವಾನ ಬರುತ್ತಾನೆ]**

**ಜವಾನ**:- ಅಮ್ಮಾವ್ರೇ. ಜಗದೀಶ ಚಂದ್ರರ ಮನೆಯಿಂದ ಆಳು ಬಂದಿದ್ದಾನೆ. ಸಾಹೇಬ್ರೂ ಅಲ್ಲೇ ಊಟ ಮಾಡುತ್ತಾರಂತೆ. ನೀವು ಕಾಯಬಾರದಂತೆ.

**[ಹಂಸಾಳ ಮುಖ ಜೋಲು ಬೀಳುತ್ತದೆ]**

**ಹಂಸಾ**:- ಆಳು ಹೊರಟು ಹೋದ್ನಾ?

**ಜವಾನ** : - ಇಲ್ರಾಮ್ಮ

**ಹಂಸಾ** : - ಅವನ್ನಾ ಇಲ್ಲಿ ಬಾ ಅಂತ ಹೇಳು

**[ಜವಾನ ಹೋಗುತ್ತಾನೆ]**

**ಧೀಮಂತ** : - ನೀನು ಇನ್ನೂ ಊಟ ಮಾಡಿಲ್ಲಂತ ಕಾಣುತ್ತೆ

**ಹಂಸಾ** : - ಹೌದು. ಅದು ಅಲ್ಲದೆ ಇವತ್ತು .......**(ಮಾತು ನಿಲ್ಲಿಸುತ್ತಾಳೆ)**

**ಧೀಮಂತ** : - ಏನು? ಈ ದಿನ

**ಹಂಸಾ** : - ಈ ದಿನ ವಿಶೇಶವಾದ ಕಾರಣಾನೂ ಇದೆ

**ಧೀಮಂತ** : - ಏನದು? ಏನಾದರೂ ನಿಮ್ಮ ಸ್ವಂತ ವಿಷಯಾನಾ?

**ಹಂಸಾ** : - ಅಂತಹದೇನು ಇಲ್ಲ. ಇವತ್ತು ನನ್ನ ಹುಟ್ಟು ಹಬ್ಬ

**[ಒಬ್ಬ ಗಂಡಸಿನ ಪ್ರವೇಶ]**

............ ಓ! ನೀನಾ ಬಂದಿರೋದು

**ಬಂದವನು** : - ಹೌದ್ರಮ್ಮ

**ಹಂಸಾ** : - ಏನು ಹೇಳಿದ್ರು ಸಾಹೇಬ್ರು ನಿನಗೆ?

**ಬಂದವನು** : - ಅದೇ. ಸಾಹೇಬ್ರು ಅಲ್ಲೇ ಊಟ ಮಾಡ್ತಾರಂತೆ

**ಹಂಸಾ** : - ಏನು ಇವತ್ತು ವಿಶೇಷ?

**ಬಂದವನು** : - ಇವತ್ತು ಉರ್ಸುಲಾ ಅಮ್ಮಾವ್ರ ಹುಟ್ಟಿದ ಹಬ್ಬ

**(ಹಂಸಾ, ಧೀಮಂತ ಒಬ್ಬರನ್ನೊಬ್ಬರು ನೋಡುತ್ತಾರೆ. ತಕ್ಷಣ ಹಂಸಾ ತನ್ನ ದೃಷ್ಟಿಯನ್ನು ಬೇರೆ ಕಡೆ ತಿರುಗಿಸುತ್ತಾಳೆ)**

**ಹಂಸಾ** : - ಸರಿ. ನೀನು ಹೋಗು

**ಧೀಮಂತ** : - ಸಾಹೇಬ್ರು ಅಲ್ಲಿಗೆ ಎಷ್ಟು ಹೊತ್ತಿಗೆ ಬಂದ್ರು?

**ಬಂದವನು** : - ಸುಮಾರು ಎಂಟು ಗಂಟೆಯ ಸಮಯಕ್ಕೆ ಬಂದ್ರು **(ಹೋಗುತ್ತಾನೆ)**

**(ಧೀಮಂತ ತುಟಿ ಕಚ್ಚಿಕೊಳ್ಳುತ್ತಾನೆ. ಹಂಸಾ ಮುಖ ಹಿಂಡುತ್ತಾಳೆ)**

**ಧೀಮಂತ** : - ಸರಿ ಹಂಸಾ. ನಾನಿನ್ನು ಬರಲಾ? ನಿನ್ನ ಹುಟ್ಟಿದ ಹಬ್ಬ ಇವತ್ತು ಅಂತ ಗೊತ್ತಿದ್ರೇ ಏನಾದರೂ ಚಿಕ್ಕ ಉಡುಗೊರೆಯನ್ನಾದರೂ ನಿನಗೆ ತರ್ತಿದ್ದೆ. ನರೇಶನಿಗೆ ಹೇಳು. ನಾನು ಬೆಳಗ್ಗೆ ಬರ್ತಿನೀಂತ

**ಹಂಸಾ** : - ನಿಮ್ಮದು ಊಟ ಆಯ್ತೇನು? **(ಧೀಮಂತ ಯೋಚನೆ ಮಾಡಿ)**

**ಧೀಮಂತ** : - ಆಯ್ತು ಬಿಡು

**(ಇಬ್ಬರೂ ಹೋಗುತ್ತಾರೆ)**

**(ತೆರೆ ಬೀಳುತ್ತದೆ)**

## ದೃಶ್ಯ - 2

**(ಜಗದೀಶ ಚಂದ್ರನ ಮನೆಯ ದಿವಾನ ಖಾನೆ. ಜಗದೀಶ ಚಂದ್ರ, ವಿಮಲ, ಉರ್ಸುಲಾ ಮತ್ತು ನರೇಶ್ ಕುಳಿತಿ ದ್ದಾರೆ)**

**ವಿಮಲ** : - **(ನರೇಶ ಸುತ್ತಲೂ ನೋಡಿ)** ಇವತ್ತು ಊರ್ಸುಗೆ ಎರಡರಷ್ಟು ಆನಂದ ಅಲ್ವೇ ಊರ್ಸು?

**(ಉರ್ಸುಲಾ ನೆಲ ನೋಡುತ್ತಾಳೆ)**

**ನರೇಶ** : - ಹಾಗೇನು? ಏನು ಸಮಾಚಾರ?

**(ನರೇಶ ಉರ್ಸುಲಾಳನ್ನು ನೇರವಾಗಿ ನೋಡುತ್ತಾನೆ. ಅವಳು ಸುಮ್ಮನಿರುತ್ತಾಳೆ)**

**ವಿಮಲ** : - ಕಲ್ಕತ್ತೆಯ ಪ್ರದರ್ಶನಕ್ಕೆ ಚಿತ್ರ ಕಳುಹಿಸಿದ್ದಳು. ಬಹುಮಾನ ಬಂತು.

**ನರೇಶ** : - ಹೌದಾ? ತುಂಬಾ ಸಂತೋಷ. ಏನು ಬಹುಮಾನ ಬಂತು?

**ಉರ್ಸುಲಾ** : - ಬಹುಮಾನ ದೊಡ್ಡದೇನಲ್ಲಾ. ಕೇವಲ ೫ರೂ ಅಷ್ಟೆ.

**ನರೇಶ** : - ಆದರೇನಂತೆ? ಬಹುಮಾನ ಬಹುಮಾನಾನೇ. ಅದರ ಬೆಲೆ ಎಷ್ಟು ಅನ್ನೋದು ಮುಖ್ಯವಲ್ಲ. ಬಹುಮಾನ ಎಷ್ಟು ಜನಕ್ಕೆ ಹಂಚಿಕೆ ಆಯ್ತೋ?

**ಉರ್ಸುಲಾ** : - ಹದಿನೈದು ಜನಕ್ಕೆ

**ನರೇಶ** : - ಇನ್ನೂ ಆ ಚಿತ್ರ ವಾಪಸ್ಸು ಬಂದಿಲ್ವೇನು? ಈ ವಿಷಯ ನೀನು ನನಗೆ ತಿಳಿಸಲೇ

ಇಲ್ವೇ?

**ಉರ್ಸುಲಾ** : - ಏನು ಮಹಾ ಅಂತ ಹೇಳೋದು

**ನರೇಶ** : - ಹಾಗಂದ್ರೇನು. ನಮ್ಮ ಹೆಂಗಸರಿಗೆ ಸಂಬಂಧಿಸಿದಂತೆ ಇದೊಂದು ಅಪೂರ್ವವಾದ ಘಟನೆ ಅನ್ನೇಕು

**(ವಿಮಲ ಎದ್ದು ಹೋಗುತ್ತಾಳೆ)**

**ಜಗದೀಶ** : - **(ನರೇಶನ ಜೊತೆ)** ಯಾಕೆ. ನಿನಗೂ ಆಸಕ್ತಿ ಇದೆಯೇನು?

**ನರೇಶ** : - ಇಲ್ಲಾ ಮಹರಾಯ. ಉರ್ಸುಲಾಳ ಚಿತ್ರ ನೋಡೋದರಲ್ಲಿ ಮಾತ್ರ ಆಸಕ್ತಿ ಇದೆ ಅಷ್ಟೆ

**ಜಗದೀಶ** : - ಆಮೇಲೆ ಸಂಗೀತ?

**ನರೇಶ** : - ಕೇಳೋದ್ರಲ್ಲಿ ಆಸಕ್ತಿ ತುಂಬಾ ಇದೆ

**ಉರ್ಸುಲಾ** : - ನನಗೂ ಆ ಆಸಕ್ತಿ ಇದೆ

**ನರೇಶ** : - ಹಾಡೋದಕ್ಕೆ ಆಸಕ್ತಿ ಇಲ್ವೇನೂ?

**ಜಗದೀಶ** : - ಯಾರಿಗೆ? ಉರ್ಸೂಲಾಗಾ?

**ನರೇಶ** : - ಇಲ್ಲಾ ಅಂತೀಯಾ?

**ಜಗದೀಶ** : - ಅವಳಿಗಿಂತ ನಾನೇ ಚೆನ್ನಾಗಿ ಹಾಡ್ತೀನಿ. ಏನು ಹೇಳ್ತಿ ಉರ್ಸುಲಾ?

**ಉರ್ಸುಲಾ** : - ಹೌದು. ನೀನು ಕಲಿತ್ತಿದ್ದೀಯ?

**ನರೇಶ** : - ನೀನು ಕಲಿತರೆ ಚೆನ್ನಾಗಿ ಹಾಡಬಹುದು. ನಿನ್ನ ಕಂಠ ತುಂಬಾ ಚೆನ್ನಾಗಿದೆ

**ಜಗದೀಶ** : - ಯಾರಯ್ಯ ಹೇಳಿದ್ದು ಹಾಗೆ?

**ನರೇಶ** : - ಹೇಳ್ಬೇಕಾದ್ರೆ ಯಾರಾದ್ರೂ ಆಗಿಲ್ಲ. ಹೇಳಿದ್ದು ಸರಿಯಾಗಿದೆ.

**(ಉರ್ಸುಲಾ ಏಳುತ್ತಾಳೆ. ಜಗದೀಶ ನಂತರ ಒಳಗೆ ಹೋಗುತ್ತಾನೆ. ಉರ್ಸುಲಾ ಗುನುಗುನಿಸುತ್ತಾಳೆ. ನರೇಶ ಕಿಟಕಿಯಿಂದ ಇಣುಕಿ ನೋಡುತ್ತಾನೆ. ಸ್ವಲ್ಪ ಹೊತ್ತಾದ ಮೇಲೆ ಉರ್ಸುಲಾ ಕೈಯಲ್ಲಿ ಪುಸ್ತಕ ಹಿಡಿದುಕೊಂಡು ಬಂದು ಕುಳಿತುಕೊಳ್ಳುತ್ತಾಳೆ)**

**ನರೇಶ** : - ಯಾವುದು ಪುಸ್ತಕ?

**ಉರ್ಸುಲಾ** : - ವಿವಾಹ ಸಫಲವಾಗುವುದು ಹೇಗೆ?

**ನರೇಶ** : - **(ಆಶ್ಚರ್ಯ)** ವಿವಾಹ ಸಫಲವಾಗುವುದು ಹೇಗೆ?

**ಉರ್ಸುಲಾ** : - ಹೌದು. ಯಾಕೆ?

**ನರೇಶ** : - ಹೆಸರು ವಿಚಿತ್ರವಾಗಿದೆ ಅಲ್ವಾ?

**ಉರ್ಸುಲಾ** : - ಏಕೆ? ವಿಚಿತ್ರ!

**ನರೇಶ** : - ವಿವಾಹವೇನು ವ್ಯಾಪಾರಾನ? ಮನುಷ್ಯ ಕಷ್ಟಪಟ್ಟು ಸಫಲಗೊಳ್ಳಿಸುವುದಕ್ಕೆ. ವಿವಾಹ? ಇದನ್ನು ಕುರಿತು ಪುಸ್ತಕದಲ್ಲಿ ಬರೆಯುವಂತಹದ್ದೇನಿದೆ. ಇದೇನು ಗಹನವಾದ ವಿಷಯಾನಾ?

**ಉರ್ಸುಲಾ** : - ಯಾಕೆ? ಗಹನವಾದ ವಿಷಯ ಅಲ್ವಾ? ಇಂಥ ಪವಿತ್ರ ........

**ನರೇಶ** : - ಬರೇ ಸುಳ್ಳು. ಬೊಗಳೆ. ವಿವಾಹ ನಿಜವಾಗಿಯೂ ಒಂದು ಸಣ್ಣ ವಿಷಯ. ಇದನ್ನ ಗಹನ ಅಂಥ ತಿಳಿದಷ್ಟೂ ನಿರಾಶೇನೇ ಆಗುತ್ತೆ. ಈಗ ನೋಡು ನೀನಿರುವುದು ಬಾಡಿಗೆ

ಮನೆ ತಾನೇ?

**ಉರ್ಸುಲಾ** : - ಹೌದು

**ನರೇಶ** : - ನಿನಗೆ ಬೇಕಾದ್ದೆಲ್ಲಾ ಇದರಲ್ಲಿ ಇದೆ ಅಂತಿಯಾ? ಅಂದ್ರೆ ನೀನು ಹೇಗಿರಬೇಕೂಂತ ಬಯಸುತ್ತಿಯೋ ಹಾಗಿದೆಯೇ ಈ ಮನೆ?

**ಉರ್ಸುಲಾ** : - ಇಲ್ಲ. ಬಾಡಿಗೆ ಮನೆಯಲ್ಲಿ ನಾವು ಬಯಸಿದ್ದೇಲ್ಲಾ ಇರೋದು ಹೇಗೆ ಸಾಧ್ಯ?

**ನರೇಶ** : - ದಿನಾ ಈ ವಿಷಯವಾಗಿ ನೀನು ಗೊಣಗುತ್ತಿಯಲ್ಲ?

**ಉರ್ಸುಲಾ** : - ಇಲ್ಲ. ಆದ್ರೇ ನೋಡು, ಇದೇನು ಅಂತ ದೊಡ್ಡ ವಿಷಯ ಅಲ್ಲ, ವಿವಾಹ ಅಂದ್ರೇ

**ನರೇಶ** : - ಹೌದು. ವಿವಾಹ ಮಹಾ ದೊಡ್ಡ ವಿಷಯ. ಅದರ ಬಗ್ಗೆ ಗೊಣಗೋ ಅಧಿಕಾರ ಸಿಗಬೇಕು. ನಿಜ ಸ್ಥಿತಿ ಹೇಗಿದೆ ಅಂದ್ರೇ ಸ್ತ್ರೀ ಪುರುಷರಿಬ್ಬರೂ ವಿವಾಹ ಒಂದು ಸಾಮಾನ್ಯ ವಿಷಯ ಅಂತ ತಿಳಿದು ಬಿಟ್ರೆ, ಇಷ್ಟೊಂದು ನಿರಾಶೆ, ದುಃಖ, ಗೊಣಗಾಟ ಇರೋದೇ ಇಲ್ಲ. ಬಾಡಿಗೆ ಮನೆಯಲ್ಲಿ ಹೇಗೋ ನಿಭಾಯಿಸಿಕೊಂಡು ಹೋದ ಹಾಗೆ ವಿವಾಹ ಆದಮೇಲು ನಿಭಾಯಿಸಿಕೊಂಡು ಹೋಗಬಹುದು. ಅಂದ್ರೆ ಗಂಡ ಹೆಂಡರ ದೃಷ್ಟಿ ವಿಶಾಲವಾಗಿರಬೇಕು ಅಷ್ಟೇ.

**ಉರ್ಸುಲಾ** : - ನೀವು ಮತ್ತು ಹಂಸಾ ಬೆಹನ್ ಇದೇ ರೀತಿ ಜೀವಿಸ್ತೀರಾ?

**ನರೇಶ** : - ಅವಳ ಮಾತು ಬಿಡು. ಪಾಪ ಅವಳಿಗೆ ತನ್ನದೇ ಆದ ದೃಷ್ಟಿ ಕೋಣ ಎಲ್ಲಿ ಬಂತು. ವಿವಾಹ ಅಂದ್ರೇ ಏನೂ ಅಂತನೂ ಅವಳಿಗೆ ಗೊತ್ತಿಲ್ಲ.

**ಉರ್ಸುಲಾ** : - ಅರೆ, ವ್ಹಾ

**ನರೇಶ** : - ನಾನು ಹೇಳ್ತಿರೋದು ನಿಜ

**ಉರ್ಸುಲಾ** : - ನಿಜ ಏನು ಬಂತು. ಪುರುಷರಿಗೆ ಇದು ಅಲ್ಪ ವಿಚಾರ ಇರಬಹುದು. ಸ್ತ್ರೀಯರಿಗೆ ಹಾಗಲ್ಲ. ವಿವಾಹ ಅಂದರೆ ಜೀವನದ ಒಂದು ಆಸೆ, ತೃಪ್ತಿ ..........

**ನರೇಶ** : - ಇವೆಲ್ಲಾ ನಿನ್ನಂತವರಿಗೆ

**ಉರ್ಸುಲಾ** : - ಏನಿಲ್ಲ. ಎಲ್ಲಾ ಹೆಂಗಸರೂ ಒಂದೇ ಗುಡಿಸಿಲಿನಲ್ಲಿರಲಿ, ಅರಮನೆಯಲ್ಲಿರಲಿ, ಹೆಂಗಸು ಹೆಂಗಸೇ

**ನರೇಶ:-** ಆದರೆ ಒಬ್ಬ ಹೆಂಗಸಿಗೂ ಮತ್ತೊಬ್ಬ ಹೆಂಗಸಿಗೂ ವ್ಯತ್ಯಾಸವಿದೆ

**ಉರ್ಸುಲಾ** : - ಇರಬಹುದು. ಆದರೇ ಈ ಭಾವನೆ ಎಲ್ಲಾರಲ್ಲೂ ಇರುತ್ತೆ

**ನರೇಶ** : - ಯಾರಿಗೆ ಗೊತ್ತು. ನನಗೇನೋ ಹಾಗನ್ಸೋಲ್ಲ

**ಉರ್ಸುಲಾ** : - ಈ ಮಾತು ಸುಳ್ಳು. ಒಂದು ಮಾತು ಹೇಳಲಾ ನಾನು?

**ನರೇಶ** : - ಏನು?

**ಉರ್ಸುಲಾ** : - ಹಂಸಾಳ ಬಗ್ಗೆ ನಿನ್ನ ಹೃದಯದಲ್ಲಿ ಎಂತಹ ಪ್ರೇಮ ಇದೆ ಅಂತ ನಿನಗೆ ಗೊತ್ತಿಲ್ಲ

**ನರೇಶ** : - ನಿನಗೆ ಹೇಗೆ ಗೊತ್ತು?

**ಉರ್ಸುಲಾ** : - ಇದು ತುಂಬಾ ಸುಲಭ. ನಿಮ್ಮಿಬ್ಬರನ್ನು ನೋಡಿದ ಕೂಡಲೇ ತಿಳಿದು

ಹೋಯ್ತು

**ನರೇಶ** :- ಹೇಗೆ?

**ಉರ್ಮಿಲಾ** :- ನಿನ್ನ ವ್ಯವಹಾರ ನೋಡಿ. ನಮ್ಮ ಅಣ್ಣನೂ ಹೀಗೆ ಇದ್ದ. ನನ್ನ ಕಂಡರೆ ಬಹಳ ಪ್ರೀತಿ ಅವನಿಗೆ. ಯಾವಾಗಲೂ ಕಿರುಕಳ ಕೊಡ್ತಿದ್ದ. ನನಗೆ ತುಂಬಾ ಕೋಪ ಬರ್ತಿತ್ತು. ಅವನನ್ನ ಪರೀಕ್ಷಿಸಬೇಕು ಅಂತ್ಲೇ .........

**ನರೇಶ** :- ಏನು?

**[ವಿಮಲ ಬರುವಳು]**

**ವಿಮಲ** :- ಬನ್ನಿ. ಅವರು ಕೆಳಗೆ ಕಾಯ್ತಾ ಇದ್ದಾರೆ

**[ಎಲ್ಲಾರೂ ಹೋಗುತ್ತಾರೆ]**

**(ತೆರೆ ಬೀಳುತ್ತದೆ)**

## ದೃಶ್ಯ - 3

**[ಸಮಯ : ಮಧ್ಯಾಹ್ನ. ಸ್ಥಾನ :- ನರೇಶನ ಮನೆಯ ದಿವಾನ ಖಾನೆ, ಹಂಸಾ, ಧೀಮಂತ ಕುಳಿತಿದ್ದಾರೆ]**

**ಧೀಮಂತ** :- ನೀನು ಮಾಡಿದ್ದು ಸರಿಯಲ್ಲ ನೋಡು

**ಹಂಸಾ** :- ಏನು?

**ಧೀಮಂತ** :- ನೀನು ಹಸಿದು ಕೊಂಡೇ ಇದ್ದೀಯಲ್ಲ

**ಹಂಸಾ** :- ಏನೂ ಇಲ್ಲ. ನಿನಗ್ಯಾಕೆ ಬಿಡು

**ಧೀಮಂತ** :- ಹೋಗಲಿ. ಕಾರಣವಾದ್ರೂ ಏನೂ ಅಂತ ಹೇಳು

**ಹಂಸಾ** :- ನನಗೆ ಗೊತ್ತಿಲ್ಲ

**ಧೀಮಂತ** :- ಯಾಕೆ ಗೊತ್ತಿಲ್ಲ. ಅವನು ಉಪವಾಸ ಇದ್ದ ಅನ್ಕೊಂಡಿದೀಯಾ?

**ಹಂಸಾ** :- ಅವರ ಮಾತು ಬೇರೆ

**ಧೀಮಂತ** :- ಯಾಕೆ ಬೇರೆ? ನಿಮ್ಮ ಮನೆಯಲ್ಲಿ ಇಂಥದೇನಾದ್ರೂ ದಿನಾ ನಡೆಯತ್ಲೇ ಇರುತ್ತೆ

**ಹಂಸಾ** :- ಇಲ್ಲಾ, ಇಲ್ಲ, ಅಂತಹದೇನೂ ಇಲ್ಲ. ಹೆಂಗಸರಾದ ನಮಗೆ ಇದು ಸಾಧಾರಣ ವಿಷಯ. ನಿಮಗೆ ಇದರಲ್ಲಿ ವಿಚಿತ್ರ ಕಾಣುತ್ತೆ ಅಷ್ಟೆ.

**(ಅಷ್ಟರಲ್ಲಿ ಅವಸರವಾಗಿ ನರೇಶನ ಪ್ರವೇಶ)**

**ನರೇಶ** :- ಅರೇ, ಹಂಸಾ ಇವತ್ತು ನಿನ್ನ ಹುಟ್ಟಿದ ಹಬ್ಬ ಅಂತ ಮರೆತೇ ಹೋಯಿತು ನೋಡು

**ಹಂಸಾ** :- ಪರವಾಯಿಲ್ಲ ಬಿಡಿ. ಈಗೇನಾಯ್ತು

**ನರೇಶ** :- ಓಹೋ! ಧೀಮಂತ! ನೀನ್ಯಾವಾಗ ಬಂದಿ?

**ಧೀಮಂತ** : - ನೀನು ಹೋದಾಗಿನಿಂದ ನಾನು ಇಲ್ಲೇ ಇದ್ದೇನೆ

**ನರೇಶ** : - ಹೌದಾ. ಸರಿ ಬಿಡು. ಹಂಸಾಗೆ ಗೊತ್ತಿರಬಹುದು. ಆಫೀಸಿಗೆ ಅಂತ ಹೊರಟೆ. ದಾರಿಯಲ್ಲಿ ಜಗದೀಶ ಸಿಕ್ಕಿ ಮನೆಗೆ ಎಳೆದುಕೊಂಡು ಹೋದ. ಊಟವೂ ಅಲ್ಲೇ ಆಯ್ತು. ಅಷ್ಟರಲ್ಲಿ ಇವತ್ತು ಹಂಸಾಳ ಹುಟ್ಟಿದ ಹಬ್ಬ ಜ್ಞಾಪಕಕ್ಕೆ ಬಂತು. ಸಾಹೇಬರ ಅಪ್ಪಣೆ ಪಡೆದು ಓಡಿ ಬರ್‍ತಾ ಇದ್ದೇನೆ ನೋಡು

**ಧೀಮಂತ** : - ಬಹಳ ಉಪಕಾರ ಆಯ್ತು. ನಿನಗೆ ನಾಚ್ಕೆ. ಗೀಚ್ಕೆ ಇದ್ರೆ ಹಂಸಾಗೆ ಊಟ ಮಾಡು ಅಂತ ಹೇಳು. ಅವಳಿನ್ನು ಉಪವಾಸ ಇದ್ದಾಳೆ.

**ನರೇಶ** : - ಅರೇ. ಹಂಸಾ. ನೀನು ಇನ್ನು ಊಟ ಮಾಡಿಲ್ವಾ? ಯಾಕೆ ಹೀಗೆ? ನಿನಗೆ ಹೇಳಿ ಕಳುಹಿಸಿದ್ದೇನಲ್ಲಾ. ಅವನು ಬರಲಿಲ್ವಾ?

**ಹಂಸಾ** : - ಬಂದಿದ್ದಾ. ನನಗೆ ಯಾಕೋ ಊಟದ ಇಚ್ಛೇನೇ ಇಲ್ಲ

**ನರೇಶ** : - ನಿನ್ನ ಈ 'ಇಚ್ಛೆ' ಮತ್ತೆ ಬಂತಾ? ಇಚ್ಛೆ ಯಾಕೆ ಇಲ್ಲಾ ಅಂತೀನೀ. ನನಗೊತ್ತು. ನಿನ್ನ ತಲೇಲಿ ಸೇರಿ ಕೊಂಡಿದೆಯಲ್ಲ ಆ ಮುಳ್ಳು ಇನ್ನೂ ಹೊರಗೆ ಬಂದಿಲ್ಲ

**ಹಂಸಾ** : - ಇಷ್ಟಕ್ಕೆ ನಿಮಗ್ಯಾಕೆ ಕೋಪ. ನನಗೆ ಊಟ ಬೇಕಾಗಿಲ್ಲ

**ನರೇಶ** : - ಊಫ್. ನಿನ್ನ ವರ್ತನೆ ಕಂಡರೆ ನನಗೆ ಬೇಜಾರಾಗುತ್ತೆ ನೋಡು. ನಮ್ಮ ದೇಶಕ್ಕೆ ಅಂಟಿಕೊಂಡಿರುವ ಈ ತರಲೆ ವಿಷಯಗಳನ್ನು ನೀನು ಯಾವಾಗ ಬಿಡುವುದು? ಬೇಕೂಂತಲೇ ನಿನ್ನ ಶರೀರನ್ನ ಒಣಗಿಸಿ ಅರ್ಧ ಮಾಡಿಕೊಂಡು ಬಿಟ್ಟೆ.

**ಧೀಮಂತ** : - ಇಷ್ಟೆಲ್ಲಾ ಹೇಳೋನು ಮನೇಲೇ ಇರಬೇಕಾಗಿತ್ತು

**ನರೇಶ** : - ಹೌದು. ಅಕಸ್ಮಾತ್ ಹೀಗಾಗೋಯ್ತು. ಏನು ಮಾಡಕ್ಕಾಗುತ್ತೆ? ಅದಕ್ಕೆ ಹೀಗೆಲ್ಲಾ ಮಾಡಬಹುದಾ?

**ಧೀಮಂತ** : - ಇವೆಲ್ಲಾ ಅವರವರ ಭಾವನೆ ಮೇಲೆ ಹೋಗುತ್ತೆ

**ನರೇಶ** : - ನೀನೊಬ್ಬ ನರ ಇಲ್ಲೋನು. ಇದರಲ್ಲಿ ಎಂಥಹ ಭಾವನೆ?

**ಧೀಮಂತ** : - ಹೌದೌದು. ಇದರಲ್ಲಿ ಯಾವ್ದೂ ಭಾವನೆ ಇಲ್ಲಾ. ಆದ್ರೆ ಹೆಂಡತಿ ಹಲ್ಲು ಉದುರಿದರೆ ಅದಕ್ಕೊಂದು ಭವ್ಯವಾದ ಸಮಾಧಿ ಕಟ್ಟಿಸುವುದು ಭಾವನೆ ಅಲ್ವಾ?

**ನರೇಶ** : - ಯಾಕೆ ನಿಂಗೆ ಸರಿಯಾಗಿ ಅರ್ಥ ಆಗೋಲ್ಲ? ನಾನು ನಿರ್ಬಂಧಕ್ಕೆ ಬಿದ್ದು ಹೊರಗಡೆ ಇರಬೇಕಾಗುತ್ತೆ

**ಹಂಸಾ** : - ಅಯ್ಯೋ! ಇದರಿಂದೇನಾಯ್ತು ಬಿಡಿ. ಸಧ್ಯ ನೀವು ಬಂದ್ರಲ್ಲಾ. ಅಷ್ಟು ಸಾಲದೇನು?

**ಧೀಮಂತ** : - ಸಾಕು. ಸಾಕು. ಈಗ ಹೋಗಿ ಊಟ ಮಾಡು

**ನರೇಶ** : - ಹೋಗು. ಹಂಸಾ. ಹಠ ಮಾಡಬೇಡ

**(ಹಂಸಾ ಎದ್ದು ನರೇಶನ ಕಡೆ ದೃಷ್ಟಿ ಬೀರುತ್ತಾಳೆ)**

ಏನು ತೊಂದರೆ ಇದು. ಜೀವನದಲ್ಲಿ ಒಂದೆರೆಡು ಘಳಿಗೆ ಶಾಂತಿಯಿಂದ ಇರೋಣಾ ಅಂದ್ರೆ ಆಗೋದೆ ಇಲ್ಲಾ.

**ಧೀಮಂತ** : - ಹೌದಾ?

**ನರೇಶ** : - ಅಲ್ಲದೆ ಮತ್ತೇನು? ನಾನೇಷ್ಟು ಪ್ರೀತಿಯಿಂದ ಬಂದೆ. ಈ ಇವಳ ಗೊಣಗಾಟ

ನೋಡು

**ಧೀಮಂತ** : - ನಿನಗೂ ಪ್ರೀತಿ ಉಂಟಾಗುತ್ತೆ ಅನ್ನು

**ನರೇಶ** : - ಏನು ಹಾಗಂದ್ರೇ?

**ಧೀಮಂತ** : - ಭಾವನೆ ಅಂದರೇನು? ಅಂತ ನೀನೇ ಹೇಳ್ತಿಯಲ್ಲ ನನಗೆ

**ನರೇಶ** : - ನೀನೊಬ್ಬ ಮೂರ್ಖ

**ಧೀಮಂತ** : - ಹೌದಾ?

**ನರೇಶ** : - ಇನ್ನೇನು ಮತ್ತೆ? ನಾನ್ಹೇಳಿದ್ದು ಇಂಥ ತಪ್ಪು ಭಾವನೆ ಇರಬಾರದು ಅಂತ ಅಷ್ಟೆ

**ಧೀಮಂತ** : - ನಿನ್ನದು ಸರಿ. ಬೇರೆಯವರದು ತಪ್ಪು ಅನ್ನು

**ನರೇಶ** : - ಇಲ್ಲಾ. ನಿನಗ್ಯಾಕೆ ತಿಳಿಯೋದೇ ಇಲ್ಲಾ. ಅವಳು ಈ ಥರ ಹಠ ಮಾಡ್ತಾಳಲ್ಲ? ಇದು ಒಳ್ಳೇ ಭಾವನೇನಾ? ಅವರ ಅಪ್ಪಣೆ ಇಲ್ದೆ ನಾನು ಬರಕ್ಕಾಗೊಲ್ಲ ಅಂತ ಅವಳಿಗೆ ಗೊತ್ತು. ಆದರೂ ಯಾಕೆ ಹೀಗೆ ಮಾಡಿದ್ಳು? ಹೀಗೇನೇ ಅವಳು ಶರೀರಾನ ಒಣಗಿಸಿಕೊಂಡಿರುವುದು. ಅವಳ ಮುಂಚಿನ ಫೋಟೋ ನೋಡಿದ್ದೀಯಾ? **(ಫೋಟೋ ತೋರಿಸುತ್ತಾನೆ)** ನೋಡು. ಐದು ವರ್ಷಗಳ ಹಿಂದೆ ಇದ್ದ ಆರೋಗ್ಯನಾ ನೋಡು

**ಧೀಮಂತ** : - ಆ ಸೌಂದರ್ಯಾನೂ ನೋಡು

**ನರೇಶ** : - ಇವತ್ತು ..........?

**(ಹಂಸಾ ಬರುತ್ತಾಳೆ)**

**ಧೀಮಂತ** : - ಆಗೋಯ್ತು? ಇಷ್ಟೊಂದು ಅವಸರ

**ಹಂಸಾ** : - ಇಲ್ಲಪ್ಪಾ. ಅವಸರ ಎಂಥಾದ್ದು

**ನರೇಶ** : - ಹಂಸಾ, ಇವತ್ತೇನು ಮಾಡೋಣ ಹೇಳು

**ಹಂಸಾ** : - ಮಾಡೋದೇನು? ಏನೂ ಇಲ್ಲ

**ನರೇಶ** : - ಹೇ, ಹಂಗೆಲ್ಲಾ ಆಗೊಲ್ಲ. ಬೇಕಾದ್ರೆ ತಿರುಗಾಡಿಕೊಂಡು ಬರೋಣ. ಇಲ್ದಿದ್ರೆ ನಾಟಕ ನೋಡೋಣ. ಏನಯ್ಯ ಧೀಮಂತ ನಾಟಕಕ್ಕೆ ಬರ್ತೀಯಾ? 'ರಜತ ಕಿರಣ' ಒಳ್ಳೆಯ ನಾಟಕ. ಅದೇ ಸರಿ ನಾಟ್ಕನೇ ನೋಡೋಣ. ನಡಿಯಯ್ಯ. ( **ಧೀಮಂತ ನರೇಶನ ಕಡೆ ನೋಡುತ್ತಿರುತ್ತಾನೆ)** ಏನು ಹಾಗೆ ನೋಡ್ತಿದೀಯಾ? ಬರ್ತಿಯೋ, ಇಲ್ವೋ?

**ಧೀಮಂತ** : - ಇಲ್ಲಾ, ಇವತ್ತು ಹಂಸಾ ಬಹೆನ್ ಹುಟ್ಟಿದ ಹಬ್ಬ, ನೀವಿಬ್ಬರೇ ಹೋಗಿ ಬನ್ನಿ

**ನರೇಶ** : - ಛೆ! ಅದರಲ್ಲೇನಂತೆ. ಬಾ, ನೀನಿದ್ದರೆ ಚೆನ್ನಾಗಿರುತ್ತೆ

**ಹಂಸಾ** : - ಹೌದು, ಧೀಮಂತ, ನೀವೂ ಖಂಡಿತಾ ಬನ್ನಿ. ಆ ನಾಟಕ ನೋಡ್ಬೇಕು ಅಂತ ನೀವೂ ಹೇಳ್ತಿದ್ರಲ್ಲ

**ಧೀಮಂತ**:-ಸರಿ ಯಾವಾಗ್ಲಾದ್ರೂ ನೋಡದ್ರೆ ಆಯ್ತು. ಈಗ ಹೋರಟೆ. **(ಹೊರಡುತ್ತಾನೆ)**

**(ತೆರೆ ಬೀಳುತ್ತದೆ)**

**[ಸ್ಥಾನ : ನರೇಶನ ಮನೆಯ ದಿವಾನ ಖಾನೆ. ನರೇಶ ಯಾರ ಬರವಿಗಾಗೋ ಕಾಯುತ್ತಿದ್ದಾನೆ. ಕೊನೆಯಲ್ಲಿ ಶಥ ಪಥ ಹಾಕುತ್ತಿದ್ದಾನೆ]**

**ನರೇಶ** : - ಯಾಕೆ ಇಷ್ಟೊತ್ತಾದರೂ ಬರಲಿಲ್ಲ?

**(ಹಂಸಾಳ ಚಿತ್ರದ ಮುಂದೆ ನಿಲ್ಲುತ್ತಾನೆ. ಹಂಸಾ ಹಿಂದಿನಿಂದ ಬಂದು ತಟಕ್ಕನೆ ನಿಲ್ಲುತ್ತಾಳೆ. ಸ್ವಲ್ಪ ಹೊತ್ತಾದ ಮೇಲೆ ನರೇಶ ಅವಳನ್ನು ನೋಡುತ್ತಾನೆ)**

**(ಕೋಪದಿಂದ)** ಏನು?

**ಹಂಸಾ** : - ಏನು ಇಲ್ವಲ್ಲ. ಏನೂ ಇಲ್ಲ

**ನರೇಶ** : - ಹಾಗಾದ್ರೇ ವಿಗ್ರಹದಂತೆ ಏಕೆ ನಿಂತಿದ್ದೀಯಾ? ನೋಡಿದೋರು ಹೆದರೋ ಹಾಗೆ

**(ಹಂಸಾ ಹತ್ತಿರ ಬಂದು ನರೇಶನ ಹೆಗಲ ಮೇಲೆ ಕೈ ಇಡುತ್ತಾಳೆ)**

**ಹಂಸಾ** : - ಹೆದರಿಕೆ ಯಾಕೆ ಆಗುತ್ತೆ?

**ನರೇಶ** : - ಅಲ್ಲ ..... ನೀನು ಇದ್ದಕ್ಕಿದ್ದಂತೆ ಬಂದು ಬಿಟ್ಟೆಯಲ್ಲ

**ಹಂಸಾ** : - ನಾನು ಏನೋ ಕೇಳ್ಬೇಕೂ ಅಂತ ಬಂದೆ

**(ನರೇಶನ ಎರಡು ಕೈಗಳನ್ನು ಹಿಡಿದುಕೊಳ್ಳುತ್ತಾಳೆ)**

**ನರೇಶ** : - ಏನದು?

**ಹಂಸಾ** : - ನಿಜ ಹೇಳ್ತಿರಾ?

**ನರೇಶ** : - ಹಾಗಂದ್ರೇನು. ನಾನು ಸುಳ್ಳು ಹೇಳ್ತೀನಿ ಅಂತ್ಲಾ?

**ಹಂಸಾ** : - ಅಲ್ಲ, ಹಾಗಲ್ಲ. ಎಲ್ಲಾ ನಿಜ ಹೇಳ್ಬೇಕು ಅಂತ

**ನರೇಶ** : - **(ಸ್ವಲ್ಪ ರೇಗಿ)** ಇರಲಿ ಅದೇನು ಹೇಳು

**ಹಂಸಾ** : - ನೀವು ಇವತ್ತು ಪೇಟೆಗೆ ಹೋಗಿದ್ರಾ?

**ನರೇಶ** : - ಹೌದು, ಯಾಕೆ?

**ಹಂಸಾ** : - ಏಕೆ ಹೋಗಿದ್ರಿ?

**ನರೇಶ** : - ಇದೆಲ್ಲಾ ಯಾಕೆ ಕೇಳ್ತಾ ಇದ್ದಿಯಾ?

**ಹಂಸಾ** : - ಇದರಿಂದ ಒಂದು ಕೆಲಸ ಆಗಬೇಕಾಗಿದೆ

**ನರೇಶ** : - ನಾನು ಉತ್ತರ ಕೊಡಲೇ ಬೇಕು ಅಂತ ಏನು ಇಲ್ಲ

**ಹಂಸಾ** : - ಕೊಡಲೇಬೇಕು ಅಂತ ಹೇಳದ್ನಾ?

**ನರೇಶ** : - ಈ ವಿಷಯಗಳೆಲ್ಲಾ ನಿನಗ್ಯಾಕೆ?

**(ಹಂಸಾ ತನ್ನ ಕೈಗಳನ್ನು ಹಿಂದೆ ತೆಗೆದುಕೊಳ್ಳುತ್ತಾಳೆ)**

**ಹಂಸಾ** : - ಅದೇನೋ ತರಿಸಿದ್ದೀರಾ? ಅದೇನು ಅಂತ ನನಗೆ ಹೇಳ್ಬೇಕು

**ನರೇಶ** : - ನಾನು ಹೇಳೋದಿಲ್ಲ. ನಿನ್ನ ಹತ್ತಿರ ವಾದ ಮಾಡಬೇಕಾಗಿಯೂ ಇಲ್ಲ

**(ಜವಾನ ಬರುತ್ತಾನೆ. ನರೇಶ ತಕ್ಷಣ ಅವನ ಬಳಿ ಇರುವ ಪ್ಯಾಕೆಟ್ ತೆಗೆದುಕೊಂಡು ಜವಾನನಿಗೆ ಹೋಗು ಎಂದು ಹೇಳುತ್ತಾನೆ. ಜವಾನ ಹೋಗುತ್ತಾನೆ)**

**ಹಂಸಾ** : - ಏನದು?

**ನರೇಶ** : - ಏನೂ ಇಲ್ಲ. ಇದೆಲ್ಲಾ ನಿನಗ್ಯಾಕೆ. ಏನೋ ನನಗೆ ಬೇಕಾದ್ದು

**(ಮೇಜಿನ ಮೇಲೆ ಪ್ಯಾಕೆಟ್ ಇಡುತ್ತಾನೆ)**

**ಹಂಸಾ:-** ಒಳಗೆ ಗಡಿಯಾರ ಇದೆ ಅಂತ ಯಾಕೆ ಹೇಳೊಲ್ಲ

**ನರೇಶ** : - ಹೌದು. ಇದೆ. ತಿಳಿದ ಮೇಲೆ ಯಾಕೆ ಕೇಳ್ತಿಯಾ?

**ಹಂಸಾ** : - ಉರ್ಸುಲಾಗೋಸ್ಕರ ತರಿಸಿದ್ದೀರಾ ತಾನೇ?

**ನರೇಶ** : - ಹೌದು. ಈಗ ಸಮಾಧಾನ ಆಯ್ತ ನಿನಗೆ. ಹೋಗು. ಕೆಲಸ ನೋಡು

**(ಪತ್ರಿಕೆ ಹಿಡಿದು ಕೂರುತ್ತಾನೆ. ಹಂಸಾ ಒಳಗೆ ಹೋಗುತ್ತಾಳೆ. ನರೇಶ ಮೇಜಿನ ಮೇಲಿನ ಪ್ಯಾಕೆಟ್ ತೆಗೆದು ಅದರಲ್ಲಿ ಚೀಟಿ ಇಡುತ್ತಾನೆ. ಅಷ್ಟರಲ್ಲಿ ಜವಾನ ಕಾಫೀ ತರುತ್ತಾನೆ)**

**ನರೇಶ** : - ಹೇ. ಚತುರ್ಭುಜ್. ಇನ್ನೂ ಏನೋ ಕೊಟ್ಟಿದ್ನಲ್ಲೊ?

**ಜವಾನ** : - ಹೌದು. ಬೆಳ್ಳಿತಟ್ಟೆ, ಕೊಟ್ಟು ಬಿಟ್ಟು ಬಂದ್ನಲ್ಲಾ

**ನರೇಶ** : - ಯಾರಿಗೆ ಕೊಟ್ಟು ಬಂದೆಯೋ?

**ಜವಾನ** : - ಜಗದೀಶ ಸಾಹೇಬ್ರ ಮನೆಗೆ

**ನರೇಶ** : - ಸರಿ ಬಿಡು

**(ಜವಾನ ಹೋಗುತ್ತಾನೆ. ಹಂಸಾ ಬರುತ್ತಾಳೆ. ಕೈಯಲ್ಲಿ ಹೂದಾನಿ ಇದೆ)**

**ಹಂಸಾ** : - ಜಗದೀಶ ಬಾಯಿ ಈ ಹೂದಾನಿ ಕಳಿಸಿದ್ದಾರೆ

**ನರೇಶ** : - ಎಲ್ಲಿ. ಹೇಗಿದೆ. ನೋಡೋಣ. **(ತೆಗೆದುಕೊಂಡು ಅದರಲ್ಲಿರುವ ಒಂದು ಚೀಟಿಯನ್ನು ಓದುತ್ತಾನೆ)** ಇದನ್ನ ನಿನಗೆ ಕಳುಹಿಸಿರೋದು

**ಹಂಸಾ** : - ಹೌದು. ನೀವೂ ಏನಾದ್ರೂ ಕಳುಹಿಸಿರ ಬೇಕಲ್ಲ. ಏನು ಕಳಿಸಿದ್ರಿ?

**ನರೇಶ** : - ಏನೂಂತ ತಿಳ್ಕೋಬೇಕು ತಾನೇ. ಆದ್ರೇ ನೋಡು

**ಹಂಸಾ** : - ನಾನು ಅದನ್ನ ಆಗ್ಲೇ ಮರ್ತೆ. ಏನು ಕಳುಹಿಸದಿದ್ರೆ ಆ ಗಡಿಯಾರ ಕಳುಹಿಸಿ ಬಿಡಿ

**ನರೇಶ** :- ನೋಡೋಣ. ನಿನ್ನ ಸಲಹೆ ಬೇಕಾದಾಗ ನಿನ್ನ ಕೇಳ್ತೀನಿ. ಹೋಗಿ ಅಡಿಗೆ ತಯಾರಿ ಮಾಡು. ಇವತ್ತು ಬೇಗ ಹೋಗ್ಬೇಕು

**(ಹಂಸಾ ಸ್ವಲ್ಪ ಹೊತ್ತು ಸುಮ್ಮನಿದ್ದು, ಕಿಟಕಿಯ ಬಳಿ ಹೋಗಿ ಗೀತೆ ಹಾಡುತ್ತಾಳೆ)**

ಇದೇನು. ನೀನು ಹಾಡ್ತಾ ಇದ್ದೀಯಾ?

**ಹಂಸಾ** : - **(ತಿರುಗಿ)** ಯಾಕೆ?

**ನರೇಶ** : - ಎಲ್ಲಾ ಅಪಶೃತಿ

**ಹಂಸಾ:-** ಸರಿಯಾದ ಶೃತಿ ಯಾವುದು?

**ನರೇಶ** :- ನನಗೇನು ಗೊತ್ತು. ನನಗೆ ಬಂದಿದ್ರೇ ಹಾಡ್ತಾ ಇರ್ಲಿಲ್ವ? ನನಗೆ ತಿಳಿದ ಮಟ್ಟಿಗೆ ಹೇಳ್ದೆ

**(ಒಬ್ಬ ಹುಡುಗಿಯ ಪ್ರವೇಶ)**

**ನರೇಶ** : - ಬಾ. ಸುರುಮಾ ಬಾ.

**ಸುರುಮಾ** : - ಸ್ವಲ್ಪ ಕೆಲ್ಸ ಇತ್ತು

**ಹಂಸಾ** : - **(ನರೇಶನನ್ನು ಕುರಿತು)** ಈ ಸುರುಮಾ ಚೆನ್ನಾಗಿ ಹಾಡುತ್ತಾಳೆ. **(ಸುರುಮಾನನ್ನು ಕುರಿತು)** ಇವರಿಗೆ ಹಾಡು ಕೇಳೋದು ಅಂದ್ರೆ ತುಂಬಾ ಇಷ್ಟ

**ನರೇಶ** : - ಹಾಗೇನು?

**ಹಂಸಾ** : - ಆ ದಿನ ನೃತ್ಯದ ಜೊತೆಗೆ ನಿಮಗಿಷ್ಟವಾದ ಹಾಡನ್ನು ಹೇಳಿದ್ದು ಇವಳೇ

**ನರೇಶ** : - ಹೌದಾ? ತುಂಬಾ ಚೆನ್ನಾಗಿತ್ತು

**ಸುರುಮಾ** : - ಅಂದ್ರೇ ನಿಮಗೆ ಸಂಗೀತದ ಬಗ್ಗೆ ಏನೂ ಗೊತ್ತಿಲ್ಲ ಅಂತಾಯ್ತು. ನನಗೆ ಹಾಡೋಕೆ ಬರೋಲ್ಲ. **(ಹಂಸಳನ್ನು ಕುರಿತು)** ನನಗೊಂದು ಕೆಲ್ಸ ಆಗ್ಬೇಕು

**ಹಂಸಾ** : - ಇರಲಿ ಕುತ್ಕೋ **(ಕುಳಿತು ಕೊಳ್ಳುತ್ತಾಳೆ)**

**ಸುರುಮಾ** : - ಈಗ ನಾನು ಯಾಕೆ ಬಂದಿರೋದು ಗೊತ್ತಾ?

**ಹಂಸಾ** : - ಇಲ್ಲಾ

**ಸುರುಮಾ** : - ನೀನು ಬಹಳ ಸೊಗಸಾಗಿ ಹಾಡ್ತಿ ಅಂತ ಎಲ್ಲಾ ಹೇಳ್ತಾರೆ. ಅದಕ್ಕೆ ಸೀದಾ ಇಲ್ಲಿಗೆ ಬಂದೆ. ನನಗೆ ಆ ಹಾಡು ಕಲಿಸಿಕೊಡು. ನೀನು ಒಳ್ಳೇ ಲಹರಿಯಲ್ಲಿದ್ದೀಯ ಈಗ. ಒಳ್ಳೇ ಮಜಾ ಬರುತ್ತೆ

**ಹಂಸಾ** : - ಇಲ್ಲ. ನಾನಷ್ಟು ಚೆನ್ನಾಗಿ ಹಾಡೋದಿಲ್ಲ

**ಸುರುಮಾ** : - ನೀನು ಹಾಡೋದು ಎಷ್ಟು ಚೆಂದಾ ಅಂದ್ರೆ ದಾರಿಯಲ್ಲಿ ಹೋಗೋ ಜನ ನಿಂತು ಬಿಡ್ತಾರೆ

**ಹಂಸಾ** : - ನನ್ನ ಶೃತಿನೇ ತಪ್ಪು ಅಂತ ಇವರು ಹೇಳ್ತಾರಲ್ಲ

**ಸುರುಮಾ** : - ಪುರುಷರಿಗೆ ಸ್ತ್ರೀ. ಸಂಗೀತ ಇವುಗಳ ಬಗ್ಗೆ ಏನು ಗೊತ್ತು? ನಾನ್ಹೇಳಿದ್ದು ಸರಿ ತಾನೆ ನರೇಶ್ ಬಾಯಿ

**ನರೇಶ** : - ನೀನು ಹೇಳಿದ ಮೇಲೆ ಸರೀನೇ ಇರಬಹುದು

**ಸುರುಮಾ** : - ಹೌದು. ಸ್ತ್ರೀ ಮತ್ತು ಸಂಗೀತ ಇವುಗಳ ಕೋಮಲತೆ ನಿಮಗೆ ಹೇಗೆ ತಿಳಿಯಬೇಕು? ನೀವು ಪುರುಷರು ಈ ನಡುವೆ ಎಷ್ಟು ಕಠೋರ ಅಂದ್ರೆ ............

**ನರೇಶ** : - ನಾನೂನು?

**ಸುರುಮಾ** : - ನಾನು ಅದನ್ನ ಹೇಗೆ ಹೇಳೋದು? ಆ ಹಾಡು ನನಗೆ ಕಲಿಸು. ನಮ್ಮ ಗರಬಾ ನೃತ್ಯದಲ್ಲಿ ಉಪಯೋಗಿಸಕೊಳ್ಳಬಹುದು.

**(ಹಂಸಾ ಹಾಡುತ್ತಾಳೆ. ಸುರುಮಾ ಸ್ವಪ್ನದಲ್ಲಿರುವಂತೆ ನೋಡುತ್ತಾಳೆ. ನರೇಶನ ಕಣ್ಣಲ್ಲಿ ಆನಂದ ಮಿನುಗುತ್ತದೆ)**

**(ತೆರೆ ಬೀಳುತ್ತದೆ)**

## ದೃಶ್ಯ - 5

**(ಸಮಯ:- ರಾತ್ರಿ ಸುಮಾರು ಎಂಟು ಗಂಟೆ)**

**ನರೇಶ** : - ನಡಿ. ನೀನು ಸಿದ್ಧವಾಗಿದ್ದೀಯ ತಾನೆ?

**ಹಂಸಾ** : - ಇನ್ನೂ ಸಮಯ ಇದೆಯಲ್ಲ. ನನಗೆ ಸ್ವಲ್ಪ ಕೆಲಸ ಇದೆ

**ನರೇಶ** : - ಈ ದಿನವೂ ಕೆಲ್ಸ! ಆ ಕೆಲ್ಸ ಆಗದಿದ್ದರೆ ಏನಂತೆ? ನಾಳೆ ಮಾಡಿಕೋ

**ಹಂಸಾ** : - ಇನ್ನೂ ಧೀಮಂತ ಬಾಯಿ ಕೂಡ ಬಂದಿಲ್ಲ

**ನರೇಶ** : - ಅವನೇನು ಈಗ ಬರ್‍ತಾನೆ. ಆದ್ರೆ ನೀನು ಸಿದ್ಧವಾಗೋ ಹೊತ್ಗೆ ಎರಡು ಗಂಟೆ ಬೇಕಾಗುತ್ತೆ

**ಹಂಸಾ** : - ಇಲ್ಲ

**ನರೇಶ** : - ಏನಿಲ್ಲ. ಯಾವತ್ತು ತಾನೇ ನೀನು ಬೇಗ ಸಿದ್ಧ ಆಗಿದ್ದೀಯ? ದಿನಾ ನಾನು ತಲೆ ಚಚ್ಕೋಬೇಕು. ಆಗ ಎಳ್ತೀಯ. ಇನ್ನೂ ನನ್ನ ಬಟ್ಟೆ ಬರೇ ತೆಗಿಬೇಕು. ಆ ಗುಂಡಿ ಹಾಕಾಯ್ತೇನು?

**ಹಂಸಾ** : - ಇಲ್ಲ. ಇಗೋ ಈಗ್ಲೇ ಹಾಕಿ ಕೊಡ್ತೀನಿ

**ನರೇಶ** : - ಹಾಕು. ಮಾಡಬೇಕಾದ ಕೆಲ್ಸ ಇನ್ನೂ ಆಗಿಲ್ಲ. ಯಾವುದೋ ಬೇಡವಾದ ಕೆಲ್ಸಕ್ಕೆ ಅರಚಾಡ್ತೀಯ. ನಿಮ್ಮಗಳಿಗೆ ಬುದ್ಧೀನೇ ಇಲ್ಲ. ನಿಮ್ಮಂತಹವರು ಯಾಕೆ ಹುಟ್ಟಿದಿರೋ ದೇವರಿಗೆ ಗೊತ್ತು

**(ಹಂಸ ಒಳಗೆ ಹೋಗಿ ಬರುತ್ತಾಳೆ) (ಸಿದ್ಧಳಾಗಿ ಬರುತ್ತಾಳೆ)**

**ಹಂಸಾ** : - ತೆಗೆದುಕೊಳ್ಳಿ. ಗುಂಡಿ ಹಾಕಿ ಆಯ್ತು.

**ನರೇಶ** : - ತುಂಬಾ ಉಪಕಾರ ಆಯ್ತು

**(ನರೇಶ ಒಳಗೆ ಹೋಗುತ್ತಾನೆ. ಹಂಸ ಕುರ್ಚಿಯನ್ನು ಸರಿಯಾಗಿ ಇಡುತ್ತಾಳೆ. ನರೇಶ ಸಿದ್ಧನಾಗಿ ಬರುತ್ತಾನೆ. ಸ್ವಲ್ಪ ಶಾಂತಿ )**

**ಹಂಸಾ** :–ಅಯ್ಯೋ ರಮಾ ಬೆಹೆನ್‌ನ ಸುರುಭಿಗೆ ಹೇಳಿ ಕಳುಹಿಸಬೇಕಾಗಿತ್ತು. ಅವಳಿಗೆ ..............

**(ನರೇಶನ ಮುಖದ ಮೇಲೆ ಅಸಮಾಧಾನದ ಚಿಹ್ನೆ ಮೂಡುತ್ತದೆ)**

**ನರೇಶ** : - ನಿನಗೇನಂತೆ? ಅವಳಿಗೆ ಹೇಳು ಅಂತ ನಿನಗೆ ಯಾರು ಹೇಳಿದ್ದು?

**ಹಂಸಾ** : - ನಾನು ನಿಮಗೆ ಕೇಳಿಯೇ ಹೇಳಿ ಕಳಿಸಿದ್ದು ಅಲ್ವಾ?

**ನರೇಶ** : - ಹಾಗಾದ್ರೆ ಮೊದಲೇ ನನಗೆ ಏಕೆ ಹೇಳಿಲ್ಲ. ನಾನೇನು ಸ್ವಪ್ನ ಕಂಡಿದ್ನಾ? ಈಗ ಸಮಯಾನೂ ಇಲ್ಲ. ನಾನು ಹೋಗೋದು ಇಲ್ಲ

**ಹಂಸಾ** : - ಅವರೇನಾದ್ರೂ ತಪ್ಪು ತಿಳ್ಕೊಂಡ್ರೇ ............

**ನರೇಶ** : - ಹಾಗಾದರೆ ಬಿಡು. ನಾನು ಇಂತಹ ರಾತ್ರಿಲಿ ಹೋಗೋದಿಲ್ಲ. ಒಂದರ ಮೇಲೊಂದು ತೊಂದ್ರೆ ಕೊಡ್ತಾನೇ ಇದ್ದೀಯ. ಸುರುಭಿ ಬರದಿದ್ರೆ ನೀನು ನಾಟಕಕ್ಕೆ ಬರೋದಿಲ್ವಾ?

**ಹಂಸಾ** : - ಆದ್ರೇ .............

**ನರೇಶ** : - ಆದ್ರೇ. ಗೀದ್ರೇಬೇಡ. ನೀನು ಬರೋಲ್ಲ ಅಂತ ಹೇಳದ್ಯಲ್ಲ. ಇಂತಹ ನಾಟಕ ನೋಡ್ದೇ ಇರೋದೇ ವಾಸಿ. **(ಸ್ವಲ್ಪ ಹೊತ್ತಿನ ಮೇಲೆ)** ಹೋಗಲಿ ಬಿಡು. ಹೋಗೋದು ಬೇಡ. ನಾನು ಕ್ಲಬ್ಬಿಗೆ ಹೋಗ್ತೇನೆ**(ಹೋಗುತ್ತಾನೆ.)**

**[ನರೇಶ ಹೋಗುವುದನ್ನೇ ಹಂಸಾ ನೋಡುತ್ತಾಳೆ. ಮೇಜನಿಂದ ಬುಕ್ ತೆಗೆದು ಓದುತ್ತಾಳೆ. ಅಷ್ಟರ[illegible]ಂತ ಬರುತ್ತಾನೆ. ಹಂಸಾ ನೋಟ್ ಬುಕ್ಕನ್ನು ಬೇಗ ಇಡುತ್ತಾಳೆ]**

**ಹಂಸಾ** : - ಬನ್ನಿ

**ಧೀಮಂತ** : - ಎಲ್ಲಿ ಅವನು?

**ಹಂಸಾ** : - ಹೊರಗಡೆ ಹೋದರು. ನಾಟಕ ನೋಡೋ ವಿಷಯ ಬದಲಾಯಿಸಿದ್ರು ಕೂತ್ಕೋಳ್ಳಿ

**(ಇಬ್ಬರೂ ಕೂತ್ಕೋತ್ತಾರೆ)**

**ಧೀಮಂತ** : - ಯಾಕೆ ಮನಸ್ಸು ಬದಲಾಯಿಸಿ ಬಿಟ್ಟ? ಈ ಮಧ್ಯೆ ಏನಾದ್ರೂ ನಡಿತೇನು?

**ಹಂಸಾ** : - ಇಲ್ವಲ್ಲ. ಏನೂ ಇಲ್ವಲ್ಲ. ನನಗೆ ಯಾಕೋ ಮನಸ್ಸು ಸರಿಯಾಗಿರಲಿಲ್ಲ. ಅದಕ್ಕೆ ಬೇಡ ಅಂದ್ರು

**ಧೀಮಂತ** : - ಯಾಕೆ, ಏನಾಗಿದೆ?

**ಹಂಸಾ** : - ಅಂತದೇನೂ ಇಲ್ಲ. ಎಲ್ಲೋ ಸ್ವಲ್ಪ ತಲೇ ನೋಯ್ತಾ ಇತ್ತು ಅಷ್ಟೆ

**(ಧೀಮಂತ ಹಂಸಾಳ ಕಡೆ ನೋಡುತ್ತಾನೆ. ಅವಳು ಅಂಗುಷ್ಟದಿಂದ ನೆಲ ಕೆರೆಯುತ್ತಿದ್ದಾಳೆ)**

**ಧೀಮಂತ** : - ಆ ಮೇಲೆ ಎಲ್ಲಿಗೆ ಹೋದ?

**ಹಂಸಾ** : - ಗೊತ್ತಿಲ್ಲ. ದಿನವೆಲ್ಲಾ ಮನೇಲಿ ಇದ್ರು. ಅದಕ್ಕೆ ಸ್ವಲ್ಪ ಹೊರಗೆ ತಿರುಗಾಡಿ ಬರಲು ಹೋಗಿದ್ದಾರೆ

**ಧೀಮಂತ** : - **(ಮೆಲ್ಲಗೆ)** ಹಂಸಾರವರೇ, ಕ್ಷಮಿಸಿ, ನಿಮ್ಮ ಮಾತನ್ನು ನಾನು ಸುಲಭವಾಗಿ ಒಪ್ಪುವವನಲ್ಲ. ಖಂಡಿತವಾಗಿ ಏನೋ ನಡೆದಿದೆ. ನಿಮ್ಮ ದಾಂಪತ್ಯ ಜೀವನದ ವ್ಯಕ್ತಿಗತ ಮಾತುಗಳನ್ನು ತಿಳಿಯೋ ಬಯಕೆ ನನಗಿಲ್ಲ. ಆದ್ರೂ ಹೇಳ್ತೀನಿ, ಇದೆಲ್ಲಾ ನೋಡಿ ನನಗ್ಯಾಕೋ ಹೊಟ್ಟೆ ಉರಿಯುತ್ತಿದೆ. ಹಂಸಾ ಇಷ್ಟು ದಿನಗಳಿಂದ ನಾನು ಇಲ್ಲಿಗೆ ಬಂದು, ಹೋಗ್ತಾ ನಿನ್ನ ಜೀವನವನ್ನ ಗಮನಿಸುತ್ತಿದ್ದೇನೆ. ಈಗ ಎಷ್ಟೋ ದಿನ ಆಯ್ತು.

**ಹಂಸಾ** : - ಧೀಮಂತ ಬಾಯಿ ನೀವು ಸುಮ್ಮನೆ ಚಿಂತೆಗೊಳಗಾಗಿದ್ದೀರಿ ಅಂತಹದೇನೂ ಇಲ್ಲ

**ಧೀಮಂತ** : - ಹಾ! ಅದು ನನಗೆ ಕಾಣಿಸ್ತಾ ಇದೆ. ನಿನ್ನ ಮರ್ಯಾದೆಯನ್ನು ನೀನು ಯಾವತ್ತು ಮೀರಿದವಳಲ್ಲ. ಪ್ರತಿಯೊಬ್ಬ ಹೆಂಗಸು ಹೀಗೆ ಹೇಳೋದು. ಕಲ್ಲು ಬಂಡೇನ ಕಟ್ಟಿಕೊಂಡರೂ ಅದನ್ನೇ ದೇವರು ಅಂತ ಪೂಜಿಸೋದು ಹೆಂಗಸರ ಸ್ವಭಾವ. ದೇವರು ಸಹಾ ಸುಲೋಚನೆಗೆ ಸುಡುಗಾಡನ್ನು ಕಟ್ಟಿ ತನ್ನ ಚಾತುರ್ಯ ತೋರಿಸುತ್ತಾನೆ

**ಹಂಸಾ** : - ಹಾಗೆಲ್ಲಾ ಹೇಳಬೇಡಿ. ಇವೆಲ್ಲಾ ಸುಳ್ಳು. ಅವರು ಅಂತಹವರಲ್ಲ

**ಧೀಮಂತ** : - ನೀನು ಹೇಳಲ್ಲ. ತನ್ನ ಹಠ ಗೆಲ್ಲಬೇಕು ಅಂತ ನಿನ್ನ ಮೇಲೆ ಎಸಗುತ್ತಿರುವ ಅತ್ಯಾಚಾರ ಎಲ್ಲೇ ಮೀರಿದ್ದು. ನಿನ್ನ ಸ್ವಭಾವ ಬಹಳ ಕೋಮಲವಾದ್ದು. ಈ ಆಘಾತವನ್ನು ಹೇಗೆ ಸಹಿಸುತ್ತಿದ್ದೀಯೋ ನನಗೆ ಗೊತ್ತಿಲ್ಲ. ನಿನಗೆ ಕಾಣದೇ ಇರಬಹುದು. ಆದ್ರೆ ನಿನ್ನ ಸೌಂದರ್ಯ ದಿನೇ ದಿನೇ ಕಮ್ಮಿ ಆಗ್ತಾ ಇದೆ. ಆ ಫೋಟೋಲಿ ಕಾಣುವ ಯೌವನ ಎಲ್ಲಿ ಹೋಯ್ತು ?

**ಹಂಸಾ** : - ನನ್ನ ಮೇಲೆ ನಿಮಗೆ ತುಂಬಾ ವಿಶ್ವಾಸ. ಆದಕ್ಕೆ ಹಾಗೆ ಕಾಣ್ತಾ ಇದೆ

**ಧೀಮಂತ** : - ನಿನ್ನ ಮೇಲೆ ಮಾತ್ರ. ನರೇಶನ ಮೇಲೆ ಕೇವಲ ಧಿಕ್ಕಾರ ಇದೆ

**ಹಂಸಾ** : - ಹಾಗೆ ಹೇಳಬೇಡಿ. ಅವರು ನಿಮ್ಮ ಸ್ನೇಹಿತರು

**ಧೀಮಂತ** : - ಅವನೇನು ಅಂತ ಸ್ನೇಹಿತನಲ್ಲ. ಒಂದು ಮಾತು ಕೇಳ್ಲಾ?

**ಹಂಸಾ** : - ಏನು?

**ಧೀಮಂತ** : - ನೀನು ಇಲ್ಲಿ ಸುಖವಾಗಿದ್ದೀಯಾ?

**ಹಂಸಾ** : - ಖಂಡಿತವಾಗಿಯೂ

**ಧೀಮಂತ** : - ಸುಳ್ಳು ಹೇಳಬೇಡ. ಮನಃಪೂರ್ವಕವಾಗಿ ನಿಜ ಹೇಳು

**ಹಂಸಾ** : - ನೋಡಿ ...............

**ಧೀಮಂತ** : - ನಾನು ಎಷ್ಟೋ ದಿನದಿಂದ ಈ ಮಾತು ಹೇಳ್ಬೇಕು ಅಂತ ಇದ್ದೆ. ಈ ದಿನ ನಿನ್ನ ಹುಟ್ಟಿದ ಹಬ್ಬ ಅದರಿಂದ ಅಣ್ಣನಂತೆ ಕೇಳ್ತಾ ಇದ್ದೀನಿ. ಹೇಳು. ಖಂಡಿತಾ ನೀನು ದುಃಖದಲ್ಲಿದ್ದೀಯ. ನರೇಶನ ಬಗ್ಗೆ ನಿನಗೆ ತಾತ್ಸಾರಬಂದಿದೆ

**ಹಂಸಾ** : - ಅರೇ............

**ಧೀಮಂತ** : - ನಿಜವಾಗ್ಲೂ ಅವನ ಬಗ್ಗೆ ಬೇಸರ ಇದ್ರೆ ನಿನಗೆ ನಾನು ಬಿಡುಗಡೆ ಕೊಡಿಸಬಲ್ಲೆ. ಅವನಿಗೆ ಹಣದ ಆಸೆ. ನನ್ನ ಬಳಿ ಹಣ ಇದೆ. ಆದರೇ ಅಂತಹ ಆಸೆ ನನಗಿಲ್ಲ. ನಿನ್ನ ಸ್ವಾತಂತ್ರ್ಯವನ್ನು ವಾಪಸ್ಸು ಕೊಡಿಸಬಲ್ಲೆ. ನೀನು ಇಷ್ಟಪಟ್ಟರೆ ನನ್ನೊಂದಿಗೆ ಇರಬಹುದು. ಪ್ರಪಂಚಾನ ನಾನು ಲೆಕ್ಕಿಸೊಲ್ಲ. ಈಗ ಹೇಳು ಇದಕ್ಕೇನು ನಿನ್ನ ಉತ್ತರ?

**ಹಂಸಾ** : - ಧೀಮಂತ ಬಾಯಿ ನೀನು ಅಣ್ಣನಂತೆ ಕೇಳ್ತಾ ಇದ್ದೀಯ ಅಂತ ಹೇಳುತ್ತೇನೆ ಕೇಳು. ಅದಕ್ಕೆ ಹೇಳ್ತೀನಿ ಕೇಳು. ಬೆಳಗ್ಗೆ ನೀನು ವಸಂತೋತ್ಸವದ ಬಗ್ಗೆ ಮಾತೆತ್ತಿದೆ, ಅಲ್ವಾ?

**ಧೀಮಂತ** : - ಹೌದು. ಆ ಮಾತು ಬಂದಾಗ ನೀನು ಯಾವುದೋ ಚಿಂತೆಯಲ್ಲಿದ್ದಿ

**ಹಂಸಾ** : - ಹೌದು. ಆ ದಿನವೇ ನನಗೆ ಎಲ್ಲಾ ಗೊತ್ತಾಗಿದ್ದು

**ಧೀಮಂತ** : - ಅಂದ್ರೆ?

**ಹಂಸಾ** : - ಉತ್ಸವಕ್ಕೆ ನಾವಿಬ್ಬರೂ ಹೋಗ ಬೇಕಾಗಿತ್ತು. ಆದ್ರೆ ಏನೋ ಸ್ವಲ್ಪ ಮಾತಾಯ್ತು. ಅದಕ್ಕೆ, ಅವರೊಬ್ರೇ ಹೊರಟೋದ್ರು, ಅವರು ಹೋದ ಮೇಲೆ ನನಗೆ ವ್ಯಸನ ಆಯ್ತು. ಹಾಗೇ ಪಶ್ಚಾತ್ತಾಪಾನೂ ಆಯ್ತು. ಅವರ ಬಗ್ಗೆ ಕೆಟ್ಟ ವಿಚಾರಗಳು ಬಂತು

**ಧೀಮಂತ** : - ಹಾಗಾದ್ರೇ ಈಗ ಬಹಳ ಒಳ್ಳೆ ವಿಚಾರಗಳು ಬರ್ತಾ ಇದೆಯಾ?

**ಹಂಸಾ** : - ಪೂರ್ತಿ ಕೇಳು. ಆ ಮೇಲೆ ಒಂದು ಗಂಟೆಯ ಕಾಲ ಅಳ್ತಾ ಇದ್ದೆ. ಕೊನೆಗೆ ............

**ಧೀಮಂತ** : - ಏನಾಯ್ತು?

**ಹಂಸಾ** : - ಯಾರಿಗೂ ಹೇಳೊಲ್ಲ ಅಂದ್ರೆ ಹೇಳ್ತೀನಿ

**ಧೀಮಂತ** : - ಸರಿ

**ಹಂಸಾ**:- ನನಗೆ ಎಷ್ಟು ಬೇಜಾರಾಯ್ತು ಅಂದ್ರೆ ಈ ಜೀವನಾನೇ ಮುಗಿಸಿ ಬಿಡೋಣ ಅನ್ನುವಷ್ಟು

**ಧೀಮಂತ** : - ಅರೇ

**ಹಂಸಾ** : - ಅವರು ವಾಪಸ್ಸು ಬರೋಕೆ ಮುಂಚೆ ಎಲ್ಲಾ ಮುಗಿದೇ ಹೋಗ್ತಿತ್ತು

**ಧೀಮಂತ** : - ಆಮೇಲೆ

**ಹಂಸಾ** : - ಏನು ಮಾಡಬೇಕು ಅಂತ ತಿಳೀಲಿಲ್ಲ. **(ಮುಖ ನೋಡುತ್ತಾಳೆ)**

**ಧೀಮಂತ** : - ಹಾಗಾಗುತ್ತೆ. ನಾನು ಊಹಿಸಬಲ್ಲೆ. ಆಮೇಲೇನಾಯ್ತು?.

**ಹಂಸಾ** : - ನಾನು ಹುಚ್ಚಿಯಂತೆ ಆ ಕಡೆ ಈ ಕಡೆ ತಿರುಗ್ತಾ ಇದ್ದೆ. ಅವರಿಗೋಸ್ಕರ ಸಾಯಬೇಕು ಅಂತ ಮಾಡಿದ್ದೆ. ಆದರೂ ಅವರಿಂದ ದೂರವಾಗುವ ಇಷ್ಟವಿರಲಿಲ್ಲ. ಅವರಿಗೋಸ್ಕರ ಬದುಕಬೇಕು ಅಂದನಿಸಿತು. ಹೀಗೆ ಎಷ್ಟೋ ಸಮಯ ಕಳೆಯಿತು ....... ನಿನಗೆ ನಗು ಬರ್ತಿದೆ ಅಲ್ವಾ?

**ಧೀಮಂತ** : - ಹೌದು ...... ಇಲ್ಲ, ಇಲ್ಲ. ಮುಂದೇನಾಯಿತು ಹೇಳು?

**ಹಂಸಾ** : - ಪೆಟ್ಟಿಗೆಯಿಂದ ಅವರ ಪತ್ರಗಳನ್ನೆಲ್ಲಾ ತೆಗೆದು ಅತ್ತೆ

**ಧೀಮಂತ** : - ಅವನ ಪತ್ರಗಳು?

**ಹಂಸಾ** :- ಹೌದು. ನಮ್ಮ ಮದುವೆ ಸಮಯದಲ್ಲಿ ತೆಗೆದ ಫೋಟೋ ನೋಡಬೇಕೆನ್ನಿಸಿತು. ಆದರೇ ಅವುಗಳು ಇರುವ ಮೇಜಿನ ಖಾನೆಯ ಬೀಗದ ಕೈ ಅವರ ಹತ್ತಿರ ಇತ್ತು.

**ಧೀಮಂತ** : - ಆಮೇಲೆ?

**ಹಂಸಾ** : - ನಗು ಬರುತ್ತೆ. ಕಂಬಿ ಹಾಕಿ ನಾನು ಅದನ್ನು ತೆಗೆದೆ

**ಧೀಮಂತ** : - ಹೌದಾ? ಬಹಳ ಧೈರ್ಯವಂತೆ ನೀನು. ಅಲ್ವಾ?

**ಹಂಸಾ** : - **(ಮುಖ ತಗ್ಗಿಸಿ)** ನಾನು ಏನು ಮಾಡ್ತಾ ಇದ್ದೀನಿ ಅಂತ ನನಗೆ ತಿಳಿದಿರಲಿಲ್ಲ. ಜೊತೆಗೆ ಒಂದು ನೋಟ್ ಬುಕ್ ಸಿಕ್ಕಿತು. ನೋಡು

**(ನೋಟ್ ಬುಕ್ ಕೊಡುತ್ತಾಳೆ. ಧೀಮಂತ ಓದುತ್ತಾನೆ)**

**ಧೀಮಂತ** : - ಡೈರಿ ಇದು

**ಹಂಸಾ** : - ಹೌದು ಜೋರಾಗಿ ಓದು

**ಧೀಮಂತ** : - **(ಓದುತ್ತಾನೆ)** "ಈ ಡೈರಿ ಏಕೆ ಬರೆಯುತ್ತಿದ್ದೇನೆ ಅಂತ ನನಗೆ ಗೊತ್ತಿಲ್ಲ ........ ಇಂದಿಗೆ ಎಂಟು ವರ್ಷ ಹಂಸಾ ನನ್ನವಳಾಗಿ"...... ಮದುವೆ ಆಗಿ ಎಂಟು ವರ್ಷ ಆಯ್ತೇನು?

**ಹಂಸಾ** : - ಹೌದು

**ಧೀಮಂತ** : - **(ಓದುತ್ತಾನೆ)** "ಪ್ರತಿಯೊಂದು ಮಾತನ್ನು ವಿಶ್ಲೇಷಿಸುವುದು ಈಗಿನ ಕಾಲದ ಒಂದು ಫ್ಯಾಷನ್. ಹಂಸ ಮತ್ತು ನನ್ನ ನಡುವಿನ ಸಂಬಂಧ ಹೇಗೆ?..... ನಾನು ಸುಖಿಯೇ? ಹಂಸಾ ಸುಖಿಯೇ? ನಾನಾಗಲಿ, ಅವಳಾಗಲಿ ಬೇರೆ ವಿವಾಹವಾಗಿ ಸುಖವಾಗಿರಲು ಸಾಧ್ಯವಿಲ್ಲವೇ? ನನಗೆ ಇಷ್ಟು ಮಾತ್ರ ತಿಳಿದಿದೆ. ನಾನು ಹಂಸಾಳಿಂದ ದೂರವಾಗಿ ಒಂದು ಕ್ಷಣವೂ ಇರಲಾರೆ. ಹಂಸಾಳ ಮನಸ್ಸು ಇನ್ನೂ ನನಗೆ ಪೂರ್ತಿಯಾಗಿ ತಿಳಿದಿಲ್ಲ. ಅವಳಲ್ಲಿ ಏನೋ ಅತೃಪ್ತಿ ಇದೆ. ಅದಕ್ಕೆ ಕಾರಣ ನಾನು ಅನ್ನುತ್ತೆ. ನನ್ನ ಸ್ವಭಾವ ನನಗೇ ಅರ್ಥವಾಗುತ್ತಿಲ್ಲ. ಒಂದಂತು ನಿಜ. ಹಂಸಾಳನ್ನು ಬಿಟ್ಟು ಬೇರೆಯವರ ಜೊತೆ ಸರಿಯಾಗಿ ನಡೆದುಕೊಳ್ಳುತ್ತಿದ್ದೇನೆ. ಆದರೇ ಹಂಸಾಳ ಬಳಿ ಬಹಳ ಕ್ರೂರವಾಗಿ ವರ್ತಿಸುತ್ತಿದ್ದೇನೆ. ಮುಂದೆ ಪಶ್ಚಾತ್ತಾಪವಾಗುತ್ತೆ. ಇದರಿಂದ ಏನೂ ಪ್ರಯೋಜನ ಇಲ್ಲ ಅನ್ನುತ್ತೆ. ನನ್ನ ಭಾವನೆ ನಾನು ಅವಳಿಗೆ ಯೋಗ್ಯನಲ್ಲ. ನನ್ನ ವಿಚಿತ್ರ ಸ್ವಭಾವವನ್ನು ಅವಳಿಗೆ ತಿಳಿಸೋಣವೆಂದರೆ ಮನಸ್ಸು ಹಿಂದೇಟು ಹಾಕುತ್ತದೆ. ಧೀಮಂತನ ಮುಖಾಂತರ ಹೇಳೋಣವೆಂದರೆ ಮನಸ್ಸು,

ಕೇಳೋಲ್ಲ. ಇವೆಲ್ಲಾ ಹಂಸಾಳಿಗೆ ಗೊತ್ತಾದರೆ ನನ್ನ ಕ್ಷಮಿಸುತ್ತಾಳೆಂದು ಖಂಡಿತಾ ನನಗೆ ನಂಬಿಕೆ ಇದೆ .......... ಆದರೇ .......

**ಹಂಸಾ** : - ಸಾಕು, ಧೀಮಂತ ಬಾಯಿ. 63ನೇ ಪುಟ ಓದು

**ಧೀಮಂತ** : - **(ಓದುತ್ತಾನೆ)** "ಈ ದಿನ ಒಂದು ಕಹಿ ಪ್ರಸಂಗ ನಡೆಯಿತು ....... ವಿನಿತಾ ಇಂದು ವಿಹ್ವಲಳಾಗಿ ಬಿಟ್ಟಳು ........

ವಿನಿತಾ? ಯಾರು ವಿನಿತಾ?

**ಹಂಸಾ** : - ಇದ್ದಾಳೆ. ತುಂಬಾ ಸುಂದರವಾಗಿದ್ದಾಳೆ. ಉರ್ಸುಲಾಳ ಗೆಳತಿ

**ಧೀಮಂತ** : - **(ಓದುತ್ತಾನೆ)** ಅಂತಹ ಭವ್ಯ ಸೌಂದರ್ಯಕ್ಕೆ ಬೇರೆ ಯಾವ ಶಬ್ದವೂ ಇಲ್ಲ ........ ಅವಳು ಭ್ರಷ್ಟೆ ಅಂದರೆ ಪಾಪವಾದೀತು .........ಓ ....... ದೇವರೇ ಪ್ರಪಂಚದಲ್ಲಿ ಬಹಳ ತ್ರಾಸದಾಯಕ ವಸ್ತು ಅಂದರೆ ಅನುಪಮ ಸೌಂದರ್ಯ ...... ಸುಂದರ ಮನುಷ್ಯ ಪಾಪಿ ಆಗುವುದು ಹೇಗೆ ಸಾಧ್ಯ? ......... ನನಗೇನು ಗೊತ್ತಾಗುತ್ತಿಲ್ಲ ........... ನಾನು ಅವಳಿಗೆ ಬಹಳಷ್ಟು ತಿಳಿಯ ಹೇಳಿದೆ. ದೇವರು ಅವಳಿಗೆ ಒಳ್ಳೆಯ ದಾರಿ ತೋರಿಸಲಿ .........

**ಹಂಸಾ** : - ನೋಡಿದೆಯಲ್ಲಾ, ಅವರು ಎಂಥಹವರೆಂದು

**ಧೀಮಂತ** : - ಅರೇ, ಅವನೊಬ್ಬ ದೊಡ್ಡ ಸಾಧು

**ಹಂಸಾ** : - ನಾನು ಭಾಗ್ಯವಂತೆ ತಾನೆ. ಹಾ! ಇನ್ನೊಂದು ಮಾತು. ಆ ದಿನ ಅವರು ಗಡಿಯಾರ ತರಿಸಿದ್ದರು. ನಾನು ಉರ್ಸುಲಾಗೆ ಅಂತ ತಿಳಿದಿದ್ದೆ. ಆದರೇ ......

**(ಮೇಜಿನ ಖಾನೆಯಿಂದ ಗಡಿಯಾರ ತೆಗೆಯುತ್ತಾಳೆ. ಆದರಲ್ಲಿರುವ ಚೀಟಿಯನ್ನು ತೆಗೆದು ಧೀಮಂತನಿಗೆ ಓದಲು ಕೊಡುತ್ತಾಳೆ)**

**ಧೀಮಂತ** :-"ಅಧೀರಳೂ ಸಂದೇಹಪರಳೂ ಆದ ಹಂಸಾಗೆ ಪ್ರೀತಿ ಪೂರ್ವಕವಾಗಿ"

**ಹಂಸಾ** : - ನನ್ನ ಅಣಕಿಸಿದ್ದಾರೆ ಯಾಕೆಂದರೆ ಅದು ಉರ್ಸುಲಾಗಾ ಅಂತ ಕೇಳಿದ್ದೆ

**ಧೀಮಂತ** : - ಒಂದು ಸಂದೇಹ ನೋಡು. ಇದೆಲ್ಲಾ ನಿನ್ನ ದೃಷ್ಟಿ, ನಿನ್ನ ವಿಚಾರಗಳನ್ನು ಬದಲಾಯಿಸಬೇಕೂಂತ ಅಲ್ಲ ತಾನೆ?

**ಹಂಸಾ** : - ಏನು ಹಾಗೆಂದರೆ?

**ಧೀಮಂತ** : - ಗಡಿಯಾರ ತರಿಸೋದು ನಿನಗೆ ತಿಳಿಯದೆ ಇದ್ದಿದ್ದರೆ ಬಹುಶಃ........

**ಹಂಸಾ** : - ಗಡಿಯಾರ ಉರ್ಸುಲಾಗೆ ಕೊಡುತ್ತಿದ್ದರು ಅಂತಲೇನು?

**ಧೀಮಂತ** : - ಹೌದು.

**ಹಂಸಾ** : - ಇದು ನಿಜವಲ್ಲ. ಮೊದಲೇ ಉರ್ಸುಲಾಗೆ ಬೆಳ್ಳಿ ತಟ್ಟೆಯನ್ನು ಕಳುಹಿಸಿದ್ದರು

**(ಅವಸರವಾಗಿ ನರೇಶ ಮತ್ತು ಸುರುಭಿಯರ ಪ್ರವೇಶ)**

**ನರೇಶ** : - ಹಂಸಾ, ನಡಿ ಬೇಗ, ಹೊತ್ತಾಯ್ತು. ಇನ್ನೂ ಆರಾಮವಾಗಿ ಕುಳಿತ್ತಿದ್ದಿಯಲ್ಲ? ನಡಿ ಬೇಗ, ಸುರುಭಿಯೂ ಬಂದಿದ್ದಾಳೆ. ಧೀಮಂತ, ನಾಟಕ ಎಷ್ಟು ಗಂಟೆಗೆ ಪ್ರಾರಂಭ?

**ಧೀಮಂತ** : - **(ನೋಟ್ ಬುಕ್ ಕೈಗೆ ಕೊಟ್ಟು)** ನೋಡು, ಎಷ್ಟು ಗಂಟೆಗೆ ಅಂತ ಇದರಲ್ಲಿ ಬರೆದಿರಬಹುದು?

**ನರೇಶ** : - ಅರೇ, ಇದು ನಿನಗೆ ಎಲ್ಲಿಂದ ...........? **(ಹಂಸಾಳ ಬಳಿ ಹೋಗುತ್ತಾನೆ)**

**ಹಂಸಾ** : - ಸ್ವಾಮೀ ........

**ನರೇಶ** : - ಹಂಸಾ. **(ಸ್ವಲ್ಪ ಕಾಲ ತಡೆದು)** ಹಂಸಾ ನೀನು ನನ್ನನ್ನು ಕ್ಷಮಿಸಿದ್ದೀಯಾ?

**ಹಂಸಾ** : - ಪ್ರಿಯತಮ ...............

**(ತೆರೆ)**

## ಪಾತ್ರವರ್ಗ

ಗೌರಿ

ತುಲಸಿ

ಒಂದನೇ ಕಾಲೇಜು ಯುವಕ

ಎರಡನೇ ಕಾಲೇಜು ಯುವಕ

ಕಿಶೋರ್

ಮನು

ಲಲೀ

ರಣು

ಕಿಲೀ

**[ಸಮಯ ಭಾನುವಾರ ಸಾಯಂಕಾಲ, ಮುಂಬೈ ನಗರದ ಗಲ್ಲಿಯೊಂದರ ಮನೆಯ ಎರಡನೇ ಅಂತಸ್ತಿನ ಮೆಟ್ಟಿಲ ಬಳಿ ಒಬ್ಬ ಗಂಡಸು ಎಲ್ಲಿಗೊ ಹೋಗಲು ತಯರಾಗಿ ನಿಂತಿದ್ದಾನೆ.]**

**ಗಂಡಸು** : -ನಡೀ ಮತ್ತೆ. ಆಟ ಶುರುವಾದ ಮೇಲೆ ಹೋದರೆ.

**ಹೆಂಗಸಿನ ಧ್ವನಿ** : - ಈ ಮಕ್ಕಳನ್ನು ಸ್ವಲ್ಪ ಸಮಾಧಾನ ಮಾಡಿ ಬರುತ್ತೇನೆ ಇರಿ. ಇಲ್ದಿದ್ರೇ ......

**ಗಂಡಸು** : - ನೀನು ಮುಂದೆ ನಡಿ, ನಾನು ಇವರನ್ನು ಸಮಾಧಾನ ಮಾಡಿ ಬರುತ್ತೇನೆ.

**ಹೆಂಗಸು** : - **[ಪ್ರವೇಶಿಸುತ್ತಾಳೆ] [ಹಳ್ಳಿಯಿಂದ ಮುಂಬೈಗೆ ಬಂದ ಹೆಂಗಸರು ಉಡುಪು ಧರಿಸುವಂತೆ ಇವಳೂ ಧರಿಸಿದ್ದಾಳೆ]**

....... ನಡಿ .......ಕಿಶೂ ನೀನು ಎಲ್ಲಾರ್‍ನೂ ಸರಿಯಾಗಿ ನೋಡ್ಕೋ.

**ಕಿಶೋರ್ : - [ 11 - ವರ್ಷ, ಪ್ರವೇಶಿಸಿ]** ರಜಾ ಬಂದಾಗ ಕರೆದುಕೊಂಡು ಹೋಗ್ತೀನಿ ಅಂದ್ರಿ, ಈಗ ಯಾಕೆ ಕರೆದುಕೊಂಡು ಹೋಗಲ್ಲ? ಇದರ ಬದಲು ನಮ್ಮನ್ನು ಹಳ್ಳಿಯಲ್ಲೆ ಬಿಟ್ಟು ಬಂದಿದ್ರೆ ಚೆನ್ನಾಗಿತ್ತು. ಇಲ್ಲಿಗ್ಯಾಕೆ ಕರೆದು ತಂದ್ರಿ?

**[ಲಲೀ ಮತ್ತು ಮನು ಇವರ ಪ್ರವೇಶ]**

**ಲಲೀ** : - ಅಮ್ಮಾ, ಅಮ್ಮಾ ನೋಡು, ನಾನು ನಿನ್ನ ಹಾಗೆ ಬಟ್ಟೆ ಹಾಕಿಕೊಂಡೆ. ನನ್ನನ್ನು ಕರೆದುಕೊಂಡು ಹೋಗು.

**ಹೆಂಗಸು** :-ಕಿಶು ನಿನ್ನ ಮಾತನ್ನ ವಾಪಸ್ ಬಂದ ಮೇಲೆ ಕೇಳೋಣವಂತೆ. ಲಲೀ ಮೆಟ್ಟಿಲು ಇಳಿದು ಬಿಟ್ಟಾಳು ನೋಡಿಕೋ.

**ಕಿಲೀ** : - **(ತಂದೆಯ ಕೈಗೆ ಜೋತು ಬೀಳುತ್ತಾ)**ನಾನು ಎಲ್ಲಾರನ್ನೂ ಭೂಲೇಶ್ವರದ ದಾರಿಯಲ್ಲಿ ಬಿಟ್ಟು ಬರ್ತೀನಿ. ಆಮೇಲೆ ಹುಡುಕಿವಿರಂತೆ. ದಿನಾ ಹೇಳ್ತಾರೆ. ಆದರೆ ನಾಟಕ ತೋರ್‍ಸಕ್ಕೆ ಕರಕೊಂಡು ಹೋಗಲ್ಲ. ತಾವು ಮಾತ್ರ ...........

**[ಹೆಂಗಸು ಮೆಟ್ಟಿಲು ಇಳಿದು ಹೋಗುತ್ತಾಳೆ]**

**ಗಂಡಸು** : - ನೀನು ನಮ್ಮ ಹಾಗೆ ದೊಡ್ಡವನಾದಾಗ ನೀನೂನೂ ........

**[ಕೈ ಬಿಡಿಸಿಕೊಂಡು ಮೆಟ್ಟಿಲು ಇಳಿಯುತ್ತಾನೆ]**

**ಕಿಲೀ** : - **[ಕಟಕಟೆ ಹಿಡಿದುಕೊಂಡು ಮೆಟ್ಟಿಲುಗಳ ಕಡೆ ಬಾಗಿ, ಕೈಯನ್ನು ಕಿವಿಯ ಮೇಲೆ ಇಟ್ಕೊಂಡು ಕೇಳಿಸದವಳಂತೆ]**

ಏನಂದೇ? ಗೋಡಂಬಿ ತರ್‍ತೀಯಾ? ನಮಗೇನು ಬೇಡ ಗೋಡಂಬಿ. ಕರ್‍ಕೊಂಡು ಮಾತ್ರ ಹೋಗಲ್ಲ.

**[ಇಷ್ಟರಲ್ಲಿ ಸುಮಾರು ಹತ್ತು ವಯಸ್ಸಿನ ಐದಾರು ಮಕ್ಕಳು ಬರುತ್ತವೆ. ಇಬ್ಬರು ಹುಡುಗರು ಲುಂಗಿ ಸುತ್ತಿಕೊಂಡಿದ್ದಾರೆ. ಈಗ ತಾನೇ ಸ್ನಾನ ಮಾಡಿಕೊಂಡ ಬಂದ ಹಾಗೋ ಅಥವ ಎಲ್ಲಾ ಬಟ್ಟೆಗಳು ಒಗತಕ್ಕೆ ಹೋಗಿದೆಯೋ ಎಂಬಂತೆ ಇದೆ]**

**ಲಲೀ** : - ನಡಿಯೇ, ನಾನು ನೀನು ಗಾಡಿ ನೋಡಿ ಬರೋಣ.

**ಕಿಲೀ** : -ಅಮ್ಮ ಹೊಡಿತಾಳೆ.

**ಮನು** : - ಏನೋ ಕಿಶು. ಗೋಕುಲ್ ಕಣ್ಣ ನಾಟಕಕ್ಕೆ ಕರ್‍ಕೊಂಡು ಹೋಗ್ತೀನಿ ಅಂದ್ರಲ್ಲ? ಎಲ್ಲಿ ಕರ್‍ಕೊಂಡು ಹೋದ್ರಿ? ಸಂತೋಷದಿಂದ ಉಬ್ಬಿ ಹೋಗ್ತಿದ್ಯಲ್ಲಾ?

**ಕಿಲೀ** : - ಅಯ್ಯೋ. ಬಿಡೋ ಅದನ್ನ.

**ಗೌರಿ** : - ಕಿಶು ಭಾಯಿ. ಬಾ ನಾವು ಆಡೋಣ.

**ಮನು** : - **(ತಮಾಷೆ ಮಾಡುತ್ತಾ)** ಬೇಡ ಕಿಶು. ನಾವು ನಾಟಕ ಆಡೋಣ.

**ಕಿಲೀ** : - **(ಕೋಪದಿಂದ)** ಹಾಂ .......**(ಸ್ವಲ್ಪ ಹೊತ್ತಿನಲ್ಲಿ)**ನಾವು ನಾಟಕ ಆಡಿದ್ರೆ ನೋಡೋರು ಯಾರು?

**ಮನು** : - ಅದೆಲ್ಲಾ ಬಿಡಿ. ಈಗ ನಾವು ಮುಂಬೈ ನಾಟಕ ಆಡೋಣ.

**ಗೌರಿ** : - ಬೇಡ. ಹಳ್ಳಿ ಆಟ ಆಡೋಣ.

**ಮನು** : - ಹುಚ್ಚೀ ಹಳ್ಳಿಯೋರು ತಾನೆ ಮುಂಬೈಗೆ ಬರೋದು.

**ಕಿಲೀ** : - ಸರಿ. ನಡಿಯಿರಿ.

**[ಗಲಾಟೆ ಆಗುತ್ತೆ. ಇಬ್ಬರು ಮೂವರು ಹುಡುಗರು ದೇವದಾರು ಮರದ ಎರಡು ಖಾಲಿ ಪೆಟ್ಟಿಗೆಗಳನ್ನು ತರುತ್ತಾರೆ. ಅವನ್ನು ಒಂದು ಮೂಲೆಯಲ್ಲಿ ಇಡುತ್ತಾರೆ. ಹುಡುಗರು ಅಲ್ಲಿ ಕೂಡುತ್ತಾರೆ. ಹುಡುಗಿಯರು ಮೆಟ್ಟಿಲುಗಳ ಬೇರೊಂದು ಮೂಲೆಯಲ್ಲಿ ಕೂಡುತ್ತಾರೆ.]**

**ಒಬ್ಬ ಹುಡುಗ** : - ನಾನು ಮುಂಬೈನಲ್ಲಿ ನೌಕರಿ ಮಾಡ್ತಾ ಇದ್ದೇನೆ.

**ಇನ್ನೊಬ್ಬ ಹುಡುಗಿ** : - ಹಾಗಾದರೆ ನಾನಿರುವುದು ಹಳ್ಳಿಯಲ್ಲಿ. ಅಲ್ವಾ ಕಿಶು ಭಾಯಿ.

**ಕಿಲೀ** : - ಹೌದು. ನೀನು ಹೊಲಕ್ಕೆ ಹೋಗಬೇಕು. ಭಾರ ಹೊರ ಬೇಕು. ದನಕರುಗಳನ್ನ ನೋಡ್ಕೋಬೇಕು.

**ಗೌರಿ** : - ನೀನು ಸಂಪಾದನೆ ಮಾಡಿ ಹಣ ಕಳಿಸ್ತೀಯಾ ತಾನೆ?

**[ಹುಡುಗರು ಪಿಸುಗುಟ್ಟುತ್ತಿದ್ದಾರೆ]**

**ಕಿಲೀ** : - ಹಾಳಾದ್ದು. ನನ್ನ ಈ ಕೆಲ್ಸ ಮುಗೀತಾನೆ ಇಲ್ಲ. ಇದಕ್ಕಿಂತ ಮುಂಬೈಯೇ ವಾಸಿ. ನಮದೀ ಹೋಗಿದ್ದಳಲ್ಲ ಎಂಥಾ ಸೇಠಾಣಿಯಾಗಿ ಬಂದಿದ್ದಾಳೆ.

**ತುಲಸೀ** : - ಮನೆಯೆಲ್ಲೆಲ್ಲಾ ಒಬ್ಬಳೇ. ನನಗ್ಯಾಕೋ ಭಯ ಆಗ್ತಾ ಇದೆ.

**ಕಿಲೀ** : - ಹಾಗಾದರೆ. ಈ ಗೌರಿ ಓದಿದೋಳು. ಇವಳ ಹತ್ರ ಪತ್ರ ಬರೆಸಿ ಹಾಕಬಾರದೇನು? ಅವರೇ ಕರೆಸಿಕೊಳ್ತಾರೆ.

**ಗೌರಿ** : - ಇಲ್ಲಾ ಮನೆಗೆ ಹೋಗ್ತಾರೆ. ನಾವು ಹೆಂಗಸರು ಏನು ಮಾಡೋಣ?

**(ತಮ್ಮಲ್ಲೆ ಪಿಸುಗುಟ್ಟುತ್ತಾರೆ)**

**ಕಿಶು** : - ನೋಡು ಮನು. ನಿನ್ನ ತಂಗಿ ಕಿಲೀದು ಬಹಳ ಜೋರು.

**ಮನು** : - ನಿನ್ನ ತಂಗಿ ಗೌರಿ ಏನು ಕಮ್ಮಿ. ಬಡ್ಡಿ ಮಕ್ಳು ಚಿಕ್ಕವರಾದ್ರು ಚೆನ್ನಾಗಿ ಅಭಿನಯ ಮಾಡ್ತಾವೆ.

**ರಣು** : - ಗೌರಿ. ನೀನು ಕಾಗದಾನ ಅಂಚೆ ಪೆಟ್ಟಿಗೆಯಲ್ಲಿ ಹಾಕಿದೆಯಾ?

**ಗೌರಿ** : - ಓಹೋ! ಯಾವಾಗ್ಲೋ. ಹಳ್ಳಿಯಲ್ಲಿ ಯಾರಿಗೂ ಗೊತ್ತಾಗ್ಲೆ ಇಲ್ಲ.

**ತುಲಸೀ** : - ನಿನಗೆ ಏನು ತಿಳಿಯೋದೇ ಇಲ್ಲ. ಯಾರಿಗೂ ಗೊತ್ತಾಗ್ಲಿಲ್ಲ ಅಂತ ಯಾಕೆ ಹೇಳಬೇಕು.

**ಕಿಲೀ** : - ನಿನಗೆ ಮಹಾ ಆಡೋಕೆ ಬರ್‍ತದೆ. ಬಹಳ ಬುದ್ಧಿವಂತಳಂತೆ ಮಾತಾಡ್ತಾಳೆ. ಅಂತ ಕಾಗದಾನ ಎಲ್ಲರ ಮುಂದು ಬರಿಯುತ್ತಾರೇನು ?

**ಕಿಶೋರ್** : - ಏ ..... ಗಲಾಟೆ ಮಾಡಬೇಡಿ. ಕಾಗದ ತಲುಪಿಯಾಯಿತು. ಎನೋಲೋ ಲಾಲಿಯಾ ನೀನು ಅಂಚೆಯವನಾಗು.

**[ಲಾಲಿಯಾ ಶಾಲೆಯ ಚೀಲವನ್ನು ಅಂಚೆಯವನ ಚೀಲದಂತೆ ಹೆಗಲಿಗೆ ಹಾಕಿಕೊಂಡು ಓಡೋಡಿ ಬರುತ್ತಾನೆ. ಕೈಯಲ್ಲಿ ಒಂದು ತುಂಡು ಕಾಗದ ಹಿಡಿದುಕೊಂಡು ಹುಡುಗಿಯರ ಮುಂದೆ ಹೋಗುತ್ತಾನೆ. ಎಲ್ಲಾರೂ "ನನ್ನ ಪತ್ರ, ನನ್ನ ಪತ್ರ" ಎಂದು ಗಲಾಟೆ ಮಾಡುತ್ತಾರೆ]**

**ಲಲೀ** : - ಲಾಲಿಯಾ ಪೋಷ್ಟ್ ಮ್ಯಾನ್, ಲಾಲಿಯಾ ಪೋಷ್ಟ್ ಮ್ಯಾನ್ ಕಾಗದ ಪತ್ರ ಏನಾದರೂ ಇದೆಯಾ? ಲಾಲಿಯಾ ಪೋಷ್ಟ್ ಮ್ಯಾನ್ ಮುಂಬೈನಿಂದ ಏನಾದ್ರೂ ಕಾಗದ ಬಂದಿದೆಯಾ?

**ಮನು** : - **(ದೂರದಿಂದ)**ಏ. ನಿಮ್ಮನ್ನೆಲ್ಲಾ ಎಬ್ಬಿಸಬೇಕು ಇಲ್ಲಿಂದ. ಹೀಗಾ ಆಟ ಆಡೋದು? ನಾವೆಲ್ಲ ನೌಕರಿ ಬಿಟ್ಟು ಬಂದು ಬಿಡ್ತೇವೆ ಅಷ್ಟೆ.

**(ಅಂಚೆಯವನು ಮತ್ತೆ ಮುಂಬೈನ ಗುಂಪಿನ ಕಡೆ ಹೋಗುತ್ತಾನೆ. ಸದ್ದು ಅಡಗುತ್ತದೆ. ಗೌರಿ ಪತ್ರ ಓದುತ್ತಾಳೆ)**

**ಗೌರಿ** : - ಕಿಶು ಭಾಯಿ. ಈ ಪತ್ರ ಗೋಕುಲ್ ದಾಸನ ಮನೆಯಾಕೆಯದು.

**ತುಲಸೀ** : - ಅಂದರೆ ಯಾರು? ನಾನು ತಾನೆ?

**ಗೌರಿ** : - **(ಹುಸಿ ಕೋಪ)**ನನ್ನ ಅಣ್ಣನಿಗೆ ನಿನ್ನಂತಹ ಕಬಾಡಿ ಹುಡುಗೀನಾ? ಹೋಗ್ಹೋಗು.

**(ಎಲ್ಲಾ ಹುಡುಗಿಯರು ನಗುತ್ತಾರೆ)**

**ಕಿಲೀ** : - **(ಅಧೀರಳಾಗಿ ಕೇಳುತ್ತಾ)**ನನ್ನದಾ? ನನ್ನದಾ?

**ಗೌರಿ** : - **(ಮೆಲ್ಲನೆ ಗುದ್ದಿ)**ಸುಮ್ಮನಿರೇ.

**ಕಿಲೀ** : - ನನ್ನದಾ? ಹೌದು ಹೌದು ನನ್ನದೇ.

**ಗೌರಿ** : - ಹಾಗಾದರೆ ತಗೋ. ನಿನ್ನದೇ ಇರಬಹುದು. **[ಮನು ರೇಗುತ್ತಾನೆ]**

**ರಣು** : - **(ಲಾಲಿಯಾನ ಕುರಿತು)**ಮನುವಿನ ತಂದೆ ಗೋಕುಲ್ ಕಕ್ಕ ಕಿಲೀನ ಕಿಶೋರನಿಗೆ ಕೊಟ್ಟು ಮದುವೆ ಮಾಡೋಣಂತ ಇದ್ರು. ನನಗೇನು ಗೊತ್ತು? ನಮ್ಮ ತಾಯಿ ಯಾರ ಹತ್ರನೋ ಹೇಳ್ತಾ ಇದ್ದಳು. ಇವರಿಗೆಲ್ಲಾ ಗೊತ್ತಿದೆ ಅಂತ ಕಾಣುತ್ತೆ.

**ಗೌರಿ** : - ಬರೆದಿದ್ದಾಳೆ ...........ಸ್ವಸ್ತಿಶ್ರೀ ...... ಉಹೂಂ ......ಇದು ಸರಿಯಾಗೋಲ್ಲ. **(ಎಲ್ಲಾರನ್ನು ನೋಡುತ್ತಾಳೆ)** ವಿಷಯ ಇಷ್ಟೆ. ನೀನು ಮುಂಬೈಗೆ ಬಾ ಅಂತ ಬರೆದಿದ್ದಾರೆ. ಆದ್ದರಿಂದ ಬೇಗ ಹೋಗು.

**ಕಿಲೀ** : - ಲೇ ತುಳಸೀ. ನೀನೇನಾದ್ರೂ ಹೇಳಿ ಕಳ್ಸೋದು ಇದೆಯಾ?

**ತುಲಸೀ** : - ಅವರಿಗೆ ಹೇಳು "ಕಳ್ಳರ ಭಯ ಹೆಚ್ಚಾಗ್ತಿದೆ. ರೈತಾನೂ ಮನೆಯಲ್ಲಿ ಇರೋದಿಲ್ಲ. ಓಡಿ ಹೋಗ್ತಾನೆ ಅಂತ".

**ಕಿಲೀ** : - ಏನಮ್ಮ ಗೌರಿ. ನೀನೂ ಏನಾದ್ರೂ ಕಳಿಸಿ ಕೊಡೋದಿದ್ರೆ ಕಳುಹಿಸು. ಇನ್ನೇನು

ಮೋಟಾರ್ ಬಂದ್ಬಿಡುತ್ತೆ.

**(ರಣು ಮೋಟಾರಿನಂತೆ ಶಬ್ದ ಮಾಡುತ್ತಾ ಓಡಿ ಬರುತ್ತಾನೆ)**

**ತುಲಸೀ** : - ಅಗೋ ಮೋಟಾರ್ ಬಂದೇ ಬಿಡ್ತು. ನೀನು ಕುಳಿತುಕೋ. ಮೋಟಾರಿನಲ್ಲಿ ಜಾಗವೇ ಇಲ್ಲ. ಬೇಗ ನಡಿ.

**ಲಲೀ** : - 'ಆಮೇಲೆ' ...... ಕುಳಿತುಕೊಂಡು ಮಾತಾಡೋಣ. ಇಗೋ ಹೋದೆ.

**(ಕಿಲೀ ರಣುವಿನ ಹಿಂದೆ ಅವನ ಸೊಂಟ ಬಳಸಿ ನಿಲ್ಲುತ್ತಾಳೆ)**

**ತುಲಸೀ** : - **(ಆಶೀರ್ವದಿಸುತ್ತಾ)**ಎಲ್ಲಾ ಒಳ್ಳೆಯದಾಗಲಿ.

**ಗೌರಿ** : - ನೀನು ಹಾಗೆ ಆಗಿ ಬರ್‍ಬೇಕು ಅಂತಿಯಾ. ಹಳ್ಳಿ ಹೆಂಗಸ್ರೆಲ್ಲಾ ಹಾಗೇ ನೋಡ್ತಾನೇ ಇದ್ಬಿಡಬೇಕು. ಅಯ್ಯೋ ನಾನು ನಟಿಕೆ ಮುರಿಲಾ ..........

**ಕಿಲೀ** : - ಅಕ್ಕಾ, ನನ್ನ ಮನೆಯ ಕಡೆ ನಿಗಾ ಇರಲಿ.

**(ರಣು ಫೂಂ, ಫೂಂ, ಎನ್ನುತ್ತಾ ಮೋಟಾರಿನಂತೆ ಓಡುತ್ತಾನೆ. ಅವನ ಸೊಂಟ ಹಿಡಿದ ಕಿಲೀ ಸಹ ಓಡುತ್ತಾಳೆ. ಇಬ್ಬರೂ ಎದರು ಮೂಲೆಯಲ್ಲಿರುವ ಮುಂಬೈ ಗುಂಪಿನ ಜೊತೆ ಕೂತ್ಕೋತಾರೆ)**

**ಮನು** : - ನಾನು ಈಗ ಕೆಲ್ಸಕ್ಕೆ ಹೊರಟೆ.

**ಕಿಶೋರ್** : - ಅರೆ, ಭೋಗಿಲಾಲ್, ನನ್ನ ತಲೆ ತುಂಬಾ ನೋಯ್ತಾ ಇದೆ. ಇವತ್ತು ಕೆಲ್ಸಕ್ಕೆ ಹೋಗಕ್ಕಾಗಲ್ಲ. ಈ ಮಧ್ಯೆ ಮೋಡ ಹೇಗೆ ಮುಚ್ಚಿಕೊಂಡಿದೆ ನೋಡು.

**ಮೋಹನ್** : - ಅದಂತೂ ಮುಚ್ಚಿರುತ್ತೆ ಬಿಡು. ಏನು ಅತ್ತಿಗೆ? ಅರೆ, ನೀನು ಬಂದಿದ್ದರಿಂದ ಚಹಾ ಕೂಡ ಸಿಕ್ಕಿಲ್ಲ.

**ಕಿಲೀ** : - ನಾನು ಬಂದು ಇಂದಿಗೆ ಆರು ತಿಂಗಳಾಯ್ತು. ಆರು ಜನ್ಮ ಆದಂತಿದೆ. ಯಾರಾದರೂ ಜತೆಗೆ ಸಿಕ್ಕರೆ ಮನೆಗೆ ಹೊರಟು ಬಿಡ್ತೇನೆ. **(ಹುಡುಗಿಯರಲ್ಲಿ ಗಲಿಬಿಲಿ)**

**ರಣು** : - ಏನು ಅತ್ತಿಗೆ? ಆನಂದವಾಗಿದ್ದೀಯಾ?

**ಕಿಶೋರ್** : - ಲೋ, ಯಾರಾದ್ರೂ ಊರಿಗೆ ಹೋಗ್ತಾ ಇದ್ದಾರೇನು ?

**ರಣು** : - ಹೌದು, ನಾಳೆ ಆ ರಾಮಲಾಲ್ ಹೋಗ್ತಾನೆ.

**(ಹುಡುಗಿಯರಲ್ಲಿ ಗಲಿಬಿಲಿ ಹೆಚ್ಚಾಗುತ್ತೆ. ರಣುವಿನ ಮೋಟಾರ್ ಬರುತ್ತದೆ. ಕಿಲೀ ಇಳಿಯುತ್ತಾಳೆ. ಎಲ್ಲಾರೂ ಅವಳನ್ನು ಸುತ್ತುವರೆಯುತ್ತಾರೆ. ಕಿಲೀ ಮೆಲ್ಲಗೆ ನಡೆಯುತ್ತಾಳೆ)**

**ತುಲಸೀ** : - ಜನ್ಮ ಸಾರ್ಥಕ ಆಯ್ತು. ಮುಂಬೈ ನಿಜವಾಗಿಯೂ ಅಲಕಾಪುರಿ. ಆದರೆ ನಾಲ್ಕು ವರ್ಷ ಇದ್ರೂನೂ, ನಾನು ಹಾಗೇ ಇದ್ದೀನಿ.

**ಕಿಶೋರ್** : - ಈ ಬೇಸಿಗೆಯಲ್ಲಿ ಮನೆಗೆ ಹೋಗದೆ ಇದ್ರೆ ಆಗೋದೇ ಇಲ್ಲ. ಉರಿದು ಬೀಳಲಿ ಈ ಪ್ರಪಂಚದ ಗೊಂದಲವೆಲ್ಲಾ.

**ರಣು** : - ಮೊದಲು ನಿನ್ನ ಆರೋಗ್ಯ ನೋಡಿಕೋ ಒಂದೆರೆಡು ತಿಂಗಳು ಹವಾ ಬದಲಾವಣೆ ಮಾಡಿಕೊಂಡು ಬಾ.

**ಕಿಶೋರ್** : - ನಾನು ಮನೆಗೆ ಚಹಾ ಕಳುಹಿಸಬೇಕು. ಯಾರ ಕೈಲಿ ಕಳುಹಿಸಲಿ. ಹೆಂಗಸರದು ಇದೇ ಗಲಾಟೆ. ಒಂದ್ಸಲ ಮುಂಬೈಗೆ ಬಂದ್ರೆ ಸಾಕು, ಊರಿನಲ್ಲೂ ಅವರಿಗೆ ಅದೇ ಮಜ ಬೇಕು.

**ರಣು** : - ಅಂದ್ರೆ ನಿನಗೆ ಬೇರೆ ಇನ್ನೇನಪ್ಪ ಖರ್ಚು.

**ಕಿಶೋರ್** : - ಅರೆ. ಬೇರೆ ಮನಸ್ಸಿನ ಜಂಜಾಟ ನಿನಗೇನಯ್ಯ ಗೊತ್ತು?

**ಲಾಲಿಯಾ** : - ಈ ಸ್ವರಾಜ್ಯ ಅನ್ನೋ ಚಕ್ಕರ್‌ನಲ್ಲಿ ಬಿದ್ದು ಎಲ್ಲಾರಿಗೂ ಡಿಫಿಕಲ್ಟಿ ಆಗೋಯ್ತು.

**ಮನು** : - ಲೇ ಲಾಲಿಯಾ. ನಿಮ್ಮಪ್ಪನಂತೆ ಸ್ವರಾಜ್ಯದ ವಿರುದ್ಧ ಮಾತನಾಡಿಯೇ ಜೋಕೆ **(ಗಲಾಟೆ ಆಗುತ್ತದೆ)**

**ಕಿಶೋರ್** : - **(ಶಾಂತಿ ಭಾವದಿಂದ)**ಬಾ. ಗೌರಿ ಬಹೆನ್.

**ಗೌರಿ** : - ಎಲ್ಲಾರೂ ಚೆನ್ನಾಗಿದ್ದೀರಾ? ಬಹಳ ದಿನ ಆಯ್ತು ನೋಡಿ. ನಮ್ಮಣ್ಣನದು ಕಾಗದ ಪತ್ರ ಏನಾದರೂ ಬಂದಿದೆಯಾ ? ಮಗ ಚೆನ್ನಾಗಿದ್ದಾನೆ ತಾನೆ.

**ತುಲಸೀ** : -ಅಯ್ಯೋ ಹುಚ್ಚೀ. ಹೆಣ್ಣು ಮಗು ಆಗಿರೋದು. ಅಷ್ಟೂ ಗೊತ್ತಿಲ್ವ. ನಿನಗೆ ಆಟ ಆಡೋಕೆ ಯಾವಾಗ ಬರುತ್ತೋ ಕಾಣೆ.

ಅಯ್ಯೋ. ಹೋಗೇ ..... **(ನೆಟ್ಟಗೆ ನಿಂತು)**ಮುಂಬೈನಲ್ಲಿ ಮನೆ ಮಾಡಿದ್ರೂ ಭಾಗ್ಯಕ್ಕೆ ಹೆಣ್ಣು ಮಗುನೇನಾ ?

**(ಹುಡುಗರು ಕೇಳಿಸಿ ಕೊಳ್ಳುತ್ತಾರೆ)**

**ಕಿಲೀ** : - ಅವರವರ ಭಾಗ್ಯ.

**ತುಲಸೀ** : - ಇದರಲ್ಲಿ ಭಾಗ್ಯ ಎಲ್ಲಿ ಬಂತು? ನೀನು ಆ ರಣುವಿನ ಅಮ್ಮನಂತೆ ಮಾತಾಡ್ತೀಯ. ಹೆಣ್ಣು ಮಗು ಕೆಟ್ಟದ್ದೇನು?

**(ರಣು ಬಂದು ತುಲಸೀಗೆ ಚಿಗುಟ ಹೋಗುತ್ತಾನೆ)**

**ಗೌರಿ** : - ತೊಟ್ಟಿಲಿನಲ್ಲಿ ಮಲಗಿದೆಯೇನು?

**ತುಲಸೀ** : -**(ಕಿಲೀಯನ್ನು ಕುರಿತು)**ಯಾಕೆ ಮಾತಾಡೋಲ್ಲ. ಸುಮ್ಮನೆ ಹಾಗೆ 'ಹೂಂ' ಅಂತ ಹೇಳು.

**ಕಿಶೋರ್** : - **(ಕಿಲೀಯನ್ನು ಕುರಿತು)**ಸುಮ್ಮನೆ ಯಾಕೆ? ಗೌರಿ. ರಬ್ಬರಿನ ಆ ಗೊಂಬೆ ಇದೆಯಲ್ಲಾ. ಅದು ಇನ್ನಾವಾಗ ಕೆಲ್ಸಕ್ಕೆ ಬರುತ್ತೆ? ಇಷ್ಟು ದೊಡ್ಡವನಾದ್ರೂ ಇನ್ನೂ ಆಡೋಕೆ ಬರೋಲ್ಲ.

**(ಗೌರಿ ಓಡಿ ಹೋಗಿ ರಬ್ಬರಿನ ಕೆಂಪು ಬೊಂಬೆ ತರುತ್ತಾಳೆ. ತುಲಸೀ ಲಾಲೀ, ಲಾಲೀ ಎಂದು ಮುದ್ದಾಡುತ್ತಾಳೆ)**

**ಕಿಲೀ** : - ಅಳಿಸಬೇಡಾ. ತಾ ಇಲ್ಲಿ. ನಾನು ಸುಮ್ಮನಾಗಿಸುತ್ತೇನೆ **(ಗೊಂಬೆಯನ್ನು ತನ್ನ ಎದೆಗೆ ಅವಚಿಕೊಳ್ಳುತ್ತಾಳೆ)**ಬಾಮ್ಮ. ಬಾ. ಹಾಲು ಕುಡಿ.

**ಲಲೀ** : - ಕುಡೀತಾ ಇಲ್ವಾ?

**ತುಲಸೀ** : - ಇನ್ನೇನು ಮಾಡ್ತಾ ಇದ್ದಾಳೆ ಅಂತೀ?

**ಕಿಲೀ** : - ಅಯ್ಯೋ ಹುಚ್ಚೀ .... ಇದೇನು ನಿಜವಾದ್ದ?

**ಗೌರಿ** : - ಹುಚ್ಚಿ ನೀನು.

**ಲಲೀ** : - ನೀನು ಹುಚ್ಚೀ.

**(ಎಲ್ಲಾರೂ ನೀನು ಹುಚ್ಚ, ನೀನು ಹುಚ್ಚ ಎನ್ನುತ್ತಾರೆ)**

**ಕಿಶೋರ್** : - ನಾನು ಮನೆಗೆ ಹೋಗ್ತೀನಿ.

**ಮನು** :- ಹಾಗಾದ್ರೆ ನಾನು ಹೋಗ್ತೀನಿ. ಈ ನೌಕರಿಯಿಂದ ಬೇಸತ್ತು ಹೋಗಿದೆ. ಇದಕ್ಕಿಂತ ಹಳ್ಳೀಲಿ ನೆಗಿಲು ಹಿಡಿದು ಹೊಟ್ಟೆ ತುಂಬಿಸಿ ಕೊಳ್ಳೋದು ಮೇಲು,

**ರಣು** : - ಅಲ್ಲಿ ಮನೇಲಾದ್ರೂ ಇರಬಹುದಲ್ಲ.

**ಮನು** : - ಅಲ್ದೇ. ನೆಂಟರು ಇಷ್ಟರು ಬಂದರೆ ಅವರನ್ನ ಆದರಿಸಲೂ ಬಹುದು.

**(ರಣುವಿನ ಮೋಟಾರ್ ಫೂಂ, ಫೂಂ ಎಂದು ಬರುತ್ತದೆ. ಅವನ ಹಿಂದೆ ಕಿಶೋರ್, ಮನು ಸೊಂಟ ಹಿಡಿದು ನಿಲ್ಲುತ್ತಾರೆ. ಮೋಟಾರ್ ಓಡುತ್ತದೆ. ತರಕಾರಿ ತರುತ್ತಿರುವ ಹೆಂಗಸೊಬ್ಬಳು ಮೋಟಾರಿಗೆ ಡಿಕ್ಕಿ ಹೊಡೆದು "ಸಾಯಲಿ ನಾಚಿಕೆ ಇಲ್ದೋರು" ಎಂದು ಹೇಳಿ ಮುಂದೆ ಹೋಗುತ್ತಾಳೆ. ಕಿಶೋರ್ ಮತ್ತು ಮನು ಇಳಿಯುತ್ತಾರೆ. ಎಲ್ಲಾರೂ ಅವರನ್ನ ಸುತ್ತುವರಿಯುತ್ತಾರೆ)**

**ಎಲ್ಲಾರೂ** : - ಯಾರೂ? ಕಿಶು ಭಯ್ಯಾ? ಮನು ಭಯ್ಯಾ?

**ಗೌರಿ** : - ಕಿಶೂ ಭಾಯಿ. ಈಗ ಒಂದೆರಡು ವರ್ಷ ಮನೆಯಲ್ಲೇ ಇರುತ್ತಿ ತಾನೇ. ಶರೀರ ನೋಡು ಒಣಗಿ ಕಡ್ಡಿಯಂತಾಗಿದೆ.

**ಕಿಶೋರ್** : - ಸಂಸಾರ ನಡೆಸಿಕೊಂಡು ಹೋಗ ಬೇಕಲ್ಲ.

**ಮನು** : - **(ತುಲಸಿಯನ್ನು ಕುರಿತು)**ಸರಿಯಾದ ಜತೆ ಸಿಕ್ಕರೆ ನೀನು ಮುಂಬೈಗೆ ಹೊರಟು ಹೋಗು.

**ಕಿಶೋರ್** : - ಹೌದು. ಅವನ ಯಜಮಾನ ಒಂದು ನಿಮಿಷಾನೂ ಬಿಡುವು ಕೊಡಲ್ಲ.

**(ಎಲ್ಲಾರೂ ಸ್ಥಿತಿಗತಿ ವಿಚಾರಿಸುತ್ತಾರೆ, ಗಲಾಟೆಯಲ್ಲಿ ಏನೂ ಗೊತ್ತಾಗುವುದಿಲ್ಲ)**

**ಲಾಲಿಯಾ** . - ಲೋ ಮೋಹನ. ಕಿಶೂ ಭಯ್ಯಾ ಊರಿಗೆ ಹೋಗಿದ್ದಾನೆ. ನೀನು ಅವನ ಕೋಣೆಯಲ್ಲಿ ಮಲಗಿಕೋ.

**(ಇಬ್ಬರು ಕಾಲೇಜು ಯುವಕರು ಮಾತನಾಡುತ್ತ ಮೇಲಿಂದ ಕೆಳಗಿಳಿದು ಬರುತ್ತಾರೆ)**

**ಮೋಹನ್** : - **(ದೂರ ಸರಿದು)** ಯಾಕೆ?

**ಲಾಲಿಯಾ** : - ಗೋಕುಲ್ ಭಾಯಿಯ ... ಅರೇ ರಣುನ ಹೆಂಡತಿ ಬಂದಿದ್ದಾಳೆ. ನಿನಗೆ ಗೊತ್ತಿಲ್ಲವಾ?

**ಮೋಹನ್** : - ಹಾಗಾದರೆ ನೀನು ಎಲ್ಲಿಗೆ ಹೋಗ್ತೀಯಾ?

**ಲಾಲಿಯಾ** : - ನಾನು ಇಲ್ಲೇ ಚೌಬಾರಾದಲ್ಲಿ ಇರುತ್ತೇನೆ.

**(ಕಾಲೇಜು ಯುವಕರು ಮಕ್ಕಳ ಮಧ್ಯೆ ದಾರಿ ಮಾಡಿಕೊಂಡು ಬರುತ್ತಾರೆ)**

**ಮೊದಲನೇ ಕಾಲೇಜು ಯುವಕ** : - ಈ ಮಹಡಿಯಲ್ಲಿ ನಮ್ಮ ಜನ ಜೀವನದ ಮಾರ್ದನಿ ಕೇಳಿ ಬರುತ್ತಿದೆ.

**ಎರಡನೆಯವನು** : - ಹೇಗೇ?

**ಮೊದಲನೆಯವನು** : - **(ಬೆರಳು ತೋರಿಸಿ)**ಈ ಮಕ್ಕಳಿಂದ.

**ಎರಡನೆಯವನು** : - ಮಕ್ಕಳಂತೂ ಓಬಿರಾಯನ ಕಾಲದಿಂದಲೂ ತಾಯಿತಂದೆಯರ ಕಾಮ ತೃಷೆಯ ಮಾರ್ದನಿ ಇದ್ದ ಹಾಗೆ ಹೌದೋ. ಅಲ್ವೋ?

**(ದಾರಿ ಮಾಡಿಕೊಂಡು ಇಳಿಯುತ್ತಾರೆ)**

**ಮೋಹನ್** : - **(ಮೊದಲ ಜಾಗಕ್ಕೆ ಬಂದು, ಕಾಲೇಜ್ ಯುವಕನಂತೆ)** ಹೇಯ್. ಗಿಟ್

ಬಿಟ್ ನಾಲ್ಕು ಕಣ್ಣು !

**ಲಾಲಿಯಾ** : - ಹೋಗಲಿ ಬಿಡೋ. ಏನ್ಹೇಳ್ತಾ ಇದ್ದಿ ನೀನು. ಹಾ, ಮಲಗೋದು.

**ಮೋಹನ್** : - ಹಾಂ, ನಾನು ಏನು ಹೇಳ್ತಾ ಇದ್ದೆ ಅಂದ್ರೆ, ಅದೇ ನಿಮ್ಮಪ್ಪ ದಿನಾ ಚಳೀಲಿ ಚೌಬಾರದಲ್ಲಿ ಮಲಗುತ್ತಾರೆ. ಚಳಿ ಆಗೋದಿಲ್ವಾ ಅವರಿಗೆ? ಗೋಕುಲ್ ಕಕ್ಕ ಇನ್ನೊಂದು ಕೋಣೆ ಯಾಕೆ ತೆಗೆದು ಕೊಳ್ಳಬಾರದು.

**ಲಾಲಿಯಾ** : - ಬಡ್ಡೀ ಮಗ ಆ ಸೇಠ್ ಕೊಡೋ ಸಂಬಳವಾದ್ರು ಎಷ್ಟು?

**ಮೋಹನ್** : - ಗೋಕುಲ್ ಕಕ್ಕ ಮಹಾ ಜಿಪುಣ, ತನಗಾದ್ರೆ ಎಲ್ಲಾ ಬೇಕು.

**ಲಾಲಿಯಾ** : - ನೀನು ಹೇಳೋದು ಸರಿ ಅನ್ನು.

**ಮೋಹನ್** : - ಹೌದು, ಕಾರಣ ಇಲ್ದೆ ನಮ್ಮ ತಂದೆ ಯಾವಾಗಲಾದ್ರೂ ಹೀಗೆ ಮಾಡ್ತಾರಾ?

**(ಹಳ್ಳಿಯಲ್ಲಿ ಗದ್ದಲ)**

**ಕಿಲೀ** : - ಇದಕ್ಕಿಂತ ಮುಂಬೈ ಮೇಲು. ಈ ರತ್ತೆ ಚಾಕರಿ.

**ಕಿಶೋರ್** : - ಹಾಗಾದ್ರೆ ಮನೆಗೆ ಬಾ ಅಂತ ಅಷ್ಟು ಸಲ ಪತ್ರ ಬರೆಸಿದೆ. ಥೂ ಹೆಂಗಸರು ಹುಟ್ಟು ಮುಂಡೆ ಜಾತಿ.

**ಲಾಲಿಯಾ** : - ( **ದೂರದಿಂದ**) ಯಾರು ? ನಾನ? ಪತ್ರ ಬರಿಬೇಕೇನು?

**(ಒಂದು ತುಂಡು ಕಾಗದ ತೆಗೆದುಕೊಂಡು ಲಾಲಿಯಾ ಪೋಸ್ಟ್ ಮ್ಯಾನ್ ಆಗಿ ಬರುತ್ತಾನೆ )**

**ಲಲೀ** : - ಯಾರದು ಪತ್ರ?

**ಕಿಶೋರ್** : - ನನ್ನದು. (**ಓದುತ್ತಾನೆ**)ಕೆಟ್ಟ ಸಮಾಚಾರ, ಸ್ನಾನದ ಸಮಾಚಾರ, ಪತ್ರ ಬರುತ್ತಲೇ ಬರದೇ ಇದ್ರೆ ಬೇರೆ ಗುಮಾಸ್ತನ್ನ ಇಟ್ಟುಕೋತೀನಿ. (**ಕೀಲಿಯೊಡನೆ**) ಈಗ ನೀನು ಚಹಾ ಮಾಡು.

**ಲಲೀ** : - ಅಂದ್ರೆ ನೀನು ಮುಂಬೈಗೆ ಹೋಗ್ತೀಯೇನು ?

**ಕಿಲೀ** : - (**ಸಪ್ಪೆಯಾಗಿ**) ಎಲ್ಲಾ ಹೋಗ್ತೀವಿ.

**ಕಿಶೋರ್** : - ಮುಂಬೈ ಮತ್ತು ಹಳ್ಳಿ ಈ ಎರಡೂ ಮನೆಯ ಖರ್ಚು ನನ್ನ ಕೈಲಿ ಆಗೋಲ್ಲ.

**(ರಘು ಪೂಂ, ಪೂಂ, ಎನ್ನುತ್ತಾನೆ. ಅವನ ಸೊಂಟ ಬಳಸಿದ ಕಿಲೀ ಮತ್ತು ಕಿಶೋರ್ ಬೊಂಬಾಯಿಗೆ ಹೋಗುತ್ತಾರೆ)**

**ಲಾಲಿಯಾ** : - ಸೋಮವಾರಕ್ಕೆ ಮೊದಲೇ ಬಂದಿದ್ದು ಒಳ್ಳೆಯದಾಯಿತು.

**ಮೋಹನ್** : - ಈ ನೌಕರಿಯಿಂದಲೇ ಅಲ್ವ ಗೋಕುಲ್ ಕಕ್ಕ ಮಜಾ ಮಾಡ್ತಾ ಇರೋದು.

**ರಘು** : - ನೀನು ತುಂಬಾ ಆಶೆಬುರುಕ, ಎಂಥಾ ಒಳ್ಳೆ ನೌಕರಿ, ಆದ್ರೆ ಒಳ್ಳೆ ಮನೆ ಮಾಡಕ್ಕಾಗೊಲ್ವ? ಹೇ, ಮೋಹನ್, ಲಾಲಿಯಾ ಅವರಪ್ಪನ ಹೆಸರೇನು? ಬಾಯಿಯಲ್ಲೇ ಇದೆ, ಪಾಪ ಚೌಬಾರದಲ್ಲೇ ಬಿದ್ದಿರ್ತಾಳೆ.

**ಕಿಲೀ** : - (**ಕಟಾಕ್ಷ ಬೀರಿ**)ಇವರು ಎರಡು ಸಲ ಮುಂಬೈಗೆ ಬಂದ್ರು, ಯಾರಾದ್ರು ನಡಿರೀ ನಾಟಕ ತೋರಿಸ್ತೀನಿ ಅಂತ ಹೇಳದ್ರ?

**ರಘು** : - ನಿಜ, ನಿಜ.

**ಲಲೀ** : - ನನ್ನ ಕರ್ಕೊಂಡು ಹೋಗ್ತೀಯಾ?

**(ದೇಶ ಮತ್ತು ಮುಂಬೈನ ನಾಟಕದ ಹೆಸರು ಕೇಳಿ ಒಟ್ಟುಗೂಡುತ್ತಾರೆ)**

**ಕಿಶೋರ** : - ನಡಿ. ಈಗ ಎಷ್ಟು ಸಮಯ ಇದೆ ಅಂತಿದ್ದೀಯಾ? ಆಟ ಶುರು ಆದಮೇಲೆ ನಡಿತಿಯೇನು?

**ಕಿಲೀ** : - ಅಯ್ಯೋ. ಬಂದೇ ಅಂದ್ರೇ .. ಸ್ವಲ್ಪ ಮಗೂನ ಬಿಟ್ಟು ಬರ್ತೀನಿ. **(ಹೋಗುತ್ತಾಳೆ)**

**ಲಲೀ** : - ನಮ್ಮನ್ನು ಕರೆದುಕೊಂಡು ಹೋಗು. ಅಪ್ಪ ಅಮ್ಮನ್ನೂ ಕರೆದುಕೊಂಡು ಹೋಗಲಿಲ್ಲ.

**ಕಿಶೋರ** : - ಅಪ್ಪ, ಅಮ್ಮ ನಮ್ಮನ್ನ ತಾನೆ ಎಲ್ಲಿ ಕರೆದುಕೊಂಡು ಹೋದ್ರು?

**ಲಲೀ** : - ನೋಡಿದೆಯಾ ಮತ್ತೆ ...... ನೀವು ಮಾತ್ರ .....

**ಕಿಲೀ** : - ನಡಿ.

**ಕಿಶೋರ** : - **(ಲಲೀ ಅವನ ಕೈ ಹಿಡಿಯುತ್ತಾಳೆ)** ನಮ್ಮ ಹಾಗೆ ದೊಡ್ಡವಳಾದಾಗ ನೀನೂನೂ ..............

**(ಮೆಟ್ಟಿಲು ಇಳಿಯಲು ತೊಡಗುತ್ತಾರೆ. ತಕ್ಷಣ ಕೈ ತೆಗೆಯುತ್ತಾರೆ. ಗಂಡಸು ಮತ್ತು ಹೆಂಗಸಿನ ಪ್ರವೇಶ)**

**ಗಂಡಸು** : - **(ರೇಗಿ)** ಮುಂಡೆವಾ. ನಮಗೆ ಆಟದ ಸಮಯ ತಪ್ಪೋ ಹಾಗೆ ಮಾಡಿದ್ದಲ್ಲದೆ ಇಲ್ಲಿ ಅಣಕ ಮಾಡ್ತಾ ಇದ್ದೀರಾ?

**(ಹೊಡೆಯುತ್ತಾನೆ, ಕಿಶೋರ್ ಅಳುತ್ತಾನೆ. ಎಲ್ಲಾರೂ ಸ್ತಬ್ಧರಾಗಿ ನಿಲ್ಲುತ್ತಾರೆ. ಹೆಂಗಸಿನ ಧ್ವನಿ ಕೇಳಿ ಬರುತ್ತದೆ)**

**ಹೆಂಗಸು** : - ತಗೊಳ್ಳಿ ಲಲೀ. ಚೀಸ್ ತೆಗೆದುಕೋ.

**(ತೆರೆ)**

## ಪಾತ್ರವರ್ಗ

ಲಾಧೋ

ಆಮಥಾ

ಸುಖರಾಮ ದಾದಾ

ದೀವಾಲೀ

ರೂಪೀ

ಫೂಲೀ

**[ಸಾಯಂಕಾಲದ ಸಮಯ. ಚಮ್ಮಾರ ಪಾಳ್ಯದಲ್ಲಿ ಶಾಂತ ವಾತಾವರಣ. ಮನೆಯ ವರಾಂಡ, ಪಕ್ಕದ ಕೋಣೆಯಲ್ಲಿ ಲಾಧೋ ಮೋಚ ಕತ್ತಲೆಯಲ್ಲಿ ಕುಳಿತು ಭಜನೆಯೊಂದನ್ನು ಗುಣಗುಟ್ಟುತ್ತಿದ್ದಾನೆ]**

**ಲಾಧೋ : -** ರೇ ಕಾಯಾ, ರೇ ಹಂಸಾ, ಡೋಲನಾ ಲಗಾ ಹೈ.
ಉಡ್ ಗಯಾ ಹಂಸ್ ಪಿಂಜರ ಪಡಾಹುವಾ ಹೈ
[ನನ್ನ ಹಂಸ ಪಕ್ಷಿ ಚಿಕ್ಕದು, ಪಂಜರ ಹಳೆಯದಾಗಿ
ಬಿಟ್ಟರೆ ಮೀರಾ ಬಾಯಿ ಹೇಳುತ್ತಾಳೆ, ಪ್ರಭು .........]

**(ಸುಖರಾಮ ದಾಧಾ ಬರುತ್ತಾನೆ)**

**ದಾದಾ:-** ಯಾರು? ಲಾಧಾನ?

**ಲಾಧೋ :** - ಹೌದು ದಾದಾ, ನಾನೇ. ಸುಖರಾಮ ದಾದಾ ತಾನೆ. ನಮ್ಮ ಪುಣ್ಯ. ಈ ಕಡೆ ಹೇಗೆ ಬಂದಿರಿ?

**ದಾದಾ :** - **(ಮೆಟ್ಟಿಲು ಮೇಲೆ ಕೂತು)** ಕೆಲ್ಸ ಇಲ್ಲದೆ ಯಾರಾದರೂ ಬರುತ್ತಾರೇನು? ಸ್ವಲ್ಪ ಮೆಟ್ಟುಗಳಿಗೆ ಹೊಲಿಗೆ ಹಾಕಿಸಿಕೊಂಡು ಹೋಗೋಣಾಂತ ಬಂದೆ.

**ಲಾಧೋ :** - ಕೊಡಿ ದಾದಾ. ಅದೆಷ್ಟೊತ್ತು. ಈಗಲೇ ಹೊಲಿದು ಕೊಡ್ತೀನೆ.

**ದಾದಾ :** - **(ಮೆಟ್ಟುಗಳನ್ನು ಕೊಡುತ್ತಾ)** ತಗೋ. ಹೊಲಿಗೆ ಸ್ವಲ್ಪ ಭದ್ರವಾಗಿರಲಿ ಮತ್ತೆ ಅದೇ ಜಾಗದಲ್ಲಿ ಹರಿದಿದೆ ನೋಡು.

**ಲಾಧೋ :** - ನೀವೇನೂ ಚಿಂತೆ ಮಾಡ್ಬೇಡಿ. ಈ ಸಲ ಇನ್ನೂ ಭದ್ರವಾಗಿ ಹೊಲೀತೀನಿ. **(ತೆಗೆದುಕೊಳ್ಳುತ್ತಾ)** ಓಹೋ, ಈ ಜೊತೇನಾ! ನಾನೇ ಹೊಲಿದು ಕೊಟ್ಟಿದ್ದು. ಇಂದು ನಾಳೆ ಅಂತ ಹತ್ತು ವರ್ಷ ಆಗೋಯ್ತು. ಎಷ್ಟು ಚಳಿ, ಗಾಳಿ, ಮಳೆಗಳು ಕಳೆದು ಹೋದವು.

**ದಾದಾ :** - ಇನ್ನೂ ಹತ್ತು ವರ್ಷ ಬರುತ್ತೆ. **(ನಗುತ್ತಾ)** ಸಾಯೋವಾಗ ಹದಿಮೂರನೇ ದಿನ ಬ್ರಾಹ್ಮಣರಿಗೆ ದಾನ ಮಾಡಿ ಅಂತ ಹೇಳ್ತೀನೆ.

**ಲಾಧೋ :** - ಹಳೇ ಕಾಲದ ಜನಕ್ಕೆ ಸಾಮಾನಿನ ಬೆಲೆ ಗೊತ್ತಾಗೋದು. ಈಗಿನ ಕಾಲದ ಜನಕ್ಕೆ ಅಲ್ಲ. ಸ್ವಲ್ಪ ಹರೀತು ಅಂದ್ರೆ ಆ ಕಡೆ ಬಿಸಾಕಿ ಬಿಡ್ತಾರೆ.

**ದಾದಾ :** - ಅವರೇ ಪಶ್ಚಾತ್ತಾಪ ಪಡುತ್ತಾರೆ ಬಿಡು. ಸ್ವಲ್ಪ ಬೇಗ ಕೊಡು. ನಾನಿನ್ನೂ ಊಟ ಮಾಡಬೇಕು.

**ಲಾಧೋ :** - ಈಗೋ ಮಾಡಿದೆ. **(ಹೆಂಡತಿಯನ್ನು ಕೂಗಿ)** ಸ್ವಲ್ಪ ಲಾಟೀನು ತೆಗೆದುಕೊಂಡು ಬಾ ಇಲ್ಲಿ.

**ರುಖೀ :** - **(ಒಳಗಿನಿಂದ)** ಲಾಟೀನು. ನಿನ್ನ ಪ್ರೀತಿಯ ಮಗ ಇಟ್ಕೊಂಡು ಓದ್ತಾ ಇದ್ದಾನೆ.

**ಲಾಧೋ :** - ಹಾಗಾದರೆ ಹಣತೆ ತೆಗೆದು ಕೊಂಡು ಬಾ.

**ರೂಖೀ :** - ಅಡಿಗೆ ಮನೆಯಲ್ಲಿ ನಾನೇನು ಕಣ್ಣು ಕುಕ್ಕಿಕೊಳ್ಳಲಾ. ನಿನ್ನ ಪ್ರೀತಿಯ ಮಗನ ಹೆಂಡತಿಗೆ ರೊಟ್ಟಿ ಬೇಕಲ್ಲ ತಿನ್ನೋದಿಕ್ಕೆ.

**ಲಾಧೋ** : - ಇಲ್ಲಿ ಗಿರಾಕಿಗೆ ಹೊತ್ತಾಗ್ತಾ ಇದೆ.

**ರೂಖೀ** : - ನಾಳೆ ಬೆಳಗ್ಗೆ ಬಾ ಅಂತ ಹೇಳು.

**ಲಾಧೋ** : - ದಾದಾ ಬಂದಿದ್ದಾರೆ.

**ದಾದಾ** : - ಹೌದಮ್ಮ. ಸ್ವಲ್ಪ ಹೊಲಿಗೆ ಹಾಕಿಸಿಕೊಂಡು ಹೋಗೋಣಾಂತ ಬಂದೆ.

**(ತಲೆಯ ಮೇಲೆ ಸೆರಗು ಹಾಕಿಕೊಂಡು ರೂಖೀ ಹಣತೆ ತರುತ್ತಾಳೆ)**

**ರೂಖೀ** :- ನನಗೆ ಗೊತ್ತಾಗಲಿಲ್ಲ ದಾದಾ ನೀವೂ ಅಂತ. ನಿನ್ನ ಓದುಗಾರ ಮಗ 'ಸದೇವಂತ ಸವಂಡಗಾ' ಕಥೆ ಓದ್ತಾ ಇದ್ದಾನೆ. ಅವನ ಹೆಂಡತಿ ಹಾಯಾಗಿ ಮಲಗಿದ್ದಾಳೆ. ನಾನೇನಾದ್ರು ಹೇಳಿದ್ರೆ ಹೀ ಹೀ ಅಂತಾಳೆ.

**ಲಾಧೋ** : - **(ದಾರ ಪೋಣಿಸುತ್ತಾ)** ಸೂಜಿಯ ತೂತಿನಲ್ಲಿ ದಾರ ಪೋಣಿಸುವಾಗ ಕೈ ನಡುಗುತ್ತೆ ದಾದಾ.

**ರೂಖೀ** : - ಇಲ್ಲಿ ಕೊಡು ಪೋಣಿಸಿ ಕೊಡುತ್ತೇನೆ. **(ಪೋಣಿಸಿ ಕೊಡುವಳು)**

**ಲಾಧೋ** : - ಕಣ್ಣಿನ ಬೆಳಕು ಕಡಿಮೆ ಆಗೋಯ್ತು. ಸರಿಯಾಗಿ ಕಾಣುವುದಿಲ್ಲ ದಾದಾ.

**ದಾದಾ** : - ತುಂಬಾ ಕೆಟ್ಟದ್ದು. ಮುದಿ ವಯಸ್ಸಿನಲ್ಲಿ ಹೀಗೆ ಆದರೆ ತುಂಬಾ ದುಃಖವಾಗುತ್ತದೆ. ಅದು ಸರಿ. ನನಗೆ 15 ದಿನಕ್ಕೊಮ್ಮೆ ಹೊಲಿಗೆ ಯಾರು ಹಾಕಿಕೊಡುತ್ತಾರೆ. ನೀನಿಲ್ಲದಿದ್ದರೆ ನನಗೆ ಬೇಜಾರು ಆಗುತ್ತದೆ.

**ಲಾಧೋ** : - ನಿನ್ನಂತವರಿಗೆ ಹಾಗೆನ್ನಿಸುತ್ತೆ. ಮಿಕ್ಕವರಿಗೆ ನಾನು ಹರಿದ ಚಪ್ಪಲಿ ಇದ್ದಂತೆ. ಅಮಥಾ: ಇದನ್ನೇ ಯೋಚಿಸೋದು. ಅಪ್ಪ ಯಾವಾಗ ಸಾಯ್ತಾನೆ. ನಾವು ಯಾವಾಗ ಇಷ್ಟ ಬಂದಂತೆ ಇರಬಹುದು ಅಂತ.

**ರೂಖೀ** : - ಹೂಂ. ಇರ್ತಾರೆ. ನಾನಿರೋದಿಲ್ಲವ?

**ಲಾಧೋ** : - ನಿನ್ನ ಮೇಲೆ ಭರವಸೆ ಇದೆ. ಆದ್ರೆ ನನ್ನ ಮೇಲೆ. ನನ್ನ ಶರೀರದ ಮೇಲೆ ಭರವಸೆ ಇಲ್ವಾ ನಿನಗೆ?

**ರೂಖೀ** : - ಆ ಚಿಂತೆ ಬಿಡು. ಈ ಶರೀರಕ್ಕೆ ಏನೂ ಆಗೋಲ್ಲ.

**ಲಾಧೋ** : - ಹಾಗಾದರೆ ನಮ್ಮ ಪುಣ್ಯ. **(ನಿಟ್ಟುಸಿರು)** ಹಗಲೂ. ರಾತ್ರಿ ದುಡಿದು ಯೌವನವೆಲ್ಲಾ ಕಳೆದು ಬಿಟ್ಟೆ. ಕಣ್ಣು ಹೋದರೂ ಪರವಾಯಿಲ್ಲ ಮಗನ ಕಣ್ಣಿನಿಂದಲೇ ನೋಡ್ತೀನಿ ಅಂತಿದ್ದೆ. ಯಾರ ಆಸೆ ತಾನೆ ಸರಿಯಾಗಿ ನೆರವೇರಿದೆ ಅನ್ನು.

**ರೂಖೀ** :- ಮಗನ ಕಣ್ಣು ಎಲ್ಲೋ ಹೋಗಿದೆ. ಹೆಂಡತಿ ಕಣ್ಣಿಂದಾಲೇ ನೋಡ್ತಾ ಇದ್ದಾನೆ. ಅವನೇ ಕುರುಡಾಗಿರುವುದು. ಅವನಿಂದ ನಿನ್ನ ಕಲ್ಸ ಹೇಗೆ ಸಾಗುತ್ತೆ.

**ಲಾಧೋ** : - **(ದುಃಖದಿಂದ)** ನಮ್ಮ ಮಗನನ್ನು ಕುರುಡ ಎನ್ನಬೇಡ.

**ರೂಖೀ** : - ಅವಳು ಹೇಳ್ದಂತೆ ನಡಿತಾವೇ. ಅವಳಿಗೇನು ಕಡಿಮೆ ಶೋಕಿ ಅಂತಿಯಾ?

**ಲಾಧೋ** : - ವಯಸ್ಸಿಗೆ ಬಂದ ಮಕ್ಕಳು. ಈಗ ಎಷ್ಟು ಸುಖ ಪಟ್ರೂ ಅಷ್ಟೇ ಒಳ್ಳೆದು. ನಿನಗೆ ತಿಳಿಯೋದಿಲ್ಲ ಬಿಡು.

**ರೂಖೀ** :- ನನ್ನ ಅದೃಷ್ಟ ಮದುವೆ ದಿನಾನೇ ಹಾಳಾಯ್ತು. ಸುಖ ಪಡೋ ದಿನಗಳಾದರೂ ಎಲ್ಲಿ ಬಂತು. ತೌರು ಮನೇಲೂ ಇಲ್ಲ ಅತ್ತೆ ಮನೇಲೂ ಇಲ್ಲ. ನನ್ನ ಅದೃಷ್ಟ ಹಾಗಿದೆ.

**ಲಾಧೋ** : - ಇರಬಹುದು. ದೇವರ ಇಷ್ಟ. ಈಗ ಶಾಂತಿ ಇದೆಯಲ್ಲ.

**ರೂಪೀ** : - ಹೌದು. ಇದೆ ಶಾಂತಿ. ನಿನ್ನ ಮುದ್ದು ಮಗನ ಹೆಂಡತಿ ಬಂದಾಗಿನಿಂದ ಎಲ್ಲಾ ವಸ್ತುಗಳಿಗೂ ರೆಕ್ಕೆ ಬಂದಹಾಗಿದೆ. ಎಲ್ಲಾ ಸಾಮಾನುಗಳು ಮಂಗಮಾಯ. ನಿನಗೇನು ಗೊತ್ತಾಗ್ತಾ ಇಲ್ವ?

**ಲಾಧೋ** : - ಸೊಸೆಯನ್ನು ಹೀಗೆಲ್ಲಾ ನಿಂದಿಸಬಾರದು. ಎಷ್ಟೆ ಆದ್ರೂ ಅವಳು ನಮ್ಮ ಮನೆಯ ಲಕ್ಷ್ಮಿ.

**ರೂಪೀ** : - ಏನಂದೆ? ಮಗನ ಹೆಂಡತೀನ ಎಲ್ಲಾರ ಮುಂದೆ ಹೊಗಳ್ತೀಯಾ? ನಾಚ್ಕೆ ಆಗೋಲ್ವ? ಇಷ್ಟು ವಯಸ್ಸಾಯಿತು?

**ಲಾಧೋ** : - **(ಮೆತ್ತಗೆ)** ಇಲ್ಲ .......ನಾನು.

**ರೂಪೀ** : - ನಿನ್ನ ದುರಭ್ಯಾಸ ಇದು. ನನಗೆ ಗೊತ್ತು.

**(ಲಾಧೋ ಸುಮ್ಮನಾಗುತ್ತಾನೆ)**

**ದಾದಾ** : - ಏನು ಸೊಸೆ ಚೆನ್ನಾಗಿಲ್ವ?

**ರೂಪೀ** : - ದಡ್ಡಿ ಎಂದ್ರೆ ದಡ್ಡಿ. ಯಾವಾಗಲೂ ಗಂಡನಿಗೆ ಅಂಟಿಕೊಂಡಿರ್ತಾಳೆ. ನಾಲ್ಕು ಜನದ ಮಧ್ಯೆ ಹೇಗೆ ಬದುಕಬೇಕೆಂದು ಗೊತ್ತಿಲ್ಲ. ಅಡಿಗೆ ಬರೋಲ್ಲ. ನಾಚಿಕೆ, ಮಾನ ಇಲ್ಲ. ಯಾವಾಗಲೂ ಮುಖ ಊದಿಸಿಕೊಂಡಿರ್ತಾಳೆ. ಮೈ ಬಗ್ಗಲ್ಲ. ಏನಾದ್ರೂ ಹೇಳದ್ರೆ ಯಾರೋ ಸತ್ತವರ ಹಾಗೆ ಅಳ್ತಾಳೆ.

**ದಾದಾ** : - ಅಯ್ಯೋ, ರಾಮ ಇದು ದುಃಖದ ಸಂಗತಿ.

**ರೂಪೀ** : - ಅನುಭವಿಸುವ ನನಗೆ ಗೊತ್ತು. ಯಾರಿಗೂ ಹೇಳುವ ಹಂಗಿಲ್ಲ. ಹೀಗಿದೆ ಪರಿಸ್ಥಿತಿ ದಾದಾ. **(ನಿಟ್ಟುಸಿರು ಬಿಡುತ್ತಾಳೆ)**

**(ಲಾಧೋ ಮಾತು ಬದಲಾಯಿಸುತ್ತಾನೆ)**

**ಲಾಧೋ** : - ದಾದಾ, ಮೆಟ್ಟುಗಳು ಒಣಗಿವೆ ನೋಡು.

**ದಾದಾ** : - ಹಾಗಾದರೆ ಒಂದು ಕೆಲ್ಸ ಮಾಡು. ಇವಕ್ಕೆ ಎಣ್ಣೆ ಹಚ್ಚಿಡು. ನಾಳೆ ಬೆಳಗ್ಗೆ ಬಂದು ತೆಗೆದುಕೊಂಡು ಹೋಗುತ್ತೇನೆ.

**ಲಾಧೋ** : - ಹಾಗೇ ಮಾಡಿ ದಾದಾ.

**ದಾದಾ** : - ತಗೋ ಕಾಸು.

**ಲಾಧೋ** : - ಬೇಡ ದಾದಾ, ನಿಮ್ಮ ಹತ್ತಿರ ಕಾಸು ಬೇಡ.

**ದಾದಾ** : - ಇರಲಿ ತಗೋಳ್ಳೋ.

**ಲಾಧೋ** : - ಇಲ್ಲ ದಾದ್ಾ ಬ್ರಾಹ್ಮಣರಿಗೆ ಕೊಡೋದು ಬಿಟ್ಟು ಈಗ ತಗೋ ಅಂತಿರಲ್ಲ.

**ದಾದಾ** : - ಹಾಗಾದರೆ ಸರಿ. ರಾಮ್, ರಾಮ್.

**ಲಾಧೋ** : - ರಾಮ್, ರಾಮ್ ದಾದಾ

**(ದಾದಾ ಹೋಗುತ್ತಾರೆ. ಲಾಧೋ ಮೆಟ್ಟುಗಳನ್ನು ನೀರಿನ ಪಾತ್ರೆಯಲ್ಲಿ ಹಾಕುತ್ತಾನೆ)**

ಶ್ರೀ ರಾಮ, ಹೇ ಅಂತರ್ಯಾಮಿ, ನಿನ್ನದೆ ಭರವಸೆ ನನಗೆ

**ರೂಪೀ** : - **(ಮೆಲ್ಲಗೆ)** ಇಲ್ನೋಡು. ಒಂದು ಮಾತು ಕೇಳ್ಬೇಕು

**ಲಾಧೋ** : - ಓಹೋ .......

**ರೂಪೀ** : - ಓಹೋ ....... ಏನು?

**ಲಾಧೋ** : - ಇಷ್ಟು ಸರಸವಾಗಿ ಮಾತನಾಡದ್ರೆ, ಆತ್ಮ ತಪ್ತವಾಗುತ್ತೆ ನೋಡು. ಯೆ ರೇ ಕಾಯಾ ಮೇರೆ ಹಂಸಾ .......

**ರೂಖೀ** : - ಇಲ್ಲಿ ಕೇಳು ಅಂದ್ರೇ. ಯಾವುದೋ ರಾಗ ತೆಗಿದಿಯಲ್ಲಾ.

**ಲಾಧೋ** : - ಹೇಳು. ಏನಪ್ಪಣೆ?

**ರೂಖೀ** : - ಅವನು ಹಾಳಾದೋನು. ಕಾಲೆ ಖೋನ್ ..... ಸಿಪಾಯಿ.

**ಲಾಧೋ** : - ಹಾ. ಅವನು.

**ರೂಖೀ** : - ಅಮಥಾನಿಗೆ ಎರಡು ಟಿಕೇಟ್ ಕೊಟ್ಟು ಹೋದ.

**ಲಾಧೋ** : - ಸರಿ. ನಡಿ ಹೋಗೋಣವಂತೆ ಈಗ.

**ರೂಖೀ** : - ಎಲ್ಲಿಗೆ ಹೋಗೋದು? ನಾ ಹೇಳಿದ್ದು ಅರ್ಥವಾಯ್ತು? ನನ್ನ ಕರ್ಮ.

**ಲಾಧೋ** : - ಅಮರಾಪುರಿಗೆ ತಾನೆ. ಅದು ಬಿಟ್ರೆ ಇನ್ನಾವದಕ್ಕೆ ಟಿಕೇಟ್?

**ರೂಖೀ** : - ನನ್ನ ಅದೃಷ್ಟಕ್ಕೆ ನೀನು ಸಿಕ್ಕಿದಿಯಾ. ಎಲ್ಲಾದಕ್ಕೂ ನನ್ನೇ ಮುಂದು ಮಾಡೋದು. ಆದ್ರೆ ನಾನೂನು ನಿನ್ನ ....

**ಲಾಧೋ** : - **(ನಗುತ್ತಾ)** ಮುಂದೆ ಮಾಡ್ತೀನಿ ಅಂತ್ಲಾ. ಹೂ. ಸರೀನೇ. ನಾನಂತು ಗಂಟು ಕಟ್ಟೇ ಕೂತಿದ್ದೀನಿ.

**ರೂಖೀ** : - **(ಬಾಯಿ ಮೇಲೆ ಬೆರಳಿಟ್ಟು)** ನನ್ನ ಯಾಕೆ ರೇಗಿಸ್ತೀಯಾ ? ಹಾಳಾದ್ದು ನನ್ನ ನಾಲಗೆ ಕತ್ತರಿಸಬೇಕು. ಏನೇನೋ ಅಸಂಬದ್ಧವಾಗಿ ಮಾತನಾಡುತ್ತೆ.

**ಲಾಧೋ** : - ಸರೀನೆ. ಮನಸ್ಸಿನಲ್ಲಿ ಏನೂ ಇಟ್ಕೊ ಬಾರ್ದು. ನಾಲಿಗೆಗೆ ಮೂಳೆ ಇಲ್ಲ.

**ರೂಖೀ** : - ಏನು ಹೇಳ್ತಾ ಇದ್ದೆ ಅಂದ್ರೇ.

**ಲಾಧೋ** : - ಹೂಂ.

**ರೂಖೀ** : - ನೋಡು. ನೀನು ಒಪ್ಪಿದ್ರೇ. ನಾನು ಅಮಥಾನ ಜೊತೆ ಪಿಕ್ಚರ್ ನೋಡೋಕೆ ಹೋಗ್ತೀನಿ.

**ಲಾಧೋ** : - ಅದ್ಸರಿ .... ಅವನು ಹೆಂಡತೀನ ಕರ್ಕೊಂಡು ಹೋಗಲ್ವಾ?

**ರೂಖೀ** : - ಅವನು ಅವಳಿಗೋಸ್ಕರಾನೇ ತಂದಿದ್ದು. ಆದ್ರೆ ಅವಳನ್ನು ಹೋಗಕ್ಕೆ ಬಿಡ್ತೀನಾ? ಇವತ್ತು ಆ ನಾಚ್ಕೆ ಇಲ್ದೋಳನ್ನ ಮನೇಲಿ ಕೂಡಾಕಿ ನಾನು ಹೋಗ್ತೀನಿ.

**ಲಾಧೋ** : - ಈ ವಯಸ್ಸಿನಲ್ಲಿ ನಾವು ಹೋಗೋದು ಸರಿಯಲ್ಲ. ನಾವೇನು ಮಕ್ಳ? ಪಾಪ. ಅವರೇ ಹೋಗಲಿ.

**ರೂಖೀ:- (ಸಿಟ್ಟು)** ಹೋದ್ರೇ ಚರ್ಮ ಸುಲಿದು ಬಿಡ್ತೀನಿ. **(ನಿಂತು)** ಇವತ್ತು ನಾನೇ ಹೋಗ್ಬೇಕು. ಅವಳು ಮನೇನಿರಬೇಕು. ತಿಳೀತಾ?

**ಲಾಧೋ** : - ಇಲ್ಲಿ ಕೇಳು .....

**ರೂಖೀ** : - ಹೊತ್ತಾಯ್ತು ನಂಗೆ. ನಾನಿನ್ನು ಸಿದ್ಧವಾಗಬೇಕು.

**ಲಾಧೋ** : - ಸರಿ. ಹೋಗು. ರಾಮ್. ರಾಮ್ **(ಹಾಡುತ್ತಾನೆ)** ಆತ್ಮ ಚಿಕ್ಕದು. ಶರೀರ ಹಳೆಯದಾಯಿತು.

**(ಅಮಥಾ ಹೊರಗೆ ಬರುತ್ತಾನೆ. ಕೋಪ)**

**ಅಮಥಾ** : - ಅಪ್ಪಾ ..... ನೀವಾದ್ರೂ ಸ್ವಲ್ಪ ಹೇಳಬಾರದೇ. ಅಮ್ಮನಿಗೆ ಒಂದೂ ಅರ್ಥ

ಆಗೋಲ್ಲ. ಜನ ಏನು ಅಂತಾರೆ ಅನ್ನೋದು ಬೇಡ್ವಾ?

**ಲಾಧೋ** : - **(ಜೋರಾಗಿ)** ಹೂಂ. ಯಾಕೆ ಕೆಟ್ಟದ್ದೂ? ಹೆಂಡತೀನ ಕರ್‍ಕೊಂಡು ಹೋದ್ರೆ ನಾಚಿಕೆ ಇಲ್ಲ. ತಾಯೀನ ಕರ್‍ಕೊಂಡು ಹೋದ್ರೆ ನಾಚ್ಕೇನಾ? ಅವಳಿಗೂ ಆಸೆ ಇಲ್ವಾ? **(ಮೆತ್ತಗೆ)** ಕರ್‍ಕೊಂಡು ಹೋಗು. ತಾಪತ್ರಯ ಹರಿಯುತ್ತೆ. ಅವಳು ಹಿಡಿದ ಹಠ ಬಿಡೋಲ್ಲ.

**ಅಮಥಾ** : - ಅಮ್ಮ ಒಳ್ಳೇದು. ಕೆಟ್ಟದ್ದು ಒಂದು ಯೋಚನೆ ಮಾಡಲ್ಲ.

**ಲಾಧೋ** : - ರಾಮ್. ರಾಮ್.

**(ರೂಖೀ ಶೃಂಗಾರ ಮಾಡ್ಕೊಂಡು ಬರುತ್ತಾಳೆ)**

**ರೂಖೀ** : - ಸೊಸೇ ..... ನಿಮ್ಮ ಮಾವನಿಗೆ ಊಟ ಹಾಕಿ ಮಿಕ್ಕಿದೆಲ್ಲಾ ಮುಚ್ಚಿಡು. ಗಮನ ಇರಲಿ. ಯಾವುದನ್ನೂ ತೆಗೆದು ಇಟ್ಟಿಡ್ಬೇಡ. ನಿಮ್ಮಮ್ಮ ಆ ಬೆಕ್ಕು ಎಲ್ಲಾ ತಿಂದು ಬಿಡುತ್ತದೆ.

**ದೀವಾಲಿ** : - **(ತಿರಸ್ಕಾರದಿಂದ)** ನಿಮ್ಮಮ್ಮ ಬೆಕ್ಕು.

**ರೂಖೀ** : - ಏನೇ ನಮ್ಮಮ್ಮನ ಬೈತೀಯಾ? ನಾಲಗೆ ಕತ್ತರಿಸಿ ಬಿಟ್ಟೇನು. ನೋಡ್ತಾ ಅಮಥಾ ಅವಳು ಹೇಳ್ತಾ ಇರೋದು. ಚಪ್ಪಲಿ ತಗೊಂಡು ಅವಳ ಮುಖದ ಮೇಲೆ ಹೊಡಿ.

**ಅಮಥಾ: - (ಬೇಜಾರಿನಿಂದ)** ನೀನು ಬರೋ ಹಾಗಿದ್ದರೆ ಬಾ. ಹೊತ್ತಾಗ್ತಾ ಇದೆ. ಇಲ್ದಿದ್ರೆ ನಾನೊಬ್ಬನೇ ಹೋಗ್ತೀನಿ ನೋಡು.

**ರೂಖೀ** : - **(ಲಾಧೋಗೆ)** ಬಂದೆ. ನೋಡು ಮನೆ ಜೋಪಾನ. ಸೊಸೇನ ಊಟ ಹಾಕು ಅಂತ ಕೇಳು.

**ಲಾಧೋ** : - ಆಯ್ತು. ಹುಷಾರಾಗಿ ಹೋಗು. ಭಗವಂತಾ ನಿನ್ನದೇ ಭರವಸೆ.

**(ಅಮಥಾನ ಹಿಂದೆ ರೂಖೀ ಹೋಗುತ್ತಾಳೆ. ಫೂಲೀ ಚಾಚಿ ಅಂಗಳಕ್ಕೆ ಬಂದು ಕೂಗು ಹಾಕ್ತಾಳೆ)**

**ಫೂಲೀ** : - ದೀವಾಲೀ ಇದ್ದಾಳೇನು?

**ದೀವಾಲಿ** : - ಓ! ಫೂಲೀ ಚಾಚಿನ? ಏನು ಬೇಕಾಗಿತ್ತು?

**ಫೂಲೀ** : - ಸ್ವಲ್ಪ ಹುಳಿ ಮಜ್ಜಿಗೆ ಕೊಡು. ಅತ್ತೇ ಮನೇಲಿಲ್ವಾ?

**ದೀವಾಲಿ** : - ಅವಳು ಹೋದ್ಲು.

**ಫೂಲೀ** : - ಎಲ್ಲಿಗೆ?

**ದೀವಾಲಿ** : - ಸಿನಿಮಾ ನೋಡೋಕೆ.

**ಫೂಲೀ** : - ಹಾ! ಸಿನಿಮಾಗ?

**ದೀವಾಲಿ** : - ಜೊತೆಯಾಗಿ. ಮಗನ ಜೊತೆ .......

**ಫೂಲೀ** : - ಮತ್ತೆ ನೀನು?

**ದೀವಾಲಿ** : - ನಾನು ಮನೇಲಿ. ಇನ್ನೇನ್ಮಾಡ್ಲಿ?

**ಫೂಲೀ** : - ಅರೇ ...... ಈ ವಯಸ್ಸಿನಲ್ಲಿ. ಹಾಳಾದೋಳ್ಗೆ ನಾಚಿಕೆ ಇಲ್ವಾ? ಅಮಥಾ ನಿನ್ನ ಯಾಕೆ ಬಿಟ್ಟು ಹೋದ?

**ದೀವಾಲಿ** : - ಇದ್ದುದ್ದೆ ಎರಡು ಟಿಕೇಟು. ಅವರ್‍ತಾನೆ ಏನು ಮಾಡ್ತಾರೆ? ನಮ್ಮತ್ತೆ ಕಿರಿ ಹೆಂಡತಿ ಹಾಗೆ ಮುಂದೆ ಬಂದ್ಬಿಟ್ಟು. ಕೊಡು ಮಜ್ಜಿಗೆ ತರ್‍ತೀನಿ.

**(ಮಜ್ಜಿಗೆ ತಂದು ಕೊಟ್ಟು ಮತ್ತೆ ಒಳಗೆ ಹೋಗ್ತಾಳೆ)**

**ಲಾಧೋ** : - **(ಬಡ ಬಡಿಸುತ್ತಾ)** ಕಿರೀ ಹೆಂಡ್ತೀನೆ. ಅಲ್ಲ, ವಯಸ್ಸಿನ ಹೆಂಡತಿ ಮನೇಲಿ. ಮುದಿ ಅತ್ತೆ ಸಿನಿಮಾ. ಎಲ್ಲಾ ತದ್ವಿರುದ್ಧ. **(ನಿಶ್ಚಯ)** ಸೊಸೆ, ಮಗು ಸಿದ್ಧಳಾಗಮ್ಮ.

**ದೀವಾಲಿ** : - **(ಹೊರಗೆ ನೋಡುತ್ತಾ)** ಊಟ ತರಲೇ ಅಪ್ಪ.

**ಲಾಧೋ** : - ಊಟ ಬೇಡ ಮಗು. ನೀನು ಎದ್ದು ಬಟ್ಟೆ ಉಡ್ಕೋ.

**ದೀವಾಲಿ** : - ಎಲ್ಲಿಗೆ ಹೋಗ್ಬೇಕು?

**ಲಾಧೋ** : - ಸಿನಿಮಾ ನೋಡೋಣ.

**ದೀವಾಲಿ** : - ಆ ....... ದ್ರೇ

**ಲಾಧೋ** : - ಆದ್ರೇ. ಗಿದ್ರೇ ಅನ್ಬೇಡ. ಹೊತ್ತಾಗುತ್ತೆ. ನಡಿ ಬೇಗ. ಅವಳೊಬ್ಬಳೆ ಅಲ್ಲ ಶೋಕಿ ಮಾಡೋಳು ಅಂತ ಇವತ್ತು ನಿಮ್ಮತ್ತೆಗೆ ತೋರಿಸಬೇಕು. **(ದೀವಾಲಿ ಸಿದ್ಧಳಾಗಿ ಬರುತ್ತಾಳೆ)** ನೀನು ಮುಂದೆ ಹೋಗ್ತಾ ಇರು. ನಾನು ಬೀಗ ಹಾಕಿ ಬರ್‍ತೀನಿ. **(ಬೀಗ ಹಾಕುವನು)** ಬರ್‍ತೀನಿ. ಫೂಲೀ ಬಹೆನ್ ಮನೆಯ ಕಡೆ ಗಮನ ಇರ್‍ಲಿ.

**ಫೂಲೀ** : - ಎಲ್ಲಿಗಪ್ಪ ಹೊರಟೆ ಲಾಧೋ ಬಾಯಿ.

**ಲಾಧೋ** : - ಸೊಸೆಗೆ ಸಿನಿಮಾ ತೋರಿಸೋಣಂತ. ಅವಳ ಅತ್ತೆ ಅವಳ್ನ ಬಿಟ್ಟು ಹೋಗಿದ್ದಾಳೆ.

**ಫೂಲೀ** : - ಹೀಗೆಲ್ಲಾ ಹೋಗ ಬಹುದಾ? ಜನ ಏನಂದಾರು?

**ಲಾಧೋ** : - ಅವೆಲ್ಲಾ ಅವಳಿಗ್ಯಾಕೆ ಬೇಕು. ನಾಚ್ಕೆ ಬಿಟ್ಟೋರಿಗೆ ತಮ್ಮದೆ ನಡತೆ.

**ಫೂಲೀ** : - ಹೀಗೂ ಉಂಟೆ? ನಾಳೆ ಗೊತ್ತಾಗುತ್ತೆ ಅವ್ಳಿಗೆ. ಎಲ್ಲಾರ ಮುಂದೆ ಮಾನಾ ತೆಗೀತಾಳೆ.

**ಲಾಧೋ** : - ಪಾಪ, ಮಗೂಗೇ ಬೇಜಾರಾಗಿದೆ. ಬಿಟ್ಟು ಬರೋಣಾಂತ ಮನಸ್ಸಾಯಿತು. ಸಿನಿಮಾ ಮುಗಿಯುವವರೆಗೂ ಹೊರಗಡೆ ತೂಕಡಿಸ್ತಾ ಇರ್‍ತೀನಿ. ನನಗೆ ಅವೆಲ್ಲಾ ಏನು ಗೊತ್ತಾಗುತ್ತೆ?

**ಫೂಲೀ** : - ಹೌದು. ನೀನು ಅವಳನ್ನು ಕರೆದುಕೊಂಡು ಹೋಗು. ಕರ್‍ಕೊಂಡು ಹೋಗು.

**(ಲಾಧೋ ಬೀಗ ಹಾಕಿ ಹೊರಡುತ್ತಾನೆ. ರಂಗದ ಮೇಲೆ ಕತ್ತಲೆ ಆವರಿಸುತ್ತದೆ. ಮತ್ತೆ ಬೆಳಕು ಬಂದಾಗ ಲಾಧೋ ದಾದಾನ ಚಪ್ಪಲಿ ಹೊಲಿಯುತ್ತಾ ಕೂತಿದ್ದಾನೆ. ಭಜನೆ ಹಾಡುತ್ತಿದ್ದಾನೆ)**

**ಲಾಧೋ** : - ವೈಷ್ಣವ ಜನತೋ ತೇನೇ ಕಹಿಯೇ ಜೇ ಐರ್
ಪರಾಯಿ ಜಾಣೆರೇ ಪರದುಃಖೆ ಉಪಕಾರಕರೇ
ತೋಯೆ ಮನ್ ಅಭಿಮಾನ್ ನ ಜಾಣೇರೇ.

**(ಚಹದ ಬಟ್ಟಲು ಹಿಡಿದು ರೂಖೀ ಬಂದು ಗಂಡನ ಬಳಿ ಇಟ್ಟು, ಕುಕ್ಕರಗಾಲಿನಲ್ಲಿ ಕೂರುತ್ತಾಳೆ. ಮುಖದಲ್ಲಿ ಕೋಪ ಬಂದಿದೆ)**

**ಲಾಧೋ** : - ಓಹೋ! ಈವತ್ತು ನೀನೇ ಚಹಾ ಕೊಡಕ್ಕೆ ಬಂದ್ಯಾ?

**ರೂಖೀ** : - ಮಗನ ಹೆಂಡತೀ ಜೊತೆ ಸಿನಿಮಾಗ ಹೋಗಕ್ಕೆ ನಾಚ್ಕೆ ಆಗಲ್ವಾ? ವಯಸ್ಸಾಗಿದೆ ಅಂತ ಯೋಚನೆ ಬೇಡ್ವಾ?

**ಲಾಧೋ** : - ನೀನು ಚಿಕ್ಕವಳಂತೆ ಹೋದ್ಯಲ್ಲಾ, ನಿನಗೆ ನಾಚ್ಕೆ ಆಗಲ್ವಾ?

**(ರೂಖೀ ಕೋಪದಿಂದ ಹೋಗುತ್ತಾಳೆ. ಅಮಥಾ ಗೆಲುವಿನಿಂದ ಹೊರಗೆ ಬರ್‍ತಾನೆ)**

**ಅಮಥಾ** : - ಕೊಡಪ್ಪಾ, ನಾನು ಹೊಲಿದು ಕೊಡ್ತೀನಿ.

**ಲಾಧೋ** : - **(ಕೊಡ್ತಾನೆ)** ಬಹಳ ದಿನಗಳಾದ ಮೇಲೆ ಮುದಿ ತಂದೆಯ ಮೇಲೆ ಕರುಣೆ ಬಂತಾ?

**ಅಮಥಾ** : - ಒಳ್ಳೇ ಆಟ ಕಟ್ಟಿಟ್ಟೆ ಅಪ್ಪಾ. ನಿನ್ನೇನೆ ಆ ಸಿನಿಮಾ ಕೊನೆ ದಿನ. ಬಹಳ ಕಷ್ಟ ಪಟ್ಟು ಟಿಕೇಟ್ ತಂದ್ರೆ ಅಮ್ಮ ಅಡ್ಡ ಬಂದ್ಳು. ಏನಾದ್ರೂ ಹೇಳಿದ್ರೆ ಅತ್ತು ಕರೆದು ರಂಪಾ ಮಾಡ್ತಾಳೆ.

**ಲಾಧೋ** : - ಏನಪ್ಪ ಮಾಡ್ಲಿ. ಅಳ್ತಿದ್ಳು, ನನ್ನಿಂದ ನೋಡೋಕೆ ಆಗ್ಲಿಲ್ಲ. ಅವಳಿಗೂ ಮನಸ್ಸಿರಲ್ವಾ?

**ಅಮಥಾ** : - ನನಗೆಲ್ಲಾ ಹೇಳಿದ್ಳು. ಒಳ್ಳೇ ಆಟ ಕಟ್ಟಿದ್ರಿ ನೀವು.

**ಲಾಧೋ** : - ನಿಮ್ಮಮ್ಮನಿಗೆ ಬಹಳ ಕೋಪ ಬಂದಿರಬೇಕು.

**ಅಮಥಾ** : - ಬಂದ್ರೆ ಬರ್ಲಿ ಬಿಡು. ಹೊಟ್ಟೆ ಉರಿದುಕೊಂಡು ಬಿಟ್ಳು. ಸಾಲದಕ್ಕೆ ಫೂಲೀ ಬಾಬಿ ಬೇರೆ ಬೆಳಗ್ಗೆ ಚೆನ್ನಾಗಿ ಅಂದು ಬಿಟ್ಳು.

**ಲಾಧೋ** : - ಒಳ್ಳೇದಾಗ್ಲಿ ಅವಳಿಗೆ. ಏನಂದ್ಳು?

**ಅಮಥಾ** : - ಚಿಕ್ಕ ಹೆಂಡತಿ ಥರ ನನ್ನ ಜೊತೆ ಹೋಗೋಕೆ ನಾಚ್ಕೆ ಆಗಲ್ವಾ ಅಂದ್ಳು.

**ಲಾಧೋ** : - ಚೆನ್ನಾಗಿ ಅಂದ್ಳು. ಆಗಬೇಕು ಅವ್ಳಿಗೆ.

**ಅಮಥಾ** : - ಅದೇನೋ ಸರಿ. ನೀವು ಬಾಬಿಯ ಹತ್ತಿರ ಸೊಸೇನ ಒಳಗೆ ಕೂಡಿಸಿ. ನೀವು ಹೊರಗಡೆ ಇರ್ತೀನಿ ಅಂದ್ರಂತೆ.

**ಲಾಧೋ** : - ಹೌದು. ಆ ಮೇಲೆ ಅನ್ನಿಸ್ತು. ಪಾಪ ಚಿಕ್ಕ ಹುಡುಗಿ. ಒಬ್ಬಳ್ಳೆ ಒಳಗೆ ಬಿಟ್ಟಿರೋದು ಹೇಗೆ ಅಂತ.

**ಅಮಥಾ** : - ನೀವು ಮಾಡಿದ್ದು ಸರಿ.

**ಲಾಧೋ** : - ನಿನ್ನಾವಾಗ ನೋಡಿದೆ ನಮ್ಮನ್ನ?

**ಅಮಥಾ** : - ನೀವು ಚಹಾ ಕುಡಿಯುತ್ತಿದ್ದಾಗ.

**ಲಾಧೋ** : - ಚಹಾ ಕುಡಿಯದಿದ್ದರೆ ಹೇಗೆ? ದೊಡ್ಡವರ ಜೊತೆ ಹೋದ್ರೆ ಏನೂ ಸಿಗಲ್ಲ ಅಂತ ಅಂದ್ಕೊಳಲ್ವೆ?

**ಅಮಾಥಾ** : - ಒಳ್ಳೇ ಮಜಾ ಮಾಡಿಸಿದಿರಿ. ಆ ಮೇಲೆ ಕುದುರೆ ಗಾಡೀಲಿ ಬಂದ್ರಿ.

**ಲಾಧೋ** : - ಹೌದು, ನಿಮಗಿಂತ ಮೊದಲೇ ಮನೆಗೆ ಬರೋದು ಒಳ್ಳೇದು ಅಂದ್ಕೊಂಡೆ. ನಿಮ್ಮಮ್ಮ ಜೋರಾಗಿ ಮಾತಾಡೋಳು ಆದ್ರೇ ಬೀದಿ ಜನ ಕೇಳ್ತಾರೆ ಅಂತ ಸುಮ್ಮನಾಗಿ ಬಿಟ್ಳು.

**ಅಮಥಾ** : - ಅಂತೂ ಒಳ್ಳೇ ಆಟ ಕಟ್ಟಿದ್ರಿ.

**(ತುಖರಾಮ ದಾದಾ ಬರುತ್ತಾನೆ)**

**ಲಾಧೋ** : - ಬನ್ನಿ. ದಾದಾ ಬನ್ನಿ.

**ದಾದಾ** : - ಏನಪ್ಪ ಲಾಧೋ ಭಾಯಿ. ಮೆಟ್ಟುಗಳು ಸರಿ ಹೋದ್ವಾ?

**ಲಾಧೋ** : - ತಗೋಳ್ಳಿ ದಾದಾ ನೋಡಿ.

**ದಾದಾ** : - **(ನೋಡಿ)** ಹೊಲಿಗೆ ಚೆನ್ನಾಗಿದೆ ತಾನೆ?

**ಲಾಧೋ** : - ಹೌದು ದಾದಾ. ಅಮಥಾನೇ ಹೊಲಿದಿದ್ದು. ಒಳ್ಳೆ ವಯಸ್ಸಿನವನ ಕೈಲಿ ಹೊಲಿಸಿದ್ದೀನಿ. ಇವಕ್ಕೆ ಇನ್ನೂ ಹತ್ತು ವರ್ಷ ಭಯವಿಲ್ಲ. ಅಮಥಾ ನನ್ನ ಕೆಲಸಗಾರ ಈಗ. (**ಸ್ವಲ್ಪ ತಡೆದು**) ನಾನು ಹೇಳೋದು ಇಷ್ಟೇ. ಹಳೇ ಪಾದರಕ್ಷೆಗಳನ್ನು ಬಿಸಾಕ ಬೇಡಿ. ಸ್ವಲ್ಪ ಹೊಲಿಗೆ ಹಾಕಿ ನೀರಿನಲ್ಲಿ ನೆನಸಿ ಮೆತ್ತಗೆ ಮಾಡಿ ಮತ್ತೆ ಉಪಯೋಗ ಮಾಡಿ. ಅದರಿಂದ ಪ್ರಯೋಜನ ಆಗುತ್ತೆ. ಹೊಲಿಗೆ ಚೆನ್ನಾಗಿ ಮಾಡದ್ರೆ ನಿಮ್ಮ ಕೆಲಸ ಆಗುತ್ತೆ. ದೇಹಾನೂ ಸುಧಾರಿಸುತ್ತೆ. ಹೌದೋ ಅಲ್ವೋ ದಾದಾ?

**(ತೆರೆ)**

## ಪಾತ್ರವರ್ಗ

ಡಾಹೀ ಭಾಯಿ
ಸೂರಜ್
ಧೀರೀ
ಕುರಜೀ ಸೇಠ್
ಗಟು

**[ತೆರೆ ಮೇಲೇರಿದಾಗ ಮುಚ್ಚಿದ ಬಾಗಿಲ ಬೈಠಕ್ ಕೆಳಗಿನ ಆರು ಮೆಟ್ಟಿಲುಗಳ ಬಳಿ ಕೋಣೆಯ ಮತ್ತು ಅಂಗಳ ಭಾಗದಲ್ಲಿ ಮೊಹಲ್ಲಾದ ದೃಶ್ಯ ಕಾಣಸುತ್ತೆ. ಮೊಹಲ್ಲಾದ ಎಡ ಭಾಗದಲ್ಲಿ ಪಶುಗಳನ್ನು ಕಟ್ಟುವ ಜಾಗದ ಅರ್ಧಭಾಗ ಕಾಣುತ್ತದೆ. ಅಲ್ಲಿ ಒಂದು ಹೆಣ್ಣು ಕುದುರೆ ಮತ್ತು ಎಮ್ಮೆ ಕಟ್ಟಿದೆ. ಇವೆರಡರ ಮಧ್ಯೆ ಒಂದು ಗೂಟ ಖಾಲಿ ಬಿದ್ದಿದೆ. ಮೊಹಲ್ಲಾದ ಬಲಗಡೆ ಹೊಲಿದ ಗೋಣಿ ಚೀಲಗಳನ್ನು ಪೇರಿಸಲಾಗಿದೆ. ಅದರ ಪಕ್ಕದಲ್ಲಿ ಹಗ್ಗವನ್ನು ಮೂರು ಎಳೆಯಾಗಿ ಪೋಣಿಸಿ ಗೂಟಕ್ಕೆ ಕಟ್ಟಿ ಮಾಡಿರುವ ತಕ್ಕಡಿ ಇದೆ. ತಕ್ಕಡಿ, ದಬ್ಬಳ, ಹುರಿ ಒಂದು ಭಾಗದಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿದೆ.**

**ಕೋಣೆಯ ಅಕ್ಕ ಪಕ್ಕ ಎರಡು ಕೊಠಡಿಗಳಿವೆ.**

**ಬಲಗಡೆ ಕೊಠಡಿ ಬಳಿ ಅಡಿಗೆ ಮನೆ ಇದೆ. ಎರಡೂ ಕೊಠಡಿಗಳ ಬಾಗಿಲಿಗೆ ಗಾಜಿನ ಕೊಳವೆಗಳಿಂದ ಮಾಡಿದ ಜಾಲರಿ ಇಳಿದು ಬಿದ್ದಿದೆ. ಬಾಗಿಲಿನ ಚೌಕಟ್ಟಿನ ಮೂಲೆಯಲ್ಲಿ ಮುತ್ತುಗಳಿಂದ ಮಾಡಿದ ಗಣಪತಿ ಇದೆ, ಅಲ್ಲದೆ ಮಿಕ್ಕ ಚಿತ್ರಗಳಲ್ಲಿ ತಪಸ್ವೀ ಮಹಾರಾಜ್, ಪರಮೇಶ್ವರಿ, ನವಕಾರ್, ಮಂಗಳ ಮಂತ್ರ ಮತ್ತು ಪರಿವಾರಕ್ಕೆ ಸೇರಿದ ಮಕ್ಕಳ ಚಿತ್ರಗಳನ್ನು ಒಂದೊಂದು ಮೊಳೆಗೆ ನೇತು ಹಾಕಿದೆ.**

**ಮೆಟ್ಟಿಲುಗಳನ್ನು ಹತ್ತಿ ಮುಂದೆ ಬಂದರೆ ಮಧ್ಯದಲ್ಲಿ ಆಧಾರ ಸ್ತಂಭ, ಅದರ ಆಕಾಶ ನೀಲಿ ಬಣ್ಣ ಮುಟ್ಟಿ, ಮುಟ್ಟಿ ಮಾಸಿ ಹೋಗಿದೆ. ಅಲ್ಲಲ್ಲೇ ಅಗಿದು ಉಗಿದ ಒಣ ಹುಲ್ಲು ಬಿದ್ದಿದೆ. ಮೇಲೆ ಒಂದು ಗೂಟಕ್ಕೆ ಬೀಗದ ಕೈಗಳ ಒಂದು ದೊಡ್ಡ ಗೊಂಚಲು ಇದೆ. ಡಾಹೀ ಬಾಯಿ ಕಂಬಕ್ಕೆ ಒರಗಿಕೊಂಡು ಕೂತಿದ್ದಾಳೆ.]**

**ಡಾಹೀ ಬಾಯಿ** : - ಅಯ್ಯೋ ದೇವರೇ, ಎಲ್ಲಾ ನಿನ್ನ ಕೈಯಲ್ಲಿದೆ. ನೀನಲ್ಲದೆ ಆ ಹೂನಂತ ಹುಡುಗನಿಗೆ ಯಾರು ದಿಕ್ಕು? ಪಾಪ ತಾಯಿ ಇಲ್ಲದೆ ತಬ್ಬಲಿ ಆಗ್ತಾನೆ. ತಾಯಿ ಇಲ್ದೆ ಹೋದ್ರೆ ಇವನ್ನ ನಮ್ಮದು ಅಂತ ಯಾರು ಅನ್ತಾರೆ? (ಮೌನ) ನಾನು ಸತ್ತರೆ ಹೊಸಬಳು ಬರುತ್ತಾಳೆ. ಅದ್ರೇ ಸ್ವಂತ ತಾಯಿಯಂತೆ .........

**(ಎಡಗಡೆ ಬಾಗಿಲು ತೆರೆಯುವ ಶಬ್ದ, ಸೂರಜ್ ಬರುತ್ತಾಳೆ)**

**ಸೂರಜ್** : - **(ಮೆಟ್ಟಿಲನ್ನು ಹತ್ತುತ್ತ)**ಏನು ಅತ್ತಿಗೆ?

**ಡಾಹೀ ಬಾಯಿ** : - **(ಬೆನ್ನು ತಿರುಗಿಸಿ)** ಯಾರು ಸೂರಜಳೇನು?

**ಸೂರಜ್** : - ಸೊಸೆಯ ಕಾಹಿಲೆ ಇಷ್ಟೊಂದು ಹೆಚ್ಚಾಗುತ್ತೆ ಅಂತ ಅಂದ್ಕೊಂಡಿರಲಿಲ್ಲ ನಾನು. ನಿನ್ನ ಮೈದುನ ರಾಜಕೋಟದಿಂದ ಮೋಟಾರು ಗಾಡಿ ಬಂದಿದೆ ಅಂದ, ಆಗಲೇ ನನಗೆ ಗೊತ್ತಾಗಿದ್ದು.

**ಡಾಹೀ ಬಾಯಿ** : - ಹೌದಮ್ಮ, ಎಲ್ರೂ ಹೇಳ್ತಾರೆ. ಕರೆಸಿರೀ ಅಂತ. ಅದ್ಕಾರಮ್ಮ, ಹಾಂ, ಸರ್ಜನ್‌ನ. ನಿನ್ನ ಭಾವನವರ ಹೃದಯ ತುಂಬಾ ಮೆದು. ತೌರು ಮನೆಯವರು ಕುಣಿದ್ಹಾಂಗೆ ಕುಣಿತಾರೆ.

**ಸೂರಜ್** : - ನನಗೆ ಗೊತ್ತಿಲ್ಲವೇನು? ಮೊದಲಿನಿಂದಲೂ ಇವರು ಬೇರೆಯವರು ಹೇಳಿದ

ಹಾಗೆ ಕೇಳೋರು.

**ಡಾಹೀ ಬಾಯಿ** :- ಅಣ್ಣ ಬಹಳ ಚಾಲುಕು ಮನುಷ್ಯ. ಎರಡು ವರ್ಷದಿಂದ ಸೇವೆ ಮಾಡಿ ನನಗೆ ಸಾಕಾಗಿ ಹೋಗಿದೆ. ಆದ್ರೂನೂ ನೀವು ಸರಿಯಾಗಿ ಔಷಧೋಪಚಾರ ಮಾಡಲಿಲ್ಲ ಅದಕ್ಕೆ ಕಾಹಿಲೆ ಹೆಚ್ಚಾಗಿ ಹೋಯ್ತು.

**ಸೂರಜ್** :- ಇದಕ್ಕಿಂತ ಇನ್ನೆಷ್ಟು ಅಂತ ಮಾಡೋದು? ಮಿಕ್ಕಿದ್ದು ಮದ್ದುಗಳು. ಅವು ಹೇಗಿರಬೇಕೋ ಹಾಗಿರುತ್ತವೆ.

**ಡಾಹೀ ಬಾಯಿ** :- ಅಲ್ದೇ, ಇದೇನು ಕುಡಿಯೋ ವಸ್ತುನ ಪಾತ್ರೇಲಿ ತುಂಬಿಕೊಂಡು ಬರುಕ್ಕೆ.

**ಸೂರಜ್** :- ಸೊಸೇಗೇನು ಕಡಿಮೆ ಸೇವೆ ಮಾಡಿದ್ರ.

**ಡಾಹೀ ಬಾಯಿ** :- **(ಸಂತೋಷದಿಂದ)** ಗೊತ್ತು ಅವರಿಗೆ ಇದೆಲ್ಲಾ. ಅವರು ನಮ್ಮ ಮುಖಕ್ಕೆ ಮಸಿ ಬಳೀ ಬೇಕು ಅಂತ ಅಷ್ಟೇ ಬೇರೆಯವರಾಗಿದ್ದರೆ ಎಂದೋ ತೌರು ಮನೆಗೆ ಕಳಿಸಿ ಬಿಡ್ತಿದ್ದರು. ನಾವಾಗಿದಕ್ಕೆ ಮನೆಯಲ್ಲಿ ಇಟ್ಟುಕೊಂಡಿದ್ದೇವೆ. ಅದಕ್ಕೆ ಇದೇ ಉಪಕಾರ.

**ಸೂರಜ್** :- ಅತ್ತಿಗೆ, ಮಾಡೋರ್ಗೆ ತಾನೇ ಎಲ್ಲಾರೂ ಅನ್ನೋದು.

**(ಬಾಗಿಲ ಹೊರಗಡೆ ಮೋಟಾರ್ ಗಾಡಿಯ ಪೊಂ, ಪೊಂ ಶಬ್ದ)**

**ಡಾಹೀ ಬಾಯಿ** :- **(ದೊಡ್ಡ ದನಿಯಲ್ಲಿ)** ಅರೇ, ಹುಡುಗರ ಬಿಡಿ, ಇಳೀರಿ ಮೋಟಾರಿನಿಂದ **(ಸೂರಜ್‌ಳನ್ನು ಕುರಿತು)** ನಮ್ಮ ಬೀದಿ ಹುಡುಗರು ಎಷ್ಟು ತುಂಟರು ನೋಡು. ಆ ಮೋಟಾರು ಬಂದಾಗಿನಿಂದ ಏಷ್ಟೊಂದು ಗಲಾಟೆ ಮಾಡುತ್ತಿದ್ದಾರೆ ನೋಡು.

**ಸೂರಜ್** :- **(ಮಾತನ್ನು ಗಮನಿಸದೆ)** ಹಾಗಾದ್ರೆ ಅತ್ತಿಗೆ ಸೊಸೆ ಏನಾದ್ರು ಮಾಡ್ತಾಳೋ ಇಲ್ಲ ಹಾಗೇ ಇದ್ದಳೋ?

**ಡಾಹೀ ಬಾಯಿ** :- ಕಲ್ಲಿನಂತೆ ಬಿದ್ದಿದ್ದಾಳಮ್ಮ.

**ಸೂರಜ್** :- ಅರೇ, ಮದುವೆಯಾದಾಗಲಿಂದ್ಲೂ ಅವಳು ಸರೀನೆ ಇಲ್ಲ. ಕಾಹಿಲೇನೂ ಹೊಸ ತರಹ. "ಹಿಸ್ಟೀರಿಯ!" ನಮಗಂತು ಹೇಳೋಕೂ ಬರೋಲ್ಲ.

**ಡಾಹೀ ಬಾಯಿ** :- ಹೇಗೆ ಬರುತ್ತೆ. ಯಾರಿಗಾದ್ರು ಬಂದಿದ್ರೆ ತಾನೆ. ಅವಳ ಕರ್ಮ.

**ಸೂರಜ್** :- ಹೌದು, ಕರ್ಮಾನೇ, ಇಲ್ದಿದ್ರೆ ಇಂಥ ಚಿಕ್ಕ ವಯಸ್ಸಿನಲ್ಲಿ ರೋಗ ಬರೋದೇ?

**ಡಾಹೀ ಬಾಯಿ** :- ಇವೆಲ್ಲ ಡಾಕ್ಟ್ರರಿಗೆ ಹೇಗೆ ಗೊತ್ತಾಗುತ್ತೆ. ಒಬ್ಬಳೇ ಇರೋದ್ರಿಂದ ಆ ರೋಗ ಬರುತ್ತೆ ಅಂತರಲ್ಲ. ಗಂಡ ಜೊತೆಗಿದ್ರೆ ಈ ರೋಗ ವಾಸಿ ಆಗುತ್ತೆ ಇಲ್ದಿದ್ರೆ ಇಲ್ಲ ಅಂತಾರೆ. ಪ್ರಪಂಚದಲ್ಲಿ ಇಂಥದನ್ನ ಎಲ್ಲಾದ್ರೂ ಕೇಳಿದ್ದೀರ?

**ಸೂರಜ್** :- ಎಷ್ಟೋ ಜನರಿಗೆ ಒಬ್ಬಬ್ಬರೇ ಇರಬೇಕಾಗುತ್ತೆ. ಅಲ್ದೆ ಗಂಡ ಪರದೇಶದಲ್ಲಿ ಇರೋವಾಗ ಒಬ್ಬಳಲ್ಲದೆ ಇಬ್ಬರೂ ಇರಕ್ಕಾಗುತ್ತಾ?

**ಡಾಹೀ ಬಾಯಿ** :- ನೋಡು, ಊರೇನು ಹತ್ತಿರ ಇದೆಯಾ, ಕಾಗದ ಬರದ್ರೆ ಅವನು ತಕ್ಷಣ ಬಂದ್ಬಿಡೋಕ್ಕೆ. ಅವನು ಹೋಗಿ ಇನ್ನೂ ಮೂರು ವರ್ಷ ಕೂಡ ಆಗಲಿಲ್ಲ. ಒಂದು ಸಲ ಹೋಗಿ ಬರ್ಬೇಕು ಅಂದ್ರೆ ಎಷ್ಟು ಖರ್ಚು ಆಗುತ್ತೆ ಗೊತ್ತಾ?

**(ಸ್ವಲ್ಪ ಹೊತ್ತು ಯಾರು ಮಾತಾಡೊಲ್ಲ. ಬಲಗಡೆ ಕೋಣೆಯಿಂದ ಧೀರೀ ಹೊರಕ್ಕೆ ಬರುತ್ತಾಳೆ)**

**ಧೀರಿ** : - ಅಮ್ಮಾ.

**ಡಾಹೀ ಬಾಯಿ** : - ಏನು? ಅತ್ತಿಗೆ ಹೇಗಿದ್ದಾಳೆ ಈಗ?

**ಧೀರಿ** : - ಹಾಗೇ ಇದ್ದಾಳೆ. **(ಬೇಜಾರಿನಿಂದ)** ಚೀಲ ಎಲ್ಲಿದೆ?

**ಡಾಹೀ ಬಾಯಿ** : - ಪೆಟ್ಟಿಗೆ ಮೇಲಿದೆ ನೋಡು.

**ಧೀರಿ** : - ಸರಿ **(ಹೊರಡುತ್ತಾಳೆ)**

**ಡಾಹೀ ಬಾಯಿ** : - ನಾನು ಬರಲೇನು?

**ಧೀರಿ** : - **(ಕೋಣೆಯ ಒಳಗಿನಿಂದ)** ಬೇಡ. ಡಾಕ್ಟರು ಯಾರಿಗೂ ಬರಬೇಡ ಅಂತ ಹೇಳಿದ್ದಾರೆ. ಇಲ್ಲಿ ಯಾರಿಗೂ ಕೆಲಸವಿಲ್ಲ.

**ಡಾಹೀ ಬಾಯಿ** : - ದೇವರೇ, ದೇವರೇ.

**ಸೂರಜ್** : - ಪಾಪ, ಬಾಬು ಅಣ್ಣನ ಅದೃಷ್ಟ ಹಾಳಾಗಿ ಹೋಯ್ತು.

**ಡಾಹೀ ಬಾಯಿ** : - ಇದರಲ್ಲಿ ಅದೃಷ್ಟ ಹಾಳಾಗೋದೇನು ಬಂತು? ಬಾಬುವಿಗೇನು, ಇಪ್ಪತ್ತೊಂದು ಜನ ಅಪ್ಪಂದಿರು ತಮ್ಮ ಮಗಳನ್ನು ಇಟ್ಟುಕೊಂಡು ಕಾದು ಕುಳಿತಿದ್ದಾರೆ.

**(ಸೂರಜ್ ಅವಳನ್ನು ಅಭಿಮಾನದಿಂದ ನೋಡುತ್ತಾಳೆ)**

**ಸೂರಜ್** : - ಹೌದೇನು?

**ಡಾಹೀ ಬಾಯಿ** : - **(ಗಂಭೀರ)** ಅಲ್ದೇ ಮತ್ತೇನು. ಒಳ್ಳೇ ಲಕ್ಷಣವಾಗಿರುವ, ಪರದೇಶದಲ್ಲಿರುವ ಹುಡುಗ ತಕ್ಷಣ ಸಿಕ್ಕಿ ಬಿಡ್ತಾನಾ? ಅದೂ ಸಾಲದೆ ದಿವಾನರ ವಂಶ, ಮನೆ...... ಎಷ್ಟು ಪೀಳಿಗೆಗಳಿಂದ ದಿವಾನಗಿರಿಮಾಡ್ತಾ ಬಂದಿದ್ದಾರೆ. ವ್ಯಾಪಾರ ಈಗ ತಾನೆ ಶುರು ಮಾಡಿದ್ದು. ಇದಕ್ಕೆ ಮೊದಲು ಠಾಕುರ್ ಸಾಹೇಬರ ಬಳಿಯೇ ಇವರ ಖುರ್ಚಿ, ಹಾಂ.

**ಸೂರಜ್** : - ಅದು ಅಲ್ಲೇ, ಇಷ್ಟು ದೊಡ್ಡ ಮನೆ ಇಡೀ ಜೋಧ್‌ಪುರದಲ್ಲಿ ಯಾರಿಗಿದೆ. ಗೋದಡ್‌ವಾಲದಿಂದ ದರಬಾರಗಡ ಇದರ ಮುಂದೆ ಏನೂ ಇಲ್ಲ. **(ಡಾಹೀಬಾಯಿ ಸಂತೋಷವಾಗುತ್ತಾಳೆ, ಇದನ್ನು ನೋಡಿ ಸೂರಜ್)** ಭಾದ್ರಪದದ ಕೊನೆಗೆ ಬರೋ ಮಳೆಯಲ್ಲಿ ಕೋಣೆಯ ಚಾವಣಿ ಕಾಣುತ್ತೆ.

**(ಗಟು ಶಾಲೆಯಿಂದ ಅಳುತ್ತಾ ಬರುತ್ತಾನೆ. ಅವನ ಕೈಯಲ್ಲಿ ತುಂಡಾದ ಎರಡು ಸ್ಲೇಟಿನ ಚೂರುಗಳು, ಮರದ ಚೌಕಟ್ಟು ಇದೆ)**

**ಡಾಹೀ ಬಾಯಿ** : - ಯಾರಪ್ಪ ಮಗೂ? ಏನಾಯ್ತು? ಯಾರು ಹೊಡೆದರು? ಮೇಷ್ಟ್ರು ಬೈದರಾ? ಇದೇನಿದು ಸ್ಲೇಟು ಒಡೆದು ಹೋಯ್ತು?

**ಗಟು** : - **(ಬಿಕ್ಕಳಿಸುತ್ತಾ)** ದಾರಿಲೀ ಹಸುಗಳ ಗುಂಪು. ಹೂ. ಹೂ. ಬರ್ತಿತ್ತು.

**ಡಾಹೀ ಬಾಯಿ** : - ಏನಾಯ್ತು? ಬೇಗ ಹೇಳು ಮರಿ.

**ಗಟು** : - ಹಸು ನೂಕಿ ಬಿಡ್ತು. ಹೂ. ಹೂ.

**ಡಾಹೀ ಬಾಯಿ** : - **(ಪ್ರೀತಿಯಿಂದ)** ಅರೇ, ನನ್ನ ಕಂದ **(ತೊಡೆಯ ಮೇಲೆ ಕುಳ್ಳಿರಿಸಿ)** ಮುಂಡೇದು ಹಸು. ನನ್ನ ಕಂದನಿಗೆ ಎಲ್ಲೂ ಏಟು ಬಿದ್ದಿಲ್ಲವಲ್ಲ?

**ಗಟು** : - **(ಅಳುತ್ತಾ)** ಹೂಂ, ಹೂಂ, ಬಿದ್ದು ಬಿಟ್ಟೆ. ಸ್ಲೇಟ್ ಒಡೆದೋಯ್ತು.

**ಡಾಹೀ ಬಾಯಿ** : - **(ಸಮಾಧಾನ ಪಡಿಸುತ್ತಾ)** ಓಹೋ, ಇದಕ್ಯಾಕೆ ಅಳಬೇಕು. ಅಯ್ಯೋ

ಹುಚ್ಚ, ಹೊಸ ಸ್ಲೇಟು ಕೊಡಿಸ್ತೀನಿ. ಅಳು ನಿಲ್ಸು ಮತ್ತೆ.

**ಗಟು** : - ಅಮ್ಮಾ........

**ಡಾಹೀ ಬಾಯಿ** :- ನೋಡು, ಅಮ್ಮ ಮಲಗಿದ್ದಾಳೆ. ಹಾ, ನೀನು ಅಲ್ಲಿಗೆ ಹೋಗಬಾರದು.

**ಗಟು** : - ಉಹೂಂ ...... ಅಮ್ಮ ಎಲ್ಲಿ?

**ಡಾಹೀ ಬಾಯಿ** : - ನೋಡು ಮತ್ತೆ. ಅಮ್ಮ ಮಲಗಿದ್ದಾಳೆ ಅಂತ ಹೇಳಲಿಲ್ವಾ. ಹಠ ಮಾಡಬೇಡ. ಜಾಣ ಮರಿ ಅಲ್ಲಿಗೆ ಹೋಗ ಕೂಡದು.

**(ತೊಡೆಯ ಮೇಲೆ ಕೂರಿಸಿಕೊಂಡು ಸಮಾಧಾನ ಮಾಡುತ್ತಾಳೆ)**

**ಗಟು** :- ಅಮ್ಮಾ, ಇನ್ನು ಮೇಲಕ್ಕೆ ಎದ್ದೇಳೋದೇ ಇಲ್ವಾ? **(ಅಳ ತೊಡಗುತ್ತಾನೆ, ಧೀರಿ ಹೊರಗೆ ಬಂದು ಸನ್ನೇಯಿಂದ ಡಾಹೀಬಾಯಿಯನ್ನು ಕರೆಯುತ್ತಾಳೆ)**

**ಡಾಹೀ ಬಾಯಿ** : - **(ಎದ್ದು ಹೋಗುತ್ತಾ)** ನೋಡು, ಈಗಲೇ ಬಂದ್ಬಿಡ್ತೀನಿ. ನೀನು ಚಿಕ್ಕಮ್ಮನ ಜೊತೆ ಆಟ ಆಡುತ್ತಿರು.'

**ಸೂರಜ್** :- ನೋಡು ಮರಿ, ನಿನಗೆ ಹೊಸ ಸ್ಲೇಟು ಬೇಕು ತಾನೇ. ಹಾಗಾದರೆ ಸುಮ್ನಿರು.

**(ಗಟು ಅಳುತ್ತಾನೆ. ಸೂರಜ್ ಸೀರೆಯ ಸೆರಗಿನಿಂದ ಅವನ ಕಣ್ಣನ್ನು ಒರೆಸುತ್ತಾಳೆ)**

**ಗಟು** : - ಅಮ್ಮಾ ......

**ಸೂರಜ್** : - ಈಗಲೇ ಬರ್ತ್ತಾಳೆ ..... ಏನು?

**ಗಟು** : - **(ಎದ್ದು ನಿಂತು ಕೊನೆಯ ಕಡೆ ಓಡುತ್ತಾನೆ)** ಅಮ್ಮಾ .... ಹತ್ತಿರ.

**ಸೂರಜ್** : - **(ಹಿಡಿದಿಟ್ಟಿರುತ್ತಾಳೆ)** ನೋಡು ಮಗು, ಒಳಗೆ ಹೋಗಬಾರದು. ಅಮ್ಮ ಮಲಗಿದ್ದಾಳೆ.

**(ಕೊನೆಯಲ್ಲಿ ಮೊದಲು ನೀರವತೆ ಹೋಗಿ ಮಾತುಗಳು ಕೇಳಿ ಬರುತ್ತವೆ. ಪಾದರಕ್ಷೆಗಳ ಶಬ್ದ, ಹೊರಗೆ ಬಂದು ನಂತರ ಮೆಟ್ಟಿಲುಗಳನ್ನು ಇಳಿದು ಹೋಗುತ್ತವೆ. ಹಿಂದೆಯೇ ಡಾಹೀ ಬಾಯಿ ಅಳುತ್ತಾ ಹೊರಗೆ ಬರುತ್ತಾಳೆ)**

**ಡಾಹೀ ಬಾಯಿ** : - **(ಸೂರಜ್‌ಗೆ)** ಹೋಗಮ್ಮ. ಹಿತ್ತಲ ಕಡೆ ಹೋಗಿ, ಪಟೇಲರ ಕೊಟ್ಟಿಗೆಯಿಂದ ಸ್ವಲ್ಪ ಹಸು ಸಗಣಿ ತಗೊಂಡು ಬಾ.

**ಸೂರಜ್** : - **(ಎಲ್ಲವು ತಿಳಿದಂತೆ)** ಒಂದು ಕ್ಷಣದಲ್ಲಿ ತರ್ತೀನಿ. **(ಹೋಗುವಳು)**

**(ಬಾಗಿಲ ಹೊರಗೆ ನಿಂತ ಮೋಟಾರ್ ಗಾಡಿಯಿಂದ ದೊಡ್ಡ ಶಬ್ದ ಕೇಳಿ ಮತ್ತೆ ಅಡಗುತ್ತದೆ. ತಕ್ಷಣ ಪ್ರೊಪೆಲರ್‌ನ ಶಬ್ದ. ಸ್ವಲ್ಪ ನಂತರ ದೂರವಾಗುತ್ತಿರುವ ಮೋಟಾರ್ ಗಾಡಿಯ ಫೊಂ, ಫೊಂ, ಶಬ್ದ ಕೇಳಿ ಬರುತ್ತದೆ)**

**ಗಟು** : - ಅಮ್ಮಾ ...... ಅಮ್ಮಾ ........ ಅಮ್ಮಾ .....!

**ಡಾಹೀ ಬಾಯಿ** : - **(ಎತ್ತಿಕೊಳ್ಳುತ್ತಾ)** ಇನ್ನು ನಿಮ್ಮಮ್ಮ ಎದ್ದೇಳಲ್ಲಪ್ಪ.

**ಗಟು** : - ಅಮ್ಮಾ ......

**(ಹೊರಗಡೆಯಿಂದ ಒಬ್ಬ ರೈತ ಬರುತ್ತಾನೆ. ಕೊನೆಯ ಮೆಟ್ಟಿಲ ಬಳಿ ನಿಲ್ಲುತ್ತಾನೆ)**

**ಡಾಹೀ ಬಾಯಿ** : - ಯಾರಪ್ಪ? ಏನು ಬಂದಿ?

**ರೈತ**:- ಪರಜೀ ಸೇಠ್‌ರವರು ಇದ್ದಾರ?

**ಡಾಹೀ ಬಾಯಿ** : - ಇದ್ದಾರೆ. ಏನಾಗ್ಬೇಕಾಗಿತ್ತು?

**ರೈತ** : - ಪಕ್ಕದ ಮಯಾಬನ್ ಸೇಠ್‌ರವರು ಕರಿತಾ ಇದ್ದಾರೆ.

**ದಾಹೀ ಬಾಯಿ** : - **(ಆಶ್ಚರ್ಯ)** ಮಯಾಬನ್ ಸೇಠ್‌ರ! ಹೇಗೆ ಬಂದಿದ್ದಾರೆ?

**ರೈತ** : - ತಮ್ಮ ಕುದುರೆಯ ಮೇಲೆ ಬಂದಿದ್ದಾರೆ.

**ದಾಹೀ ಬಾಯಿ** : - ಎಲ್ಲಿ ಇಳಿದು ಕೊಂಡಿದ್ದಾರೆ?

**ರೈತ** : - ಲಾಯದಲ್ಲಿ ಕುದುರೆ ಕಟ್ಟಿ ಹಾಕಿ ಪರಜೀ ಸೇಠ್‌ರವರನ್ನು ಕರ್ಕೊಂಡು ಬಾ ಅಂದ್ರು.

**(ಕೋಣೆಯ ಒಳಗೆ ಹೋಗುತ್ತಾಳೆ. ಪಿಸುಗುಟ್ಟುವ ಶಬ್ದ. ಸ್ವಲ್ಪ ಹೊತ್ತಾದ ಮೇಲೆ ಪರಜೀ ಸೇಠ್ ಹೊರಗೆ ಬರುತ್ತಾನೆ. ಅವನ ಹಿಂದೆ ದಾಹೀ ಬಾಯಿ ಇದ್ದಾಳೆ)**

**ಪರಜೀ ಸೇಠ್** : - ನಾನು ಬೇಗ ವಾಪಸ್ಸು ಬಂದ್ಬಿಡುತ್ತೇನೆ.

**(ಮೆಟ್ಟಿಲುಗಳನ್ನು ಇಳಿಯುತ್ತಾನೆ. ರೈತ ಅವನ ಹಿಂದೆ ಹೋಗುತ್ತಾನೆ)**

**ದಾಹೀ ಬಾಯಿ** : - ಇಲ್ಲಿ ನೋಡು.

**ರೈತ** : - ಹಾ, ಏನು?

**ದಾಹೀ ಬಾಯಿ** : - ಮಯಾಬನ್ ಸೇಠ್‌ನ ಕುದುರೆಗೆ ನಮ್ಮ ರಾಶಿಯಿಂದ ಸ್ವಲ್ಪ ಹುಲ್ಲು ತೆಗೆದುಕೊಂಡು ಹೋಗು. **(ರೈತ ಸ್ವಲ್ಪ ತೆಗೆದುಕೊಳ್ಳುತ್ತಾನೆ)** ಎರಡೂ ಕೈ ತುಂಬಾ ತೆಗದುಕೊಂಡು ಹೋಗು.

**ಗಟು** : - **(ಅಳುತ್ತಲೇ)** ಅಮ್ಮ ಇನ್ಯಾವಾಗಲೂ ಎದ್ದೇಳಲ್ವಾ?

**ದಾಹೀ ಬಾಯಿ** : - ನೋಡು ಮರಿ, ಈಗ ನಿನಗೆ ಹೊಸ ಸ್ಲೇಟು ಬೇಕು ತಾನೇ.

**ಗಟು** : - **(ಅಳುತ್ತಾ)** ಹೂಂ, ಬೇಕು.

**ದಾಹೀ ಬಾಯಿ** : - ಎಷ್ಟು ದೊಡ್ಡದು ಬೇಕು ಹೇಳು ನೋಡೋಣ.

**ಗಟು** : - ಬಾ ........ ಳ ದೊಡ್ಡದು

**ದಾಹೀ ಬಾಯಿ** : - ಎಷ್ಟು **(ಎರಡು ಕೈ ಚಾಚಿ)** ಇಷ್ಟು ದೊಡ್ಡದ?

**ಗಟು** : - ಉಹುಂ

**ದಾಹೀ ಬಾಯಿ** : - **(ಇನ್ನೂ ಅಗಲವಾಗಿ ತೋರಿಸಿ)** ಹಾಗಾದ್ರೆ ಇಷ್ಟಾ?

**ಗಟು** : - ಅಲ್ಲ.

**ದಾಹೀ ಬಾಯಿ** : - **(ಕೈಗಳನ್ನು ಅಗಲವಾಗಿ ತೋರಿಸಿ)** ಇಷ್ಟಾ?

**ಗಟು** : - **(ಸಂತೋಷದಿಂದ)** ಹೌದು.

**ದಾಹೀ ಬಾಯಿ** : - ಇಷ್ಟು ದೊಡ್ಡದು ತೆಗೆದುಕೊಳ್ತೀಯಾ?

**ಗಟು** : - ಹೌದು, ಹೌದು.

**ದಾಹೀ ಬಾಯಿ** : - **(ಮಗುವನ್ನು ಅಪ್ಪಿಕೊಂಡು)** ನನ್ನ ಜಾಣ ಮರಿ.

**(ಸೂರಜ್ ಕೈಯಲ್ಲಿ ಸಗಣಿ ಹಿಡಿದು ಬರುತ್ತಾಳೆ)**

**ಸೂರಜ್** : - ಅತ್ತೇ, ಸೊಸೆ ಸತ್ತ ಸಮಾಚಾರ ಅರ್ಧ ಹಳ್ಳಿಗೆ ಗೊತ್ತಾಗಿ ಬಿಟ್ಟಿದೆ.

**ದಾಹೀ ಬಾಯಿ** : - ಇದು ಆ ಡಾಕ್ಟರ್ ಕಾರಿನಿಂದ ಆಗಿದ್ದು. ಅಲ್ದೆ ನಿಮ್ಮ ಭಾವ ಬೇರೆ ಬಟ್ಟೆ ತಲೆ ಬಿಟ್ಕೊಂಡು ಹೋಗಿದ್ದಾರೆ. ಗೊತ್ತಾಗದೆ ಇರಕ್ಕೆ ಹೇಗೆ ಸಾಧ್ಯ?

**ಸೂರಜ್** : - ಭಾವ ಹೋಗಿದ್ದಾರೇನು?

**ಡಾಹೀ ಬಾಯಿ** :- ಹೌದು.

**ಸೂರಜ್** :- ಸಂಸ್ಕಾರಕ್ಕೆ ಎಲ್ರೂನೂ ಕರೀಲಿಕ್ಕೆ ಹೋಗಿರಬಹುದು.

**ಡಾಹೀ ಬಾಯಿ** :- ಹೌದು. ತೆಂಗಿನ ಕಾಯಿ, ಹಗ್ಗ ಇವೆಲ್ಲಾ ಬೇಕಲ್ಲ. ಅಲ್ದೇ ಹೊರೋದಕ್ಕೆ ಜನ ಬೇಕಲ್ಲ?

**ಸೂರಜ್** :- ಅದಕ್ಕೇ ಹೋದ್ರಾ?

**ಡಾಹೀ ಬಾಯಿ** :- ಜೊತೆಗೆ ಪಕ್ಕದ ಆ ಮಯಾಚನ್ ಸೇಠ್ ಬಂದಿದ್ದಾರೆ. ಹಾಗೆ ಅವ್ರನ್ನು ನೋಡ್ಕೊಂಡು ಬರ್‍ತೀನಿ ಅಂತ ಹೋದ್ರು.

**ಸೂರಜ್** :- **(ರಾಗವಾಗಿ)** ಹಾಗೋ ......

**ಡಾಹೀ ಬಾಯಿ** :- **(ಮಾತು ಮರೆಸುವಳಂತೆ)** ಸರಿ, ಒಳಗೆ ಕೆಲ್ಸವಿದ್ದರೆ ಬರಲೇನು?

**ಸೂರಜ್** :- ಬೇಡ, ಬೇಡ. ಈ ಗಟು ಸುಮ್ನಿರೋದಿಲ್ಲ. ಅವನನ್ನು ಸಮಾಧಾನ ಮಾಡ್ತಿರು. ನಾನು ನೆಲ ಸಾರಿಸಿ ತುಪ್ಪದ ದೀಪ ಹಚ್ಚೀಕು.

**(ಸೂರಜ್ ಒಳಗೆ ಹೋಗ್ತಾಳೆ)**

**ಡಾಹೀ ಬಾಯಿ** :- ಇಲ್ನೋಡು. ದೀಪಕ್ಕೆ ಅಂತ ತುಪ್ಪ ಬೇರೆ ಇಟ್ಟಿದ್ದೀನಿ. ಪಾತ್ರೆಯಿಂದ ತೆಗೆದುಕೊ.

**ಸೂರಜ್** :- **(ಕೊಠಡಿಯಿಂದ)** ಆಗಲಿ.

**ಡಾಹೀ ಬಾಯಿ** :- ಹತ್ತಿ ಆ ಬತ್ತಿ ಗೂಡಿನಲ್ಲಿದೆ.

**ಸೂರಜ್** :- **(ಒಳಗಿನಿಂದ)** ನೋಡ್ತೀನಿ.

**ಡಾಹೀ ಬಾಯಿ** :- **(ಗಟುವಿಗೆ)** ಗಟು, ಇದೇನು ನಿನ್ನ ಬೆರಳಲ್ಲಿ?

**ಗಟು** :- ಉಂಗುರ.

**ಡಾಹೀ ಬಾಯಿ** :- ಯಾರ್‍ದು ಉಂಗುರ?

**ಗಟು** :- ನನ್ನದು.

**ಡಾಹೀ ಬಾಯಿ** :- ಹೌ ........ ದಾ ...........

**ಗಟು** :- ಹೌದು.

**ಡಾಹೀ ಬಾಯಿ** :- ನನಗೆ ಕೊಡ್ತೀಯಾ?

**(ಒಳಗಡೆಯಿಂದ ಧೀರಿ ಬರುತ್ತಾಳೆ)**

**ಧೀರಿ** :- ಅಮ್ಮ.

**ಡಾಹೀ ಬಾಯಿ** :- ಏನಮ್ಮ?

**ಧೀರಿ** :- ಅತ್ತಿಗೆ, ಕಿವಿ, ಮೂಗಿನಲ್ಲಿ ಇಟ್ಕೊಂಡಿಲ್ವಲ್ಲಾ ಏಕೆ?

**ಇಚುಚ್ಚುಉ** :- ಕಿವಿಯ ಇಯರ್ ರಿಂಗ್ ಅಕ್ಕಸಾಲಿಗೆ ಕೊಟ್ಟಿದ್ದೆ ಶುದ್ಧ ಮಾಡೋದಿಕ್ಕೆ ಮೂಗುತಿ ಮತ್ತು ಕೈ ಬಳೆಗಳನ್ನು ಬೆಳಗ್ಗೇನೆ ಕಳಚಿ ಇಟ್ಟಿದ್ದೆ.

**ಧೀರಿ** :- ಹಾಗಾದ್ರೆ ಸರಿ. ನನಗೆ ಗಾಬರಿ ಆಗೋಯ್ತು. ಎಲ್ಲಪ್ಪ ಹೋದ್ವೊ ಅಂತ.

**ಡಾಹೀ ಬಾಯಿ** :- ಗಟುವನ್ನು ನೋಡ್ಕೊ. ಸ್ವಲ್ಪ ಒಳಗೆ ಹೋಗ್ತೀನಿ.

**ಧೀರಿ** :- ಇಲ್ಲಮ್ಮ. ಇವನನ್ನು ಸುಧಾರಿಸೋದಕ್ಕೆ ನನ್ನ ಕೈಲಾಗೊಲ್ಲ.

**(ಒಳಗೆ ಹೋಗುತ್ತಾಳೆ)**

**ಗಟು** : - ಅಮ್ಮ ...... ಅಮ್ಮ ಎಲ್ಲಿ **(ಜೋರಾಗಿ ಅಳುತ್ತಾನೆ)**

**ಡಾಹೀ ಬಾಯಿ** : - ಅಮ್ಮ ಈಗ್ಲೇ ಬರ್ತಾಳೆ ಸುಮ್ನಿರು. ನಿನಗೆ ಹೊಸ ಸ್ಲೇಟ್ ಬೇಕೊ ಬೇಡ್ವೋ?

**(ಒಳಗಿನಿಂದ ಸೂರಜ್ ಬರುತ್ತಾಳೆ)**

**ಸೂರಜ್** : - **(ಶೋಕದಿಂದ)** ಅತ್ತಿಗೆ, ಸೊಸೆಗೆ ಯಾವುದನ್ನು ಹೊದಿಸೋಣಾ?

**ಡಾಹೀ ಬಾಯಿ** : - ಮುತ್ತೈದೆಯರಿಗೆ ಒಳ್ಳೆಯ ಬೆಲೆ ಬಾಳುವುದೇ ಆಗ್ಬೇಕಲ್ಲಾ. ಸೊಸೇದು ಎರಡು "ಬಂದೇಜ್" ಗಳಿವೆ. ಒಂದು ಮದುವೆಯದು, ಇನ್ನೊಂದು ಸೀಮಂತದ್ದು. ಎರಡೂ ಹಾಗೇ ಬಿದ್ದಿವೆ. ಒಂದ್ಸಲ ಉಟ್ಟಿದ್ದಳು ಅಷ್ಟೇ. ಆ ಮದುವೇ ಜೋಡಿದು ಇನ್ನೂ ಮಡಿಕೇನೇ ಬಿಚ್ಚಿಲ್ಲ.

**ಸೂರಜ್** : - ಜರೀದು ದೊಡ್ಡ ಸೀರೆ ಇದೆಯೋ ಇಲ್ವೋ?

**ಡಾಹೀ ಬಾಯಿ** : - ಹಾ! ಮುನ್ನೂರು ರೂಪಾಯಿದು. ಎಷ್ಟು ಭಾರ ಅಂದ್ರೆ ಈಗಲೂ ಅದನ್ನ ಉಡೋಕೆ ಆಗಲ್ಲ.

**ಸೂರಜ್** : - ಹಾಗಾದ್ರೇ ಅದನ್ನ ಹೊದಿಸೋಣ.

**ಡಾಹೀ ಬಾಯಿ** : - **(ಬೆಚ್ಚಿ)** ಸೀರೇನಾ?

**ಸೂರಜ್** : - ಹಾ. ನಮ್ಮ ಮನೆ ಪದ್ಧತಿಯಂತೆ ಮುತ್ತೈದೆಗೆ ಯಾವುದು ಇಷ್ಟನೋ ಅದೇ ಹೊದಿಸಬೇಕು. ಅರಮನೆಯಂತಹ ಮನೆಯಲ್ಲಿ ಪಾಪ ಅವಳು ಏನು ತಾನೆ ಅನುಭವಿಸಿದ್ಲಾಳೆ.

**ಡಾಹೀ ಬಾಯಿ** : - **(ಸಂಕಟ)** ಆದರೇ ಸೀರೆ ವರದಕ್ಷಿಣೇದು.

**ಸೂರಜ್** : - ಹಾಗೇನು?

**ಡಾಹೀ ಬಾಯಿ** : - ಇಂಥ ವಸ್ತುಗಳು ನೂರಾರು ಸಲ ಬೇಕಾಗುತ್ತವೆ. ನಾಳೆ ಒಂದು ಸಮಯ ಬಂದ್ರೆ ವರದಕ್ಷಿಣೆ ಇಡಬೇಕೋ ಇಲ್ವೋ?

**ಸೂರಜ್** : - ಹೌದಲ್ಲ. ನನಗೆ ಜ್ಞಾಪಕಕ್ಕೆ ಬರಲಿಲ್ಲ.

**ಡಾಹೀ ಬಾಯಿ** : - ಇಂಥ ಬೆಲೆ ಬಾಳೋ ವಸ್ತುಗಳನ್ನು ಬೇಕೆಂದಾಗ ಖರಿದಿ ಮಾಡುಕ್ಕೆ ಆಗುತ್ತಾ?

**ಸೂರಜ್** : - **(ಒಪ್ಪಿಕೊಂಡು)** ಇಲ್ಲ.

**ಡಾಹೀ ಬಾಯಿ** : - **(ಸಂತೋಷ)** ಈಗ ಗೊತ್ತಾಯ್ತಲ್ಲ? ಬಾಬುವಿನ ಮದುವೇಲಿ ಕೊಟ್ರೆ ಸೊಸೆ ಹಬ್ಬ ಹರಿದಿನ ಬಂದಾಗ ಉಟ್ಕೋಬಹುದು.

**ಸೂರಜ್** : - ನೀವು ಹೇಳೋದು ಖಂಡಿತಾ ನಿಜ.

**ಡಾಹೀ ಬಾಯಿ** : - **(ಹುರುಪಿನಿಂದ)** ಬಹಳ ಉಟ್ಟು ಎಳೆಗಳು ಬಂದ್ಬಿಟ್ರೇ ಇಲ್ಲಾ ಬಣ್ಣ ಮಾಸೋದ್ರೇ ಗಟು ದೊಡ್ಡವನಾದ ಮೇಲೆ ರುಮಾಲಿನಂತೆ ಉಪಯೋಗಿಸಬಹುದು.

**ಸೂರಜ್** : - ಹಾಗಾದ್ರೆ ಒಳ್ಳೆ 'ಬಂದೇಜನ್ನೇ' ಹೊದಿಸೋಣ ಅಂತಿಯಾ?

**ಡಾಹೀ ಬಾಯಿ** : - ಹೌದು ಆದ್ರೇ ಮದುವೇದು ಬೇಡ. ಎರಡನೆಯದನ್ನು ತಗೋ

**(ಸೂರಜ್ ಒಳಕ್ಕೆ ಹೋಗುತ್ತಾಳೆ)**

**ಗಟು** : - ಅಮ್ಮಾ .....**(ಜೋರಾಗಿ ಅಳುತ್ತಾನೆ)**

**ಡಾಹೀ ಬಾಯಿ** : - ಈಗ ಬರ್ತಾಳೆ. ಇರು ಮಗು.

**ಗಟು** : - ಅ.....ಮ್ಮಾ, ಅಮ್ಮಾ

**ಡಾಹೀ ಬಾಯಿ** : - **(ಪೂಸಿ ಮಾಡುತ್ತಾ)** ಅಗೋ ನೋಡು ಬಂದ್ಳು. **(ಬಾಗಿಲ ಕಡೆ ನೋಡುತ್ತಾ ಕರೆಯುತ್ತಾಳೆ)** ಓ! ಗಟುವಿನ ಅಮ್ಮ **(ಉತ್ತರ ಸಿಕ್ಕಂತೆ)** ಬಾರೇ ಇಲ್ಲಿ. ಗಟು ಕಾಯ್ತಾ ಇದ್ದಾನೆ. **(ಗಟುವಿಗೆ)** ಈಗ್ಲೇ ಬರ್ತಾಳೆ. ಸರೀನಾ?

**(ಬಾಗಿಲಿನಿಂದ ಪರಜೀ ಸೇಠ್ ಬರುತ್ತಾನೆ. ತಲೆಯ ಮೇಲೆ ಬಿಳಿ ಪೇಟ, ಕೈಯಲ್ಲಿ ನಾರಿನ ಹಗ್ಗ ಹಾಗೂ ತೆಂಗಿನ ಕಾಯಿ. ಇದೆ. ಇನ್ನೊಂದು ಕೈಯಲ್ಲಿ ಮಿಠಾಯಿ ಗಂಟು)**

**ಡಾಹೀ ಬಾಯಿ** : - ನೆಂಟರಿಗೆಲ್ಲಾ ಸಂಸ್ಕಾರಕ್ಕೆ ಬನ್ನಿ ಅಂತ ಹೇಳಿ ಬಂದ್ರಲ್ಲಾ?

**ಸೇಠ್** : - ನಾಯಿಂದನ್ನ ಹೇಳಿ ಬಾ ಅಂತ ಕಳುಹಿಸಿದ್ದೇನೆ.

**ಡಾಹೀ ಬಾಯಿ** : - ಆ ಮೇಲೆ ಮಯಾಚನ್ ಸೇಠ್‌ದು ....?

**ಸೇಠ್** : - ಮನೆಯಿಂದ ಹೊರಟ ಕೂಡಲೇ ಒಳ್ಳೇ ಶಕುನ ಆಯ್ತು.

**ಡಾಹೀ ಬಾಯಿ** : - **(ಆನಂದದಿಂದ)** ವಾ ಹ ವಾ!

**ಸೇಠ್** : - ಮಯಾಚನ್ ಸೇಠ್ ನಿಶ್ಚಯ ಮಾಡಿಕೊಂಡೆ ಹೋಗು ಅಂದ.

**ಡಾಹೀ ಬಾಯಿ** : - **(ಅಧೀರವಾಗಿ)** ? ಹಾಗಾದರೆ ಏನಂತ ಹೇಳ್ದ?

**ಸೇಠ್**: - ಇನ್ನೊಂದೆರಡು ದಿನ ತಾಳು ಅಂದ. ಬೆಲ್ಲದ ಚೂರಾದ್ರು ಬಾಯಲ್ಲಿ ಹಾಕ್ಕೊಂಡು ಹೋಗು ಅಂದ. ತಿಲಕ ಇಡೋ ಶಾಸ್ತ್ರ ನಿನ್ನ ಮರ್ಜಿಗೆ ಬಂದ ಹಾಗೆ ಮಾಡು ಅಂದ.

**ಡಾಹೀ ಬಾಯಿ** : - ಮತ್ತೆ ನೀನೇನು ಮಾಡ್ದೇ?

**ಸೇಠ್** : - ಬೆಲ್ಲದ ಚೂರು ತಿಂದು. ತಿಲಕದ ಶಾಸ್ತ್ರ, ಶವ ಸಂಸ್ಕಾರ ಆದ ಮೇಲೆ ಮಾಡೋಣಾಂತ ಹೇಳಿ ಬಂದೆ.

**ಗಟು** : - ಅಮ್ಮಾ ....... **(ಅಳುತ್ತಾನೆ)**

**ಡಾಹೀ ಬಾಯಿ** : - **(ಪೂಸಿ ಮಾಡುತ್ತಾ)** ನೋಡು ಮಗು. ನಿನಗೆ ಹೊಸ ಸ್ಲೇಟ್ ಬೇಕು ತಾನೇ. **(ಒಳಗೆ ಹೋಗುತ್ತಿರುವ ಸೇಠ್‌ವನ್ನು ಕುರಿತು)** ನೋಡು ಗಟುಗೇ ಹೊಸ ಸ್ಲೇಟ್ ಬೇಕು.

**ಸೇಠ್** : - ಶವ ಸಂಸ್ಕಾರ ಮುಗೀಲಿ ತರೋಣ. ಜಾಣ ಮರಿ. ಸುಮ್ನಿರು. ನಿನಗೆ ಹೊಸ ಸ್ಲೇಟ್ ತರ್ತೀನಿ.

**(ತೆರೆ)**

# ಪಾತ್ರವರ್ಗ

ರೂಪಾಲಿ

ಶೂರ ಸಿಂಹ

ದೀಪ ಸಿಂಹ

ರಾಯ ಚಂದ್

ಪಯಾದಾ

**[ಮನೆಯ ಒಂದು ಕೋಣೆ. ಮೂಲೆಯಲ್ಲಿ ಇಟ್ಟಿಗೆ ಇಟ್ಟು ಒಲೆ ಮಾಡಲಾಗಿದೆ. ಒಲೆಯ ಮುಂದೆ ಅರ್ಧ ಸುಟ್ಟ ಬೆರಣಗಳ ರಾಶಿಯ ಮೇಲೆ ಚಿಕ್ಕ ಮುಚ್ಚಳದ ಕಸದ ಬುಟ್ಟಿ. ಪಕ್ಕದಲ್ಲಿ ಅನ್ನ ಬೇಯಿಸುವ ಪಾತ್ರೆ, ತಟ್ಟೆ, ಮರದ ಸೌಟು, ಚಮಚ, ನೀರಿನ ಪಾತ್ರೆ. ಒಲೆಯ ಮೇಲೆ ಮಡಕೆ ಇದೆ, ಒಲೆಯ ಮುಂಭಾಗದಲ್ಲಿ ಬೆರಣಿ ಉರಿಯುತ್ತಿದೆ.**

**ರೂಪಾಲಿ ಬರುತ್ತಾಳೆ, ವಯಸ್ಸು 20-30ರ ಒಳಗೆ, ಗೋದಿ ಬಣ್ಣ; ತಲೆ ಮತ್ತು ಬೆನ್ನಿನ ಮೇಲೆ ಹೊದ್ದಿಕೆ, ಅದರ ತುದಿ ಸೊಂಟಕ್ಕೆ ಸಿಗಿಸಿದೆ. ರಾಜಸ್ಥಾನಿ ಲಂಗ. ಮೊಣ ಕೈಯವರೆಗೂ ಬರುವ ಕುಪ್ಪುಸ. ಒಂದು ಕೈಯಲ್ಲಿ ಮರದ ಬಳೆ, ಇನ್ನೊಂದರಲ್ಲಿ ಏನೂ ಇಲ್ಲ, ಕಾಲಿನಲ್ಲಿ ಕಡಗ ಇಲ್ಲ, ರೂಪಾಲಿ ಬಗ್ಗಿ ಸೌಟು ತೆಗೆದುಕೊಂಡು ಅನ್ನವನ್ನು ನೋಡುತ್ತಾಳೆ]**

**ರೂಪಾಲಿ** : - **[ನೋಡುತ್ತಾ]** ರಾಯಚಂದ್ ಇದೆಂಥ ಅಕ್ಕಿ ಕೊಟ್ಟಿದ್ದಾನೆ? ಎಷ್ಟು ಬೇಯಿಸಿದರೂ ಇನ್ನೂ ಹಸಿ ಹಸಿಯಾಗಿದೆ.

**[ಇನ್ನಷ್ಟು ಬೆರಣಿ ಹಾಕುತ್ತಾಳೆ. ಅಷ್ಟರಲ್ಲಿ ಮಗ ಶೂರ ಸಿಂಹ ಬರುತ್ತಾನೆ. ಮಾಸಿದ ಶರಟು, ಕೈಯಲ್ಲಿ ಕಬ್ಬಿನ ತುಂಡು ಇದೆ. ಒಂದು ಕಾಲಲ್ಲಿ ಬೆಳ್ಳಿಯ ಕಡಗ ಇದೆ. ಎಡಗೈಗೆ ಕರಿಯ ದಾರ ಇದೆ, ಕುತ್ತಿಗೆಯಲ್ಲಿ ಟೀಕಾ ಇದೆ.]**

**ಶೂರಸಿಂಹ** : - ಅಮ್ಮಾ.

**ರೂಪಾಲಿ** : - ಇನ್ನೇನೋ ಈಗ?

**ಶೂರಸಿಂಹ** : - ನನಗೆ ಬೇಡ ಈಗ ಕಬ್ಬು, ತಗೋ

**ರೂಪಾಲಿ** : - ಇಷ್ಟೊಂದು ಕಬ್ಬು ತಗೊಂಡು ಬಾ ಅಂತ ಯಾರು ಹೇಳಿದರು ನಿನಗೆ?

**ಶೂರಸಿಂಹ**:- **(ಕಬ್ಬು ಬಿಸಾಡುತ್ತಾ)** ನಾನು ತಿನ್ನೋಲ್ಲ. ತಗೋ **(ತಕ್ಷಣ)**ಏನು ತಿನ್ನೋದು ಈ ಕಬ್ಬನ್ನು. ಕೊಳೆತು ಹೋಗಿದೆ.

**ರೂಪಾಲಿ** : - **(ನಕ್ಕು)** ತುಂಟಾ.

**ಶೂರಸಿಂಹ** : - ಅಮ್ಮ .... ಹಸಿಯುತ್ತೆ .... ಊಟ ಹಾಕು.

**ರೂಪಾಲಿ** : - ಕಬ್ಬು ತಿನ್ನು. ನಿನಗೆ ಬೇಡವಾಗಿದ್ರೆ ಬೊಗಸೆ ತುಂಬಾ ಜೋಳದ ಕಾಳನ್ನು ಆ ವ್ಯಾಪಾರಿ ಅಂಗಡಿಗೆ ಯಾಕೆ ಹಾಕಿ ಬಂದೆ?

**ಶೂರಸಿಂಹ** : - ನೀನು ತಾನೇ ಕೊಟ್ಟಿದ್ದು?

**ರೂಪಾಲಿ** : - ತಿನ್ನು ಅಂತ ತಾನೇ ನಾನು ಹೇಳ್ತಾ ಇರೋದು?

**ಶೂರಸಿಂಹ** : - ನನಗೆ ಹಿಡಿಸೊಲ್ಲ. ಬಾಯಲ್ಲಿ ಬೊಬ್ಬೆ ಬರುತ್ತೆ.

**ರೂಪಾಲಿ** : - **(ಕಬ್ಬನ್ನು ನೋಡುತ್ತಾ)** ಹಾಂ. ಇನ್ಯಾಕೆ ತಿನ್ನುತ್ತೀ. ಹೊಟ್ಟೆ ತುಂಬೋಯ್ತು ಅಂತ ಹೇಳು.

**ಶೂರಸಿಂಹ** : - ಊಟ ಹಾಕು. **(ನೆಲದ ಮೇಲೆ ಕೂತು ಕಾಲುಗಳನ್ನು ಉಜ್ಜುತ್ತಾನೆ)**

**ರೂಪಾಲಿ** : - ನೀನೆಲ್ಲೋ ಯಮದೂತ.

**ಶೂರಸಿಂಹ**: - ಹೊಟ್ಟೆ ತುಂಬಾ ಹಸಿಯುತ್ತೆ.

**ರೂಪಾಲಿ** : - ಬೆಲ್ಲ ಕೊಡಲೇನು. ಅನ್ನ ಆಗೋದು ಇನ್ನೂ ತಡ.

**ಶೂರಸಿಂಹ** : - ದಿನಾನೂ ಅನ್ನನೇ! ನನಗೆ ಈ ಅನ್ನ ಹಿಡಿಸೊಲ್ಲ. ನಾ ಊಟ ಮಾಡೊಲ್ಲ.

**ರೂಪಾಲಿ** : - ತಿನ್ನದೆ ಇದ್ರೇ ಬೇಡ ಹೋಗು. ಅಕ್ಕಿ ಹ್ಯಾಗೆ ಹಿಡಿಸುತ್ತೆ ಅಂತ ನಿಮ್ಮಪ್ಪನ ಕೇಳು ಹೋಗು. ಮಸಿ ಮುಖದೋನು ಆ ರಾಯ್ ಚಂದ್ ಕಣಜದಿಂದ ಒಂದು ಕಾಳು ಬಿಡದೆ ತೆಗೆದುಕೊಂಡು ಹೋದ. ನಮ್ಮ ಅದೃಷ್ಟಕ್ಕೆ ಬರೀ ಅಕ್ಕೀನೇ.

**ಶೂರಸಿಂಹ** : - **(ಜೋರಾಗಿ ಅಳುತ್ತಾ)** ಇಲ್ಲ, ನಾನು ತಿನ್ನೊಲ್ಲ, ತಿನ್ನಲ್ಲ.

**ರೂಪಾಲಿ** : - ನಿನಗಿಂತ ಉತ್ತಮರೂ ತಿನ್ತಾರೆ.

**ಶೂರಸಿಂಹ** : - ತರಕಾರಿ ಏನು ಮಾಡಿದ್ದಿ?

**ರೂಪಾಲಿ** : - ತರಕಾರಿನಾ? ಮನೇಲಿ ಎಷ್ಟು ತುಂಬಿದೆ ನೋಡು.

**ಶೂರಸಿಂಹ** : - ಹಾಗಾದ್ರೇ ಏನು ಹಾಕ್ಕೊಂಡು ತಿನ್ನಿ?

**ರೂಪಾಲಿ** : - ಮಥಾ ಕಾಕನ ಮನೆಯ ಮಜ್ಜಿಗೆ ಇದೆಯಲ್ಲಾ.

**ಶೂರಸಿಂಹ** : - ಆ ಮಜ್ಜಿಗೆ ನವಲಿನ ಕಣ್ಣೀರು ಇದ್ದಹಾಗಿದೆ. ಅದರಲ್ಲಿ ಒಂದು ತುತ್ತು ಗಂಟಲಲ್ಲಿ ಇಳಿಯೋಲ್ಲ.

**ರೂಪಾಲಿ** : - ಸಾಯಂಕಾಲದವರೆಗೆ ಒಂದು ಕಾಲು ಮಣ ಧೂಳು ಅಪ್ಪನ ಹೊಟ್ಟೆ ಸೇರಿರುತ್ತೆ. ಈ ಕುಮಾರನಿಗೆ ರಾಜ ಭೋಗ ಬೇಕು.

**(ಮತ್ತೆ ಅನ್ನ ನೋಡುತ್ತಾಳೆ. ಶೂರಸಿಂಹ ಅಳುತ್ತ ಇರುತ್ತಾನೆ)**

**ಶೂರಸಿಂಹ** : - ಹೂಂ. ಹೂಂ. ತುಂಬಾ ಹಸಿವು. ಊಟಾ.

**ರೂಪಾಲಿ** : - ತಟ್ಟೆ ಕೊಡು. ಆರಿಸಿ ಕೊಡ್ತೀನಿ.

**ಶೂರಸಿಂಹ** : - ಮಜ್ಜಿಗೇಲಿ ತಿನ್ನೊಲ್ಲ.

**ರೂಪಾಲಿ** : - ಇಲ್ದಿದ್ರೆ ಈ ಒಲೆ ಬೆಂಕೀಲಿ ತಿಂತಿಯೇನು?

**ಶೂರಸಿಂಹ** : - ಹೂಂ .... ಹೂಂ ... ಮಜ್ಜಿಗೆ ಬೇಡ.

**(ಎದ್ದು ನಿಂತು ತಟ್ಟೆ ತರುತ್ತಾನೆ. ಹಿಂದುಗಡೆ ಬಚ್ಚಿಟ್ಟುಕೊಂಡು ನಿಧಾನವಾಗಿ ಬರ್ತಾನೆ)**

**ರೂಪಾಲಿ** : - ಕೊಡೋ ಇಲ್ಲಿ.

**ಶೂರಸಿಂಹ** : - ಹಾಲು ಕೊಟ್ಬಿಡು.

**ರೂಪಾಲಿ**:- ಆಗಲಿ ನಿನಗೋಸ್ಕರ ಕಂದು ಬಣ್ಣದ ಎಮ್ಮೇ ತರ್ತೀನಿ.

**ಶೂರಸಿಂಹ** : - ಹಂಗಾದ್ರೆ .... ಹಂಗಾದ್ರೆ ನಮ್ಮ ಒಳ್ಳೆ ಎಮ್ಮೇನ ಯಾಕೆ ಮಾರಿದ್ರಿ.

**ರೂಪಾಲಿ** : - ಹೋಗಿ ನಿಮ್ಮಪ್ಪನ ಕೇಳು. ನಾನು ಎಷ್ಟೋ ಬೇಡ ಅಂದೆ. ಕೇಳಬೇಕಲ್ಲ. ಗೌರವ ಉಳಿಸಿ ಕೊಳ್ಳೋದಿಕ್ಕೆ ಮಾರ್ಬಿಟ್ರು.

**ಶೂರಸಿಂಹ** : - ಇಲ್ಲ, ಇಲ್ಲ, ನನಗೆ ಹಾಲು ಬೇಕು.

**ರೂಪಾಲಿ** : - ಎತ್ತಿನಂಗೆ ಬೆಳೆದು ಬಿಟ್ಟಿದ್ದೀಯ? ಎಂಟು ವರ್ಷ ಆಯ್ತು ಇನ್ನೂ ತಿಳುವಳಿಕೆ ಬಂದಿಲ್ಲ. **(ಶೂರಸಿಂಹನ ಕೈ ಹಿಡಿದು)** ಕೊಡು ಇಲ್ಲಿ ತಟ್ಟೆ.

**ಶೂರಸಿಂಹ** : - **(ತಟ್ಟೆ ಬಿಸಾಕಿ)** ತಿನ್ನಲ್ಲ .... ತಿನ್ನಲ್ಲ. ಇಲ್ಲ **(ಹೊರಗೆ ಹೋಗಲು ತಿರುಗ್ತಾನೆ)**

**ರೂಪಾಲಿ** : - ತಗಳ್ಳೋ. ಬೆಲ್ಲ ಕೊಡ್ತೀನಿ.

**ಶೂರಸಿಂಹ** : - ರೊಟ್ಟಿ ಇದೆಯಾ?

**ರೂಪಾಲಿ** : - ಹಳಸಿದ್ದು ಇಲ್ಲ ಕಣ್ಣಪ್ಪ! ಮಧ್ಯಾಹ್ನ ...

**ಶೂರಸಿಂಹ** : - ಬೇಡ **(ಹಿಂದೆ ಜರಗುತ್ತಾನೆ)**

**ರೂಪಾಲಿ** : - **(ಕಣ್ಣೀರು)** ಈ ರಾಯಚಂದ ಯಾವ ಜನ್ಮದ ಶತ್ರುವೋ ಕಾಣೆ. ನಮ್ಮದನ್ನ ನಾನು ಉಣ್ಣೋದಿರ್ಕ್ಕೋ ಬಿಡೋಲ್ಲ. ಪಾಪ ಈ ಮಗೂಗೆ ಏನು ಗೊತ್ತು? ನನ್ನ ಕೇಳ್ದೆ ಮತ್ಯಾರನ್ನು ಕೇಳಿಯಾನು? ಅಯ್ಯೋ, ದೇವರೇ ನಮ್ಮ ಮೇಲಿಲ್ಲದಿದ್ದರೂ ಈ ಮಗೂನ ಮೇಲೆ ದಯ ತೋರಿಸು.

**(ದೀಪ ಸಿಂಹ ಬರುತ್ತಾನೆ, ರೂಪಾಲಿ ಕಣ್ಣೀರು ಒರೆಸುಕೊಳ್ಳುತ್ತಾಳೆ. ದೀಪ ಸಿಂಹ ನವ ಯುವಕ. ತಲೆಯ ಮೇಲೆ ರುಮಾಲು, ತೋಳಿಲ್ಲದ ಅಂಗಿ, ನಾಲ್ಕಾರು ದಿನ ಬೆಳೆದ ಗಡ್ಡ. ಬರಿಗಾಲು ಧೂಳಿನಿಂದ ತುಂಬಿದೆ, ಮುಖದಲ್ಲಿ ವಿಷಾದ)**

**ರೂಪಾಲಿ** : - ನೀನು ಹಳ್ಳೀಲ್ಲೇ ತಿರುಗಾಡ್ತಿರು.

**ದೀಪಸಿಂಹ** : - ನಮ್ಮ ಎತ್ತಿಗೆ ಸ್ವಲ್ಪ.

**ರೂಪಾಲಿ** : - ಒಂದು ಸರಿಯಾಗಿದೆಯಲ್ಲ. ಇನ್ನೊಂದನ್ನ ಬಾಡಿಗೆ ತೆಗೆದುಕೊಂಡು ಬಾ. ಮಳೆ ಬರೋ ಹಾಗಿದೆ. ಇಂದೋ ನಾಳೇನೋ ಹೊಲ ಉತ್ ಬಿಟ್ರೇ .......

**ದೀಪಸಿಂಹ** : - ಉತ್ತಾಯ್ತಲ್ಲ.

**ರೂಪಾಲಿ** : - ಹಾಗಾದ್ರೆ ಈಗ.

**ದೀಪಸಿಂಹ** : - ಬೀಜ, ಬೀಜ.

**ರೂಪಾಲಿ** : - ಇನ್ನೊಂದೆರಡು ಸಲ ಉಳು. ಚೆನ್ನಾಗಿ ಉತ್ತರೆ ಬೆಳೆ ಚೆನ್ನಾಗಾಗುತ್ತೆ. ತಲೆ ಮೇಲೆ ಎಷ್ಟು ಜನರ ಸಾಲದ ಹೊರೆ ಇದೆ!

**ದೀಪಸಿಂಹ** : - ಅದು ಇದ್ದದ್ದೇ.

**ರೂಪಾಲಿ** : - ಇರ್ಲಿ, ಎಷ್ಟಿದೆ ಹೇಳು?

**ದೀಪಸಿಂಹ** : - ನಾಲ್ಕೈದು ಜನರದ್ದು.

**ರೂಪಾಲಿ** : - ರಾಮ್ ಚಂದ್ ಕಾಕಾದು ತೀರಿ ಹೋಗಿದೆ ತಾನೇ ....?

**ದೀಪಸಿಂಹ** : - ತೀರಿ ಹೋಗ ಬೇಕು. ತಗೊಂಡಿದ್ದು ಇನ್ನೂರು ... ಅವರ ಬಡ್ಡಿ, ಎರಡು ವರ್ಷದಿಂದ ಬಡ್ಡಿನೂ ಕೊಟ್ಟಿಲ್ಲ. ಅದನ್ನೂ ಸೇರಿಸಬೇಕು ತಾನೇ? ಮುನ್ನೂರು .... ಅಷ್ಟೆ ಒಟ್ಟು ...... ಆದರೂ ಇನ್ನೂರೈವತ್ತು. ಹೋದ ವರ್ಷ ಬಂದ ಬೆಳೆ ಒಂದು ಕಾಳು ಇಲ್ಲದೆ ಎಲ್ಲಾ ಕೊಟ್ಟೆವಲ್ಲ.

**ರೂಪಾಲಿ** : - ಈಗ ಇದೊಂದು ಚಿಂತೆ ಆಯ್ತಲ್ಲಾ, ಎತ್ತಿಗೆ ಕಾಹಿಲೆ, ಇರಲಿ ಊಟ ಬಡಿಸಲೇನು ?

**ದೀಪಸಿಂಹ** : - ಸೂರಿಯ ತಿಂದನೇನು?

**ರೂಪಾಲಿ** : - **(ನಕ್ಕು)** ನಿನ್ನ ಕುಮಾರನ? ಅವನಿಗೆ ಹಾಲು ಬೇಕಂತೆ. ಒಳ್ಳೇ ಹಾಲು ಕೊಡೋ ಹಸು ತಾ.

**ದೀಪಸಿಂಹ** : - **(ನಿಟ್ಟುಸಿರು)** ಚೆನ್ನಾಗಿ ಹಾಲು ಕೊಡೋ ಹಸು. ಸ್ವಲ್ಪನಾದ್ರೂ ಮನಸ್ಸಿಗೆ ನೆಮ್ಮದಿ ದೊರೆತ್ರೇ ....

**ರೂಪಾಲಿ** : - **(ಎದ್ದು ನಿಂತು)** ನೋಡು ಈ ಅಕ್ಕಿನಾ? ರಾಯ್ ಚಂದ್ ಕಾಕ ಮನುಷ್ಯನೋ?

ಪ್ಯಗನೋ? ಅಕ್ಕಿಲೀ ದುರ್ವಾಸನೆ ಬರ್‍ತಾ ಇದೆ. ಉಜ್ಜೋಕೆ ಹೋದ್ರೆ ಹಿಟ್ಟಿಟ್ಟಾಗುತ್ತೆ. ಹಣ ಕೊಟ್ರು ತಿಪ್ಪೇಲಿ ಬಿಸಾಕೊಂತಾದ್ದುನ್ನ ಕೊಟ್ಟಿದ್ದಾನೆ.

**ದೀಪಸಿಂಹ** : - ನನಗ್ಯಾಕೋ ಊಟ ಮಾಡಕ್ಕೂ ಮನಸ್ಸಿಲ್ಲ.

**ರೂಪಾಲಿ** : - ಎತ್ತಿನ ಚಿಂತೇನಾ? ಸೇರಿದಷ್ಟು ತಿಂದು ಮುಗಿಸು. ದೇವರು ಒಳ್ಳೇದು ಮಾಡಿಯಾನು.

**ದೀಪಸಿಂಹ** : - **(ಎದ್ದು ನಿಂತು )** ದುರ್ಭಿಕ್ಷದಲ್ಲಿ ಅಧಿಕ ಮಾಸ.

**ರೂಪಾಲಿ** : - ಅದಕ್ಕಾಕೆ ಇಷ್ಟು ಬೇಜಾರು. ಎರಡು ಮೂರು ವರ್ಷದಲ್ಲೆ ಎಲ್ಲಾ ಸರಿಹೋಗುತ್ತೆ. ಸ್ವಲ್ಪ ಮಳೆ ಆಗಲಿ.

**ದೀಪಸಿಂಹ**:- ಬಾಗಿಲ ಬಳಿ ದಿನಾ ಬರ್‍ತಾರಲ್ಲ, ನಮ್ಮನ್ನು ಶಾಂತಿಇಂದು ಇರಕ್ಕೆ ಬಿಡ್ತಾರಾ? ಮರ್ಯಾದೆ ಹೋದ ಮೇಲೆ ಯಾಕೆ ಬದುಕಬೇಕು?

**ರೂಪಾಲಿ** : - ಮರ್ಯಾದೆ ..... ಯಾರ ಮನೆಗೆ ಕನ್ನ ಹಾಕದ್ದಿ? ಯಾರ ತಲೆ ಒಡದ್ದಿ? ಮರ್ಯಾದೆ ಹೋಗಕ್ಕೆ.

**ದೀಪಸಿಂಹ** : - ನನ್ನ ತಲೇ ಮೇಲೆ .... ತಲೇ ಮೇಲೆ. **(ನಗುತ್ತಾನೆ)**

**ರೂಪಾಲಿ** : - ತಲೆ ಮೇಲೆ ಒಂದು ಸುಂದರವಾದ ಹಕ್ಕಿ ಕೂತಿದೆ. ಇದು ಒಳ್ಳೆ ಶಕುನ. ಸುಮ್ನೇ ಊಟ ಮಾಡು.

**ದೀಪಸಿಂಹ** : - ನೋಟಿಸು. ರಾಯ್‌ಚಂದ್ ಕಾಕ ಕೊಟ್ಟಿದ್ದಾನೆ. ಸಾಯಂಕಾಲಾನೋ ಬೆಳಗ್ಗೇನೋ ಈ ಮನೇನಾ ...... ಮುಟ್ಟಗೋಲು.

**ರೂಪಾಲಿ** :- ಮುಟ್ಟಗೋಲು? ರಾಯ್‌ಚಂದ್ ಕಾಕಾನ ನಾವು ಯಾವತ್ತು ಬರೀ ಕೈಯಲ್ಲಿ ಕಳುಹಿಸಿದ್ದೇವೆ ಆದ್ರೂ ನೋಟಿಸ್ ಕೊಟ್ಟಿದ್ದಾನಾ?

**ದೀಪಸಿಂಹ** : - ಆದ್ರೂ ... ಆದ್ರೂ.

**ರೂಪಾಲಿ** : - ರಾಯ್‌ಚಂದ್‌ಗೆ ಯಾಕೆ ಸಾವು ಬರೋಲ್ವೋ ನಾ ಕಾಣೆ.

**ದೀಪಸಿಂಹ** : - ಕೇಳಿಲ್ಲಿ. ಚೋರಾನ ಬೈಠಕ್‌ನಲ್ಲಿ ಕೂತಿದ್ದ. ಅಲ್ಲೇ ಲೆಕ್ಕ ಕೇಳಿದೆ.

**ರೂಪಾಲಿ** : - ಸರಿ, ಅವನೇನಂದ?

**ದೀಪಸಿಂಹ** : - ಏನೋ ಬಹಳ ಸಾಹುಕಾರನ ತರಹ ಮಾತಾಡ್ತೀಯಲ್ಲ. ತೆಗಿ 75ರೂ ಅಂದ.

**ರೂಪಾಲಿ** : - **(ಬೆಚ್ಚಿ)** 75 ರೂ? ಯಾವುದಂತೆ?

**ದೀಪಸಿಂಹ** : - ನಾನು ಅದೇ ಕೇಳ್ದೆ, ಯಾವ್ದು ಅಂತ?

**ರೂಪಾಲಿ** : - ಆಮೇಲೆ.

**ದೀಪಸಿಂಹ** :- ಜಗಳ ಆಯ್ತು. ಠಾಣೆಗೆ ಹೋಗಿ ದಾವಾ ಹಾಕ್ಬಿಟ್ಟ. ಮುಟ್ಟಗೋಲು ರೂಪ! ಮುಟ್ಟಗೋಲು ನೋಟಿಸು! ಈ ಮನೆ, ಪಾತ್ರೆ ಪಡಗ, ಈ ಸಾಮಾನುಗಳು, ಹಿರಿಯರ ಈ ಮನೆ ... ಅಪ್ಪನ ಮಂಚ .....

**ರೂಪಾಲಿ** : - ಇವೆಲ್ಲಾ ಈಗ ರೂಪಾಗೋಸ್ಕರ ಇದೆಯೇನು?

**ದೀಪಸಿಂಹ** :- ಇಲ್ಲ, ಇಲ್ಲ ರೂಪ, ನೋಟಿಸು ತರೋನು ಬ್ರಾಹ್ಮಣನಾದ್ರೂ ಕೆಲಸದಲ್ಲಿ ಕಟುಕ.

**ರೂಪಾಲಿ** :- ಇದೆಲ್ಲಾ ಮೊದಲೇ ಯೋಚಿಸ್ಕೊಂಡಿದ್ದ ಅಂತ ಕಾಣುತ್ತೆ. ಇಲ್ಲಿ ಏನಾಗುತ್ತೆ ನೋಡೋಣ. ಅನ್ನಕ್ಕೆ ಮಜ್ಜಿಗೆ ಹಾಕಲಾ?

**(ಹೊರಗೆ ಧ್ವನಿ ಕೇಳುತ್ತದೆ)**

**ಧ್ವನಿ** :- ದೀಪಸಿಂಹ, ದೀಪಸಿಂಹ. **(ಉತ್ತರ ಬರೋಲ್ಲ)**ಬಡ್ಡಿ ಮಕ್ಳು ಕೀಳು ಜಾತಿಯವರು ತಾನೇ. ಮನೇಲಿದ್ರೂ ಮಾತಾಡಲ್ಲ. ಏನು. ಎಲ್ಲಾ ಸ್ಮಶಾನಕ್ಕೆ ಹೋಗಿದ್ದಾರಾ?

**ರೂಪಾಲಿ** : - ಸ್ವಲ್ಪ ಯೋಚನೆ ಮಾಡಿ ಮಾತಾಡು.

**ಧ್ವನಿ** : - ಅರೇ ಇವಳ. ತಲೆ ಕೆಟ್ಟಿದೆ. ಇವಕ್ಕೆ ಸಾಲ ಕೊಟ್ಟು ವೈರ ಕಟ್ಕೊಂಡಾಯಿತು. ತೆಗೆದುಕೊಳ್ಳುವಾಗ ನಾಯಿಗಳು. ಕೊಡುವಾಗ ಹುಲಿಗಳು. ಪ್ರಪಂಚದ ನ್ಯಾಯ ನೋಡು.

**ರೂಪಾಲಿ** : - ಒಳಗೆ ಬಾ

**(ಸೇಠ್ ರಾಯ್‌ಚಂದ್ ಪ್ರವೇಶಿಸುತ್ತಾನೆ. ಮುದಿ ವಯಸ್ಸಾದರೂ ಗಟ್ಟಿಮುಟ್ಟಾದ ಶರೀರ. ತಲೆ, ಮೀಸೆ, ಗಡ್ಡದ ಕೂದಲು ಬೆಳ್ಳಗಾಗಿವೆ. ಬೆಲೆ ಬಾಳುವ ಅಂಗಿ. ತಲೆಯ ಮೇಲೆ ಮಾರವಾಡಿ ರುಮಾಲು. ಕಾಲಲ್ಲಿ ಚರ್ಮದ ಪಾದರಕ್ಷೆ. ಕೊಂಕಳಲ್ಲಿ ಬಟ್ಟೆಯಲ್ಲಿ ಸುತ್ತಿದ ಲೆಕ್ಕದ ಪುಸ್ತಕ)**

**ರಾಯ್ ಚಂದ್** : - ಬಡ್ಡೀ. ಮಗನೆ, ಮೋಸಗಾರ **(ರೂಪಾಲಿ ಸೆರಗಿನಿಂದ ಮುಖ ಮುಚ್ಚಿಕೊಳ್ಳುತ್ತಾಳೆ)**

**ರೂಪಾಲಿ** : - ಕಾಕಾ. ನಾಲಿಗೆ ಹಿಡಿದು ಮಾತಾಡು.

**ರಾಯ್ ಚಂದ್** : - ನಾನೇನು ಬೈದನೇನು? ನಿನಗೆ ಲೆಕ್ಕ ತಾನೇ ಬೇಕು. **(ದೀಪಸಿಂಹ ಮನೆಯ ಮಧ್ಯೆ ನಿಂತಿರುತ್ತಾನೆ)** ಬಾರೋ ಈ ಕಡೆ. ನಾನೇನೋ ನಿನಗೆ ಕೇಡು ಮಾಡಿದ್ದು? ನಾಲ್ಕು ಜನರ ಮುಂದೆ ಅವಮಾನ ಮಾಡಿದ್ನಲ್ಲ? ನಾನು ನಿನಗೆ ಬಡ್ಡಿಗೆ ಹಣ ಕೊಟ್ಟಿದ್ದು ತಪ್ಪಾಯ್ತ? ಊರಲ್ಲಿ ಬೇರೆಯವರಿಗೆ ಕೊಟ್ಟಿದ್ರೆ ಒಂದುವರೆಯಷ್ಟು ಬಡ್ಡಿ ಬರ್ತಿತ್ತು.

**ದೀಪಸಿಂಹ** : - ಒಂದುವರೆಯಷ್ಟು?

**ರಾಯ್ ಚಂದ್** :- ನನ್ನ ಖಾತೆ ತೆಗೆದು ನೋಡು. ಇವನು ಊರಿನ ಪಟೇಲ. ನಿನೊಬ್ಬನೇ ಅಲ್ಲ. **(ಮನೆಯ ವಸ್ತುಗಳನ್ನು ನೋಡುತ್ತಾರೆ)** ನೀನೋ. ನಿನಗಿಂತ ದನ ಕಾಯೋನು ಮೇಲು. ಇದೇ ಬಡ್ಡಿಗೆ ಹಾಲು, ತುಪ್ಪ, ಮಿಠಾಯಿ ಬರುತ್ತೆ. ನಿನ್ನ ನಿಯತ್ತೇ ಸರಿಯಾಗಿಲ್ಲ. ಬಿಟ್ಟಿ ತಿನ್ನೋದು, ಮಲಗೋದು.

**ರೂಪಾಲಿ** : - ಕಾಕಾ, ನಾನು ಕರಿಲಿಲ್ಲ ಅಂತ ಅನ್ಬೇಡ ಹೆಂಗಸಿನ ಬಾಯಿ ಮಾತು.

**ರಾಯ್ ಚಂದ್** :- ನೋಡು ದೀಪಸಿಂಹ, ನಿನಗೆ ಸಾಲ ಕೊಟ್ಟು ನಾನು ವೈರಿಯಾಗಿ ಬಿಟ್ಟೆ ನಂಗೆ ಬೇಕಾದ್ದು ಹಣ. ಕೊಡು ನಾನು ಹೋಗ್ತೀನಿ.

**ದೀಪಸಿಂಹ** : - ಕಾಕಾ, ಒಂದೊಂದು ಕಾಳು ನಿನಗೆ ಕೊಟ್ಬಿಟ್ಟೆ. ಈಗ?

**ರಾಯ್ ಚಂದ್** : - ಬಡ್ಡಿ.

**ದೀಪಸಿಂಹ** : - ಬಡ್ಡಿ ಇಲ್ಲ. ಇರೋದು ಮೈಯಿನ ಮೂಳೆ, ಮಾಂಸ.

**ರಾಯ್ ಚಂದ್** : - ನಾಲ್ಕು ಜನರ ಮುಂದೆ ಹೇಳ್ಳೋ ಇಲ್ವೋ. ಈಗ ಕೊಡು.

**ದೀಪಸಿಂಹ** : - ಈಗ ನನ್ನ ಹತ್ರ ಏನೂ ಇಲ್ಲ.

**ರಾಯ್ ಚಂದ್** : - ಏನಾದ್ರೂ ಗಿರಿವಿ ಇಡು. ನನಗೆ ನನ್ನ ದುಡ್ಡು .....

**(ರೂಪಾಲಿಯನ್ನು ಓರೇ ನೋಟದಿಂದ ನೋಡುತ್ತಾನೆ)**

**ರೂಪಾಲಿ** : - **(ಸಿಟ್ಟಿನಿಂದ)** ಲುಚ್ಛ. ಇಲ್ಲಿಂದ ಮೊದಲು ತೊಲಗು. ನಾಳೆ ಸಾಯಂಕಾಲದ ಒಳಗೆ ಏನಾದ್ರು ಮಾಡಿ ನಿನ್ನ ಸಾಲ ತೀರಿಸ್ತೀನಿ.

**ರಾಯ್ ಚಂದ್** : - ವಾ ಹ ವಾ. ಇದಕ್ಕಿಂತ ಇನ್ನೇನು ಬೇಕು? ನೋಡ್ದ್ಯಾ ಇವಳ ಗತ್ತು. ಇದರಲ್ಲಿ ನಾನು ಸಾಯಬೇಕಾ? ಮನೆ ಮುಟ್ಟಗೋಲು ಹಾಕ್ತೀರು. ನಾಳೆ ನೋಟಿಸ್ ಬರುತ್ತೆ. ಆಗ ಗೊತ್ತಾಗುತ್ತೆ ನಿನ್ನ ರಾಣಿಯ ಹಾರಾಟ ಎಷ್ಟು ಅಂತ. ( **ಹೋಗುತ್ತಾನೆ)**

**ರೂಪಾಲಿ** : - ಈಗ ಎಷ್ಟು ಕೊಡಬೇಕು?

**ದೀಪಸಿಂಹ** : - ನಾಲ್ಕು ಇಪ್ಪತ್ತುಗಳಿಗೆ .....ಐದು ಕಮ್ಮಿ.

**ರೂಪಾಲಿ** : - ಹೆಂಗಾದ್ರು ಮಾಡಿ ತಗೊಂಡು ಬಾ. ಆ ರಾಕ್ಷಸ ನಮ್ಮ ಮನೆಗೆ ಬರಬಾರ್ದು. ಅವನ ನೋಟ ನೋಡಿದ್ಯಾ? ಸರಿ ಬಿಡು. ಎಲ್ಲಾ ಸರಿ ಹೋಗುತ್ತೆ. ನೋಟಿಸ್ ಬಂದ ಮೇಲೆ ನೋಡೋಣ. ನೋಟಿಸ್ ತರುವವನ ಕೈಕಾಲು ಹಿಡಿದು ಒಪ್ಪಿಸಿದರಾಯ್ತು.

**ದೀಪಸಿಂಹ** : - ನನಗ್ಯಾಕೋ ಅಳು ಬರುತ್ತೆ.

**ರೂಪಾಲಿ** : - ಒಂದು ಮಗುವಿನ ತಂದೆ ಆದ್ರೂ ಇನ್ನೂ ಮಗುನಂತೆ ಅಳ್ತೀಯಲ್ಲ.

**ದೀಪಸಿಂಹ** : - ನನಗೆ ........

**ರೂಪಾಲಿ** : - ಒಂದು ನೋಟಿಸ್ ತಾನೆ? ಊರಲ್ಲಿ ನಮ್ಮನೆಗೆ ಮಾತ್ರ ಬಂದಿರೋದು. ನಮಗೆ ಏಕೆ ಈ ಸ್ಥಿತಿ ಬಂತು? ಭೂಮಿ ಒಣಗ್ಹೋಯ್ತು. ನಾವು ಅಂದುಕೊಂಡಷ್ಟು ಧಾನ್ಯ ಬರಲಿಲ್ಲ. ಅದಕ್ಕೆ ತಾನೆ ಈ ಕಷ್ಟ. ನಾವು ಹಗಲು ರಾತ್ರಿ ದುಡಿದ್ದಿದ್ದೇವೆ. ನಮ್ಮ ಅದೃಷ್ಟ. ಏನು ಮಾಡಕ್ಕಾಗುತ್ತೆ. ನಡಿ...........ನಡಿ

**ರಾಯ್ ಚಂದ್** : - **(ಪ್ರವೇಶಿಸುತ್ತಾ)** ನೋಡಿದ್ರಾ ಸ್ವಾಮಿ. ನಿಯತ್ತು ಇಲ್ದೆ ಇದ್ರೆ ಧಾನ್ಯ ಎಲ್ಲಿಂದ ಬಂತು? ಮಣ್ಣು. ಮಣ್ಣು ಬರುತ್ತೆ ಅಷ್ಟೆ. ನೀವು ಸ್ವಲ್ಪ ತಡ ಮಾಡಿ ಬಂದಿದ್ರೆ ಈ ಸಾಹುಕಾರ ಪಾತಾಳ ಲೋಕದಲ್ಲಿ ಸೇರಿ ಬಿಡ್ತಿದ್ದ. ನೀವು ಹುಡುಕ್ತಾ ತಿರುಗ ಬೇಕಾಗಿತ್ತು.

**(ರೂಪಾಲಿ ಗಾಬರಿ ಆಗ್ತಾಳೆ, ದೀಪಸಿಂಹನ ಬಳಿ ಕುತ್ಕೋತಾಳೆ. ರಾಯ್ ಚಂದ್ ಮನೆಯ ಒಳಗೆ ಬರುತ್ತಾನೆ)**

**ರಾಯ್ ಚಂದ್** : - ಬನ್ನಿ ಸ್ವಾಮಿ. ಒಳಗೆ ಬನ್ನಿ. ಮನೆಯಲ್ಲಿ ಹಾಸೋದಕ್ಕೆ ಏನೂ ಇಲ್ಲ. ಬನ್ನಿ. ಒಳಗೆ ಬನ್ನಿ ಸ್ವಾಮಿ.

**(ರಾಯ್ ಚಂದ್ ಒಳಗಿನಿಂದ ಹಗ್ಗದ ಮಂಚ ತಂದು ಹಾಕ್ತಾನೆ. ನೋಟಿಸು ತಂದಿರೋನು ದರ್ಪದಿಂದ ಒಳಗೆ ಬರುತ್ತಾನೆ. ತಲೆಯ ಮೇಲೆ ಕರಿಯ ಉಣ್ಣೆ ಟೋಪಿ, ಖಾಕಿ ಕೋಟು, ಕೈಯಲ್ಲಿ ಬೆತ್ತ. ಬಾಯಲ್ಲಿ ಸಿಗರೇಟು. ಅವನ ಹಿಂದೆ ಜವಾನ ಫೈಲ್ ಹಿಡಿದು ನಿಂತಿದ್ದಾನೆ. ಮಂಚದ ಮೇಲೆ ಕೂಡುತ್ತಾನೆ.)**

**ರಾಯ್ ಚಂದ್** : - ಸ್ವಾಮಿ. ಹಣ ಕೊಟ್ಟು ವೈರಿಗಳಾದ್ವಿ. ಇನ್ನು ಇವನ ಹತ್ತಿರ ಏನು ಸಂಬಂಧ? ಮನೆಯವರ ಹಾಗೆ ಇದ್ದೆ. ಈಗ ........?

**ದೂತ** : - ಎಷ್ಟು ಎಕರೆ ಜಮೀನಿದೆ?

**ದೀಪಸಿಂಹ** : - **(ಯೋಚಿಸಿ)** ಎಲ್ಲಾ ಸೇರಿ 15 ಎಕರೆ ಇರಬಹುದು.

**ದೂತ** : - ನಿಜ ಹೇಳು? ಈ ಖಾತೆ ನೋಡು. ಇದರಲ್ಲಿ ನಿನಗೆ ಸೇರಿದ್ದೆಲ್ಲಾ ........... ಹಣ ಎಷ್ಟು ತೊಗೊಂಡಿದ್ದೀಯಾ?

**ರಾಯ್ ಚಂದ್** :- ಇದೇನು ಸ್ವಾಮಿ. ಇವನ್ಯಾಕೆ ಕೇಳ್ತೀರಾ? ಹೆಂಗಸಿನ ದರ್ಬಾರು. ರಾಣಿ ವಿಕ್ಟೋರಿಯ ದರ್ಬಾರು ಇವಳದ್ದು ಇಲ್ಲಿ

**ದೂತ** :- **(ದರ್ಪದಿಂದ)** ಸೇರ್ **(ಸೇಠ್‌ಗೆ ಅರ್ಥವಾಗಿತ್ತು)** ಅದಿರಲಿ. ನೀನು ಯಾರ್ಯಾರಿಗೆ ಎಷ್ಟು ಕೊಡಬೇಕು?

**ದೀಪಸಿಂಹ** :- ಸುಮಾರು ಒಂದು ಒಂದುವರೆ ಸಾವಿರ ಇರಬಹುದು ಸ್ವಾಮಿ.

**ದೂತ** :- ನಿನ್ನ ಸಾಲ ಎಷ್ಟಿದೆ ಅಂತ ನಿನಗೇ ಗೊತ್ತಿಲ್ವ? ವಿಚಿತ್ರ ಮನುಷ್ಯ.

**ರಾಯ್ ಚಂದ್** :- ಇವಳನ್ನ ಕೇಳಿ ಸ್ವಾಮಿ. ಇವಳದೇ ದರ್ಬಾರು ಇಲ್ಲಿ.

**ದೂತ** :- ಇದರಲ್ಲಿ ಸೇಠ್‌ಗೆ ಎಷ್ಟು ಕೊಡಬೇಕು?

**ದೀಪಸಿಂಹ** :- ಒಂದು ಕಾಸು ಇಲ್ಲ.

**ರೂಪಾಲಿ** :- **(ಮಧ್ಯೆ ಬಾಯಿ ಹಾಕಿ )** ಏನೂ ಇಲ್ಲ. ನಮ್ಮ ಹೊಟ್ಟೆ ಬಟ್ಟೆ ಕಟ್ಟಿ ಎಲ್ಲಾ ತೀರಿಸಿದ್ದೇವೆ.

**ದೂತ** :- ಅಂದ್ರೇ ಇವನು 75 ರೂ ಕೊಡಬೇಕು ಅಂತ ದಾವಾ ಹಾಕಿದ್ದಾನಲ್ಲ. ಯಾರ್ದು ನಿಜ. ನಿಂದೋ. ಅವನ್ದೋ.

**ರಾಯ್ ಚಂದ್** :- ಇವನು ನಿಯತ್ತು ಬಿಟ್ಟವನು ಸ್ವಾಮಿ. ನೋಡಿ ನನ್ನ ಖಾತೆ ಎಲ್ಲಾ ಬರೆದಿದ್ದೇನೆ.

**ದೂತ** :- ಏನು ಕೊಡ ಬೇಕಾಗಿಲ್ಲ ಅಂದ್ರೇ. ಈ ಸಾಲ ಎಲ್ಲಿಂದ ಬಂತು? **(ದೀಪಸಿಂಹ ಸುಮ್ಮನಿರುತ್ತಾನೆ)** ಹೇಳು ಮತ್ತೆ?

**ರಾಯ್‌ಚಂದ್** :- ಹೇಳು ಅಂದ್ರೆ ಏನು ಹೇಳ್ತಾನೆ. ಏನಿದೆ ಹೇಳಕ್ಕೆ?

**ರೂಪಾಲಿ** :- ಹೇಳೋಕೆ ಏನು ಅಡ್ಡಿ? ಏನೂ ಕೊಡಬೇಕಾಗಿಲ್ಲ.

**ರಾಯ್ ಚಂದ್** :- ಅರೇ ಅವಳು. ಗಂಡು ಬೀರಿ. ಸ್ವಾಮಿ ಇಲ್ಲಿದೆ ನೋಡಿ ನನ್ನ ಲೆಕ್ಕ ಪತ್ರ.

**ರೂಪಾಲಿ** :- ಕೇಳಿ ಸ್ವಾಮಿ. ಯಾಕೆ ಇಸ್ಕೊಂಡಿದ್ವೀಂತಾ?

**ರಾಯ್ ಚಂದ್** :- ಈಗ ಏನು ಪಿಟಿ. ಪಿಟಿ. ಅಂತಿ? ನಿನ್ನ ಗಂಡನ ಹೆಬ್ಬೆರಳು ನೋಡು.

**ರೂಪಾಲಿ** :- ಅದಿರಲಿ. ಇವನು ಯಾಕೆ ತೊಗಂಡಿದ್ದು ಹೇಳು?

**ರಾಯ್ ಚಂದ್** :- ನನಗೇನು ಗೊತ್ತು? ಋಣ. ಋಣ ಅಂತ ರೂಪಾಯಿ ಎಣಿಸಿ ಕೊಟ್ಟಿದ್ದೀನಿ.

**ರೂಪಾಲೀ** :- ನಿನ್ನ ಹತ್ತಿರ ನಗದು ಯಾವಾಗ ತೊಗೊಂಡ್ವಿ?

**ರಾಯ್ ಚಂದ್** :- ವಾರೆವಾಹ್. ಕಳ್ಳನೇ ಕೊತ್ವಾಲನಿಗೆ ಗದರಿಸಿದಂತೆ! ಲೋ ಸಾದುಲಾ. ಎಲ್ಲಿ ಸತ್ತೋದ್ಯೋ. ಸಾಹೇಬ್ರಿಗೆ ಚಹಾಗಿಹಾ ತಂದ್ಕೊಡೋ. ಹಾಗೇ ಒಂದು ಹತ್ತು ಸೇರು ಪೇಡಾ ಕಟ್ಕೊಡು. ಚಿಕ್ಕಮ್ಮನಿಗೆ ಹೇಳು ಸಾಹೇಬ್ರು ಇಲ್ಲೇ ಊಟ ಮಾಡ್ತಾರೇಂತ.

**ದೂತ** :- ಹಾಗಾದ್ರೆ ಕೋರ್ಟಿನಲ್ಲಿ ಯಾಕೆ ಒಪ್ಕೊಂಡೆ? ನಾನು ಮುನ್ಸೀಫ್ ಸಾಹೇಬರ ತಾಬೇದಾರ. ಹೇಳು ನಗದು ಕೊಡ್ತಿಯೋ ಇಲ್ವೋ?

**ರಾಯ್ ಚಂದ್** :- ಹೌದ್ರೀ. ನಗದೇ ಇರಲಿ.

**ದೀಪಸಿಂಹ** :- ಸ್ವಾಮಿ. ನಾನು ಕೋರ್ಟಿನಲ್ಲಿ ಹೇಳದ್ನಲ್ಲ. ನನ್ನ ಹತ್ತಿರ ನಗದಿಲ್ಲವೆಂದು.

**ರಾಯ್ ಚಂದ್** :- ಸ್ವಾಮಿ, ನಾವು ಲೇವಾದೇವಿ ಮಾಡೋ ಜನ, ನಮ್ಮ ಹೃದಯದಲ್ಲೂ ಸ್ವಲ್ಪ ದಯೇ ಇರುತ್ತೆ. ಇಲ್ದಿದ್ರೇ ಇಗಲೇ ಹಣ ವಸೂಲಿ ಮಾಡ್ತಾ ಇದ್ದೆ.

**ದೂತ** : - ಲೋ, ಸಾದೂಲಾ, ಎಲ್ಲಿ ಹೋದ ಈ ಜವಾನ?

**ರಾಯ್ ಚಂದ್** : - ಯಾಕೆ ಸ್ವಾಮಿ, ಅವನು ಹಾಲು ಪೇಡಾ ತರೋಕೆ ಮನೆಗೆ ಹೋದ. ಈ ಊರಿನ ಪೇಡ ಬೊಂಬಾಯಿಗೂ ಹೋಗುತ್ತೆ.

**ದೂತ** : - **(ದೀಪಸಿಂಹ, ರೂಪಾಲಿಗೆ)** ನೀವು ಒಂದ್ಕಡೆ ನಿಂತ್ಕೊಳ್ಳಿ. ಸೇಠ್, ಜವಾನನ್ನ ...

**ರಾಯ್ ಚಂದ್** : - ಸ್ವಾಮಿ, ನಾನೇ ಇದ್ದಿನಲ್ಲ, ಹೇಳಿ.

**ದೂತ** : - ಇವನನ್ನು ಇಲ್ಲಿಂದ ಹೊರಡಿಸು, ಇದನ್ನ ಹರಾಜು .

**(ದೀಪಸಿಂಹ ಕುಸಿಯುತ್ತಾನೆ. ರೂಪಾಲಿ ಮುಖದಲ್ಲಿ ನಿರಾಶೆ ತುಂಬಿ ಬರುತ್ತದೆ)**

**ರಾಯ್ ಚಂದ್** :- ಸ್ವಾಮಿ, ಇಲ್ಲಿ ಏನು ತಾನೇ ಸಿಕ್ಕೀತು. ಒಬ್ಬ ಬಡರೈತನ ಮನೆಯಲ್ಲಿ?

**(ಜವಾನ ಬರುತ್ತಾನೆ)**

**ದೂತ** : - ಲೋ, ಪಂಚಾಯ್ತಿದಾರರನ್ನ ಕರೆದು ತಾ.

**ರಾಯ್ ಚಂದ್** : - ಪಂಚಾಯ್ತಿದಾರರಿಗೆ ಇಲ್ಲೇನು ಕೆಲಸ ಸ್ವಾಮಿ? ಲೋ ಖುಶಾಲ್ ಠಾಕುರನ ಅಂಗಡಿಗೆ ಹೋಗಿ ಬಾದಾಮಿ ತಗೊಂಡು ಬಾ, ಹಾಲಿಗೆ ಕೇಸರಿ ಹಾಕ್ಕೊಂಡು ಬಾ.

**ದೂತ** : - **(ರೂಪಾಲಿಯನ್ನು ಕುರಿತು)** ಒಡವೆ ಏನಾದ್ರು ಇದೆಯೇನು?

**ರಾಯ್ ಚಂದ್** :- ಮನೇಲಿ ಚಿನ್ನದ ಗಣಿ ಇದೆ. ಚಿನ್ನ ಇಲ್ದೆ ಇದ್ರೆ ಬೆಳ್ಳಿನಾದ್ರೂ ಇರುತ್ತೆ. ಈ ಮನೆ ಸಂದಿ, ಸಂದಿಲೂ ನೋಡಿ. ಒಡವೆ ಬೇಕಾದ್ರೆ ಬೇಯುತ್ತಿರೊ ಅನ್ನದ ಮಡಕೇಲಿ ಇಟ್ಟಿರ್ತಾಳೆ. ನೋಡಿ ಸ್ವಾಮಿ. **(ಅನ್ನದ ಮಡಿಕೆಯ ಬಳಿ ಹೋಗಿ ಬೀಳಿಸುತ್ತಾನೆ)** ಸ್ವಾಮಿ, ನಾನು ಕೊಟ್ಟು ವೈರಿಯಾದೆ.

**(ಶೂರಸಿಂಹ ಬರುತ್ತಾನೆ)**

**ಶೂರಸಿಂಹ** : -ಅಮ್ಮ, ಅಮ್ಮ ......... ಊಟ.

**(ರಾಯ್‌ಚಂದ್ ಶೂರಸಿಂಹನು ತೊಟ್ಟಿರುವ ಆಭರಣಗಳನ್ನು ನೋಡಿ)**

**ರಾಯ್ ಚಂದ್** : - ನೋಡಿ ಸ್ವಾಮಿ, ನೋಡಿ. ಹುಡುಗನ ಕತ್ತಿನಲ್ಲಿ ಟೀಕಾ, ಕಾಲಲ್ಲಿ ಬೆಳ್ಳಿ ಅಂದುಗೆ ತೊಡಿಸಿ ಆಟ ಕಳ್ಸಿದ್ದಾನೆ.

**ದೂತ** : - **(ರೂಪಾಳಿಗೆ)**ಇವುಗಳನ್ನು ತೆಗಿಯಬೇಕಾಗುತ್ತೆ. **(ರೂಪಾಲಿ ಸ್ತಬ್ಧಳಾಗಿ ನಿಂತಿದ್ದಾಳೆ)**

**ರಾಯ್ ಚಂದ್** : - ಸ್ವಾಮಿ, ಮೆತ್ತಗಿದ್ದರೆ, ಕೆಲಸ ಆಗೊಲ್ಲ, ಇಂತವರ ಹತ್ತಿರ ಬಿಗಿಯಾಗಿಯೇ ಇರಬೇಕು. ಆಗ ದಾರಿಗೆ ಬರ್ತಾರೆ.

**(ರಾಯ್ ಚಂದ್ ಹುಡುಗನನ್ನು ಹಿಡಿದುಕೊಳ್ಳುತ್ತಾನೆ)**

**ದೂತ** : - ಸೇಠ್!

**ರಾಯ್ ಚಂದ್** : - **(ದೂತನ ಕಡೆ ನೋಡುತ್ತಾನೆ)** ನಿಮ್ಮ ಹತ್ರಾನೇ ಕರ್ಕೊಂಡು ಬರ್ತಿನಿ. ಈಗ ಪೂರ ಶತ್ರುಗಳಾಗಿ ಬಿಟ್ರು ಸ್ವಾಮಿ.

**(ಹುಡುಗನ ಕತ್ತಿನ ಟೀಕೆ ತೆಗೆಯಲು ಪ್ರಯತ್ನಿಸುತ್ತಾನೆ)**

**(ಹುಡುಗ ಕಿರುಚಿಕೊಂಡು ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಾನೆ)**

**ರಾಯ್ ಚಂದ್** : - ಏನೋ, ಬಹಳ ಬಲ ಇದೆಯಾ?

**ಶೂರಸಿಂಹ** : - ಓ! ಅಮ್ಮಾಲೇ.

**ರಾಯ್ ಚಂದ್** : - ಶತ್ರು, ಪಕ್ಕಾ ಶತ್ರು.

**ಶೂಪಸಿಂಹ** : - ಅಪ್ಪಾ .........ಆ **(ಅಳುತ್ತಾನೆ)**

**ರಾಯ್ ಚಂದ್** : - ಇವು ಒಂದು ಕೈಯಿಂದ ಬರೋಲ್ಲ. ಬಲ ಬೇಕು.

**(ಹುಡುಗನನ್ನು ಕಾಲ ಮಧ್ಯೆ ಹಿಡಿದು ಕೊಳ್ಳುತ್ತಾನೆ)**

**ಶೂರಸಿಂಹ** : - ಅಮ್ಮಾ ..... ಸತ್ತೇ..... ಅಮ್ಮಾ.

**ರೂಪಾಲಿ** : - **(ದೂತನಿಗೆ)** ಸ್ವಾಮಿ, ಹುಡುಗನನ್ನು ಬಿಡಿಸಿರಿ. ಹೋಗು. ಈ ರಾಕ್ಷಸನ ಹಣ ಬಟ್ಟೆ ಸಮೇತ ಕೊಟ್ಬಿಡು. ಮನೆ, ಮಠ, ಭೂಮಿ ಎಲ್ಲಾ ಗಿರವಿ ಇಡು. ಈ ಪಾಪಿಯ ಮೊರೆ ಮತ್ತೆ ಇಲ್ಲಿ ಕಾಣಬಾರದು.

**ರಾಯ್ ಚಂದ್** : - ನೋಡಿದ್ರಾ ಸ್ವಾಮಿ.

**ದೂತ** : - **(ಗಂಭೀರವಾಗಿ)** ಏನು?

**ರಾಯ್ ಚಂದ್** : - ಇವೆಲ್ಲಾ ನಾಟಕ ಸ್ವಾಮಿ, ನಾಟಕ. ಈ ರಾಣಿ ಹತ್ರಾನೂ ಏನಾದ್ರೂ ಇರಬಹುದು. ನೋಡಿದ್ರಾ ಎಂಥ ನಾಚ್ಕೆ. ಮುಖದ ಮುಂದೆ ಎಷ್ಟೊಂದು ಉದ್ದ ಸೆರಗು ಬಾಚಿದ್ದಾಳೆ.

**ರೂಪಾಲಿ** : - ಕಾಕಾ, ನಿನಗೆ ಹಣ ತಾನೇ ಬೇಕಾಗಿರೋದು. ಹೋಗು ಯಾರನ್ನಾದ್ರು ಜಾಮಿನಿಗೆ ಕರ್ಕೊಂಡು ಬಾ. ಹೋಗು. **( ದೀಪಸಿಂಹನಿಗೆ)** ಹೋಗು ಜಾಮಿನಿಗೆ ಯಾರನ್ನಾದ್ರೂ ಕರ್ಕೊಂಡು ಬಾ.

**(ದೀಪಸಿಂಹ, ರಾಯ್ ಚಂದ್ ಹೋಗುತ್ತಾರೆ)**

**ದೂತ** : - ತಂಗೀ .............!

**(ರೂಪಾಲಿ ಸೆರಗು ಮುಂದೆ ಬರುತ್ತಾಳೆ. ಅವಳನ್ನು ನೋಡಿ ದೂತ ಬೆಚ್ಚಿ ಬೀಳುತ್ತಾನೆ. ಶೂರಸಿಂಹ ತಾಯಿಯ ಸೆರಗಿನ ಹಿಂದೆ ಅವತುಕೊಳ್ಳುತ್ತಾನೆ)**

**ರೂಪಾಲಿ** : - ಏನು ಸ್ವಾಮಿ?

**ದೂತ** : - ತಂಗಿ...........!

**ರೂಪಾಲಿ** : - ಅಣ್ಣಾ, ಮನೆ ಊಟ ಮಾಡಿ. ನನ್ನ ಮಾನ ತೆಗೀಬೇಕು ಅಂತಿದ್ದಾನೆ.

**ದೂತ** : - ಹಾಗಾದ್ರೆ ಠಾಣೆಗೆ ಹೋಗಿ ಎಲ್ಲಾನೂ ಹೇಳಬೇಕಾಗಿತ್ತು. **(ಅವಳನ್ನು ನೋಡಿ)**ತಂಗೀ ನಿನ್ನ ತೌರು ಮನೆ ......

**ರೂಪಾಲಿ** : - **(ನಾಚಿ)** ಬರಾನಿ ..... ನಾಗನೆ ಬರಾನಿ.

**ದೂತ** : - ಅಂದ್ರೇ ಪೊಡಕ ಹತ್ರ ಇರೋ ......

**ರೂಪಾಲಿ** : - ಹೌದು. ನಮ್ಮಪ್ಪ ಅದರ ಹತ್ತಿರ ಮೇಷ್ಟ್ರು ಕೆಲಸದಲ್ಲಿದ್ದರು. ಆ ಊರು ಬಿಟ್ಟು ಹದಿನೈದು ವರ್ಷವಾಯಿತು.

**ದೂತ** : - ಅಲ್ಲಿ ನಿಮ್ಮ ಪಕ್ಕದ ಮನೆಯಲ್ಲಿ ಒಬ್ಬ ಬ್ರಾಹ್ಮಣ ಇದ್ದಾ ಅಲ್ವಾ? **(ರೂಪಾಲಿ ಅವನನ್ನೇ ನೋಡುತ್ತಾಳೆ)** ಕೇಶಾ ತಾಯಿ ಇನ್ನೂ ಬದುಕಿದ್ದಾಳಾ? ಆ ಬ್ರಾಹ್ಮಣನ ಮಗನನ್ನು ಗುರ್ತು ಹಿಡಿಯ ಬಲ್ಲೆಯಾ? ಅಪ್ಪಾ ಬದುಕಿದ್ದಾರೇನು. ಅಪ್ಪಾ ಆ ಹುಡುಗನಿಗೆ ಎಷ್ಟು ಹಣ

ಕೊಟ್ಟ ಗೊತ್ತೇನು?

**ರೂಪಾಲಿ** : - ಅಣ್ಣ, ರವಿಯಣ್ಣ.

**ದೂತ** : - **(ಗದ್ಗದನಾಗಿ)** ಹೌದು, ನಿನ್ನ ಅಣ್ಣ ರವಿ

**(ರಾಯ್ ಚಂದ್ ಕೆಮ್ಮುತ್ತಾ ಪ್ರವೇಶಿಸುತ್ತಾನೆ) (ದೀಪಸಿಂಹನೂ ಇರುತ್ತಾನೆ)**

**ರೂಪಾಲಿ** : - **(ಸೆರಗು ಹಾಕ್ಕೊಂಡು)** ಏನಾಯ್ತು?

**ರಾಯ್ ಚಂದ್** : - ನಿಯತ್ತು ಚೆನ್ನಾಗಿಲ್ದೆ ಇದ್ರೆ ಯಾರು ಜಾಮೀನು ಕೊಡ್ತಾರೆ ಸ್ವಾಮಿ. ನಮ್ಮ ಕೆಲ್ಸ ನೋಡೋಣ. ಮೊದಲು ಒಡವೆಗಳನ್ನು ತೆಗಿಸಬೇಕು. ಈ ಹತ್ತು ಸೇರು ಪೇಡಾ ನನ್ನ ಉಡುಗೊರೆ ಅಂತ ತಗೊಂಡು ಹೋಗಿ.

**ದೂತ** : - ಸೇಠ್ ನನ್ನ ಮೇಲೆ ನಂಬಿಕೆ ಇದೆ ತಾನೆ. ನಾನು ಜಾಮೀನು ಕೊಡ್ತೇನೆ. ಲೋ ಜವಾನ ನಡಿ ಹೋಗೋಣ. **( ಶೂರಸಿಂಹನನ್ನು ನೋಡಿ)** ಬಾರೋ ನನ್ನ ಸೋದರಳಿಯ. ತಗೋ **(ಜೋಬಿನಿಂದ ದುಡ್ಡು ತೆಗೆದು ಕೊಡುತ್ತಾನೆ)** ಲೋ. ಜವಾನ ನಡಿ ನಾವು ಮೊದಲು ಠಾಣೆಗೆ ಹೋಗ್ಬೇಕು **(ಹೋಗುತ್ತಾರೆ)**

**ರಾಯ್ ಚಂದ್** : - **(ಹೋಗುತ್ತಾ ರೂಪಾಲಿಯ ಕಡೆ ನೋಡಿ)** ರೂಪ ಇದ್ಕಡೆ, ಸಂಬಂಧ ಆಗೋದು ಎಷ್ಟೊತ್ತು?

**(ತೆರೆ)**

## ಪಾತ್ರಗಳು

ಜಮುನಾ

ರೂಪಿ

ಅತ್ತೆ

ಭಗಾ

ಕೋದರ್

ಯುವಕ ಮತ್ತು ಯುವತಿಯರು

**[ಜನ್ಮಾಷ್ಟಮಿಯ ದಿನ. ಆಕಾಶದಲ್ಲಿ ಮೋಡಗಳು ಕವಿದಿವೆ. ಜಾತ್ರೆಗೆಂದು ಹೊರಟ ಯುವಕರು ಠಾಕುಠೀಕಾಗಿ ಉಡುಪು ಧರಿಸಿದ್ದಾರೆ.**

**ಇಬ್ಬರು ಯುವಕ ರೈತರು ಹಳ್ಳಿ ದಿಬ್ಬದ ಮೇಲೆ ಹತ್ತುತ್ತಿದ್ದಾರೆ. ಮೊಣಕಾಲುವರೆಗೆ ಮುಚ್ಚುವಂತೆ ಧೋತ್ರ, ಕಸೇ ಅಂಗಿ, ತಲೆಯ ಮೇಲೆ ಒಂದೇ ತರನಾದ ಪೇಟ. ವಯಸ್ಸು ಇಬ್ಬರದೂ 20-22 ಇರಬಹುದು. ಗೋಧಿ ಬಣ್ಣದ ಕೋದರನ ಕಾಲಲ್ಲಿ ಪಾದರಕ್ಷೆ ಇದೆ. ಸ್ವಲ್ಪ ಕಪ್ಪಗಿರುವ ಭಗಾ ಬರೀಗಾಲಲ್ಲಿ ಇದ್ದಾನೆ]**

**ಭಗಾ** :- ಲೇ ಕೋದರ್, ನಿನ್ನ ಹೆಂಡತೀನ ಕರ್ಕೊಂಡು ಬರೋಕೆ ಈ ಜನ್ಮಾಷ್ಟಮಿ ದಿನ ಹೊರಟಿದ್ದೀವಿ. ಇದು ಯಾಕೋ ಸರಿಯಿಲ್ಲ.

**ಕೋದರ್** :- **(ಹುಸಿ ನಗೆ)** ಏಕೆ?

**ಭಗಾ** :- ಬೇರೆ ದಿನ ಆಗಿದ್ರೆ **(ಹೊಟ್ಟೆ ತೋರಿಸುತ್ತಾ)** ಸ್ವಲ್ಪ ಹೊಟ್ಟೆ ಪೂಜೆನಾದ್ರು ಆಗ್ತಿತ್ತು.

**ಕೋದರ್** :- ಏನು ಮಾತು ನಿಂದು? ಬೇರೆ ದಿನ ಅಂದ್ರೆ ಸಾಯೋಕು ಪುರಸೊತ್ತು ಇಲ್ಲ. ಸದ್ಯ ಇವತ್ತು ಗೋಕಲಾಷ್ಟಮಿ. ನೇಗಿಲಿಗೆ ರಜ ಇಲ್ದಿದ್ರೆ, ನಾನು ಅತ್ತೇ ಮನೆಗೆ ಹೋದ ಕೂಡಲೇ ಭಗಾ ಇಲ್ಲೇ ಊಟ ಮಾಡ್ತಾನೆ ಅಂತ. ಆ ಮೇಲೆ ನಾನು ಊಟಕ್ಕೆ ಕೂತು ಬಿಡ್ತೀನಿ ತಟ್ಟೆ ತೊಳೆದ ಮೇಲೆ, ಅರೇ, ಅಷ್ಟಮಿ ವ್ರತ ಇದೆಯಲ್ಲ, ಮರೆತು ಬಿಟ್ಟೆ, ನೋಡು ನೀನು ಹೂಂ, ಅಂದ್ರೆ ನನ್ನ ತಟ್ಟೆ ನಿನ್ನ ಕಡೆ ಜರಗುಸುತ್ತೀನಿ. ಹೇಳು, ಏನು ಮಾಡೋಣ?

**ಭಗಾ** :- ಹೋಗೋ, ಹೋಗೋ. ಮಿಠಾಯಿ ತಿನ್ನಕೋಸ್ಕರ ಜಾತಿ ಕೆಡಿಸಿಕೊಳ್ಳೋನಲ್ಲ ನಾನು. **(ಏನೋ ಕೇಳಿದವನಂತೆ ಕಿವಿಗೊಡುತ್ತಾನೆ)** ಎಲ್ಲೋ ಹಾಡಿನ ಧ್ವನಿ ಕೇಳಬರುತ್ತಿದೆಯಲ್ಲ. ಎಲ್ಲಾ ಜಾತ್ರೆಗೆ ಹೊರಟಿದ್ದಾರೆ ಅಂತ ಕಾಣುತ್ತೆ.

**ಕೋದರ್** :- ಹೂಂ.

**ಭಗಾ** :- ಹೂ, ಎಂದರೇನು ನಿನ್ನ ತಲೆ? ಬೇಗ ನಡಿ, ಇಲ್ದಿದ್ರೇ ನಿನ್ನ ಹೆಂಡತಿ ಜಾತ್ರೆಗೆ ಹೊರಟು ಬಿಟ್ಟಾಳು. ಆ ಮೇಲೆ ಎರಡೂ ಕಡೆ ಇಲ್ದಂಗೆ ಆಗುತ್ತೆ.

**ಕೋದರ್** :- ಯಾಕೆ?

**ಭಗಾ** :- ಒಂದು ಕಡೆ ಜಾತ್ರೇ ಮುಗಿದೋಗಿರತ್ತೆ, ಈ ಕಡೆ ಇವಳು ಮನೆಯಲ್ಲಿ ಇಲ್ದಿದ್ರೇ ಜಾತ್ರೆಗೆ ಯಾರನ್ನ ಕರ್ಕೊಂಡು ಹೋಗ್ತಿಯಾ? ಹಾಡೋಳರಲ್ಲಿ ರೂಪೀ ಭಾಭಿನೂ ಇರಬಹುದು ಅಂತ ಕಾಣುತ್ತೆ.

**ಕೋದರ್** :- **(ನಗುತ್ತಾ)** ಇರಲಿ ಬಿಡು.

**ಭಗಾ** :- ಏನು ಇರ್ಲಿ ಬಿಡು? ನಿನ್ನ ತಲೆ? ಇದು ಎಷ್ಟನೇ ಸಾರಿ ನೀನು ಇಲ್ಲಿಗೆ ಬರ್ತಾ ಇರೋದು.

**ಕೋದರ್** :- ಐದನೇ ಸಲ.

**ಭಗಾ** :- ನನ್ನನ್ನ ಯಾಕೆ ಜೊತೇಲಿ ಕರ್ಕೊಂಡು ಬಂದೆ?

**ಕೋದರ್** : - ಯಾಕೆ ಅಂದ್ರೆ. ನನ್ನ ಅತ್ತೆಗೆ ಸ್ವಲ್ಪ ಹೇಳಿ ......

**ಭಗಾ** : - ನಿನ್ನ ಅತ್ತೆ ಒಪ್ಪದೇ ಹೋದ್ರೇ ............?

**ಕೋದರ್** : - ಬಂದ ದಾರೀಲೀ ಹಿಂತಿರುಗುವುದು.

**ಭಗಾ** : - ಏನೋ ಅಂದೆ, ವಾಪಸ್ಸು ಹೋಗೋದು? ಅದೂ ಬರೀಗೈಯಲ್ಲಿ..

**ಕೋದರ್** : - ಈ ಸಲ ಒಪ್ಪೊದಿದ್ರೆ, ಇನ್ನೊಂದು ........

**ಭಗಾ** : - **(ಸಿಂಡರಿಸಿ)** ನೋಡು ಕೋದರ್ ನಿನ್ನ ಅತ್ತೆ ವಿಧವೆ, ಗಂಡಸಿದ್ರೆ ಆ ಮಾತು ಬೇರೆ. ನಾ ಆಗಲೇ ಹೇಳಿದ ಹಾಗೆ ಹೆಂಡತಿ ಮುಂದೆಲೆ ಹಿಡ್ಕೊಂಡು ಎಳೆದುಕೊಂಡು ಬರುವುದು.

**ಕೋದರ್** : - **(ನಗುತ್ತಾ)** ಸರಿಯಪ್ಪ. ಸರಿ. ನೀ ಮೊದಲು ನಡಿ.

**(ನಡೆಯ ತೊಡಗುತ್ತಾರೆ)**

**ಭಗಾ** : - **(ನಿಲ್ಲಿಸುತ್ತಾನೆ)** ಇಲ್ಲ. ಹೀ. ಹೀ. ಅಂತ ಹಲ್ಲು ಬಿಟ್ರೇ ಸಾಲದು. ನನಗೆ ನಿನ್ನಂತ ಸಮಾಜದಲ್ಲಿ ನಗೆ ಪಾಟಲಾಗೋಕೆ ಇಷ್ಟವಿಲ್ಲ. ಮಾತು ಕೊಡು. ಅವ್ರು ಕಳಿಸದಿದ್ದರೆ ಮುಂದೆಲೆ ಹಿಡಿದುಕೊಂಡು ಬರ್ತೀನೀಂತ.

**ಕೋದರ್** : - ಒಳ್ಳೇ ಮೂರ್ಖನಂತೆ ಮಾತಾಡ್ತಿಯಲ್ಲ. ಮುಂದೆಲೆ ಹಿಡ್ಕೊಂಡು ಅಂದ್ರೆ ಅವಳೇನು ಪ್ರಾಣೀನಾ?

**ಭಗಾ** : - ಇನ್ನೇನು ಮತ್ತೆ? ಚಾತುರ್ಮಾಸ ದಿನಗಳಲ್ಲಿ ನೀನು ನೇಗಿಲು ಹಿಡ್ಕೊಂಡು ಒಂದ್ಕಡೆ ಇರು ಒಬ್ಬನೇ ಬೇಯಿಸಿಕೊಂಡು. ಅವಳು .............

**ಕೋದರ್** : - ಗೊತ್ತು. ಗೊತ್ತು ಕಣಯ್ಯ. ಹೆಂಗಸರು ತಾಯಿ ಮಾತನ್ನು ಮೀರಿ ಯಾವತ್ತು ಅತ್ತೆ ಮನೆಗೆ ಹೋಗ್ತಾರೆ? ನಡಿ, ನಡಿ, ಅವರು ವಾಪಸ್ಸು ಬರ್ತಾ ಇರಬಹುದು.

**ಭಗಾ** : - ಒಂದ್ವೇಳೆ ಅವರು ಹೊರಟಿದ್ರೆ ನೀನು ತಡಿತಿಯೇನು? ದಿಬ್ಬದ ಮೇಲೆ ಹತ್ತಿದ ಭಿಲ್ಲನೂ, ತೌರು ಮನೆಗೆ ಹೋದ ಹೆಂಗಸೂ ಯಾರ ಮಾತನ್ನು ಕೇಳುವುದಿಲ್ಲ.

**ಕೋದರ್** : - ಕೇಳದಿದ್ರೆ ಸಾಯಲಿ ಬಿಡು. ಆದ್ರೇ ನೀ ಹೇಳೋ ಹಂಗೆ ಮುಂದೆಲೆ ಹಿಡ್ಕೊಂಡು ಬರೋದು ಸಾಧ್ಯವಿಲ್ಲ.

**ಭಗಾ** : - **(ನಿಂತು)** ನೀನು ಈ ತರ ಮಾತನಾಡಿದ್ರೆ ನನ್ಗೆ ಮೈಯೆಲ್ಲಾ ಉರಿದು ಹೋಗುತ್ತೆ. ಯಾಕೆ ಗೊತ್ತಾ? ನಿನಗೆ ಶಕ್ತಿ ಧೈರ್ಯ ಯಾವುದು ಇಲ್ಲ. ಪೋಲಿಸನವನನ್ನು ನೋಡಿ ಓಡಿ ಹೋಗ್ತಿ ...............

**ಕೋದರ್** : - ಅದು ಬಿಡು. ಅವನು ಪೋಲಿಸ್ ಆದರೆ **(ನನ್ನ ಜೊತೆ ಸಂಸಾರ)** ಮಾಡೋ ......

**ಭಗಾ** : - ಏನಿಲ್ಲ .......... ಜನ ಹೇಳೋದು ನಂಬಲೇ ಬೇಕಾಗುತ್ತೆ.

**ಕೋದರ್** : - ಏನು ಹೇಳ್ತಾರೆ ಈ ಜನ ?

**ಭಗಾ** : - ಅದೇ, ನಿನ್ನ ಹೆಂಡತಿ ನಿನಗೇನೋ ಮಂತ್ರ ಮಾಡಿದ್ದಾಳೆಂತಾ. ಯಾರಾದ್ರೂ ಹೀಗೆ ಮಾಡ್ತಾರಾ?

**ಕೋದರ್** : - **(ನಗುತ್ತಾ)** ಸರಿಯಪ್ಪ. ಮಂತ್ರ ಹಾಕಿದ್ದಾಳೆ. ಏನು ಮಾಡಬೇಕು ಈಗ?

**ಭಗಾ** : - **(ರೇಗಿ)** ನಿನ್ನ ಚಿಕ್ಕಪ್ಪ, ಏನು ಮಾಡಿದ್ರು? ಮುಂದೆಲೆ ಹಿಡ್ಕೊಂಡು ಕರ್ಕೊಂಡು

ಬರ್ಲಿಲ್ವಾ? ಈಗ ಯಾರಾದ್ರು ತೌರುಮನೆ ವಿಷಯ ಎತ್ಲಿ.

**ಕೋದರ್** : - ನಿನಗೆ ಗೊತ್ತಾಗೊಲ್ಲ. ಅವಳಿಗೆ ಎರಡೂ ಕಡೆ ಕಷ್ಟ. ತಂದೆ ತಾಯಿಗಳ ಮಾತು ಕೇಳ್ದೆ ಬಂದ್ರೆ ಇಡೀ ಜೀವನದಲ್ಲಿ ಅವಳ ತೌರುಮನೆ ಬಿಟ್ಹೋಯ್ತು. ಇನ್ನೊಂದು ಕಡೆ ನೀ ಬೇರೆ ಮುಂದೆಲೆ ಹಿಡ್ಕೊಂಡು ಬಾ. ಅಂತೀ .........

**ಭಗಾ** : - ಹೌದಪ್ಪ ಹೌದು. ಪಾಪ ನೀನು ತಾನೇ ಏನು ಮಾಡ್ತೀಯಾ? ಎಂತೆಂಥವರನ್ನೆ ತಮ್ಮ ಅಂಗೈ ಮೇಲೆ ಕುಣಿಸುತ್ತಾರೆ ಸುಂದರಿಯರು. ನೀನೆಷ್ಟರವನು?

**(ಗುಂಪು ಬರುತ್ತದೆ. ಬಾಕಿಯವರಿಗೆ ಕಾಯುತ್ತಾ, ಹಾಡುತ್ತಾ ನಿಂತಿದೆ)**

**ಯುವಕ** : - ನಡೆಯೋ ಸುಂದರಿ ಜಾತ್ರೇಗೇ ............

**ಯುವತಿ** : - ನಡೆಯೋ ಸುಂದರ ಜಾತ್ರೇಗೇ ............

**ಯುವಕ** : - ನಡೆಯೇ ಸುಂದರೀ ಜಾತ್ರೇಗೆ ................

**ಯುವತಿಯರು** : - ಕಾಲಲಿ ಗೆಜ್ಜೆಯ ಗಲಗಲನಾದ

**ಯುವಕ** : - ಡೋಲಿನ ಡಂ. ಡಂ. ಡಂಡಂನಾದ

**(ಗುಂಪಿನ ಎಡಗಡೆ ರೂಪೀ ಮತ್ತು ಅವಳ ಸೋದರತ್ತೆಯ ಮಗಳು ಜಮುನಾ ನಿಂತಿದ್ದಾರೆ. ಬೆಲೆ ಬಾಳುವ ಬಟ್ಟೆಗಳನ್ನು ತೊಟ್ಟಿದ್ದಾರೆ. ಸಂತೋಷದಿಂದ ಬರುತ್ತಿದ್ದಾರೆ)**

**ಕೋದರ್** : - **(ನಿಂತು)** ಲೇ. ಭಗಾ ಒಂದು ಮಾತು ಕೇಳ್ಲಾ?

**ಭಗಾ** : - ಕೇಳು. ಆದ್ರೇ ನೀನ್ಯಾಕೆ ನಿಂತು ಬಿಟ್ಟೆ?

**ಕೋದರ್** : - **(ದೀನನಾಗಿ)** ನೋಡು. ನಾವೂ ಜಾತ್ರೇಗೆ ಹೋಗೋಣಾ ........

**ಭಗಾ** : - ಯಾಕೆ? ನೀನು ಕರ್ಕೊಂಡು ಹೋಗೋಕೆ ಬಂದಿದೀಯೋ ಇಲ್ಲಾ. **(ನಾಲ್ಕೈದು ಹೆಜ್ಜೆ ಹಾಕಿ, ಹಿಂತಿರುಗಿ ನೋಡುತ್ತಾನೆ, ಕೋದರ್ ತದೇಕ ದೃಷ್ಟಿಯಿಂದ ರೂಪೀಯನ್ನು ನೋಡುತ್ತಿರುತ್ತಾನೆ)** ಹಂಗಾದ್ರೇ ಜಾತ್ರೇಗೆ ಹೋಗೋಣಾ ಅಂತಿಯಾ?

**ಕೋದರ್** : - **(ಸಂತೋಷದಿಂದ)** ನಿಜಾನಾ?

**ಭಗಾ** : - ಅಯ್ಯೋ. ದೇವರೇ ಒಳ್ಳೇ ಬೆಕ್ಕಿನ ಮರಿ ಮಾಡಿದ್ಲಾಳೆ.

**(ಹಾಡು ಸಾಗುತ್ತದೆ. ರೂಪೀ ಕೋದರನ ಕಡೆ ನೋಡುತ್ತಾಳೆ)**

**ಯುವಕ** : - ಕಣ್ಣು ತಗ್ಗಿಸಿ ನಡಿಯೇ ಜಾಣೆ ಹುಡುಗ ಕೆರಳ್ಳಾನು

**ಯುವತಿ** : - ಕಣ್ಣು ತಗ್ಗಿಸಿ ನಡೆಯೋ ಜಾಣ ಹುಡುಗಿ ಬೆದರ್ಯಾಳು
ಹೃದಯ ಕಲಕದಿರೇ ಜಾಣೆ ಹುಡುಗ ಕೆರಳ್ಳಾನು

**(ಹಾಡಿನ ಧ್ವನಿ ಕಮ್ಮಿ ಆಗುತ್ತದೆ. ಭಗಾ, ಕೋದರ ಅತ್ತೆ ಮನೆಗೆ ಬರುತ್ತಾರೆ. ಧ್ವನಿ ಕೇಳಿ ನೋಡುತ್ತಾಳೆ. ಅವರನ್ನು ನೋಡಿ ಮುಖ ಬಾಡುತ್ತದೆ)**

**ಅತ್ತೆ** : -ಬನ್ನಿ. ಬನ್ನಿ.

**(ಮನೆಯೊಳಗೆ ಹೋಗುತ್ತಾಳೆ. ಜಗುಲಿಯ ಬಲಗಡೆ ಕೊಠಡಿ ಇದೆ. ಕೋದರ್ ಬಾಗಿಲ ಎಡಗಡೆ ಇರುವ ಹಗ್ಗದ ಮಂಚ ಹಾಕುತ್ತಾನೆ)**

**ಕೋದರ್** : - ಕುತ್ಕೋ.

**ಭಗಾ** : - **(ಮೆಲ್ಲಗೆ)** ನಿನ್ನಂತಹವನು ಯಾಕೆ ಹುಟ್ಟೇಕೋ?

**ಕೋದರ್** : - **(ತಿಳಿಯದೆ)** ಏನು ಹಾಗಂದ್ರೆ?

**ಭಗಾ** : - ಅವಳು ಜಾತ್ರೆಗೆ ಹೊರಟ್ಹೋಯ್ತು. ಹೋಗ್ದೇ ಇದ್ರೇ ಏನಾಗ್ತಾಯಿತ್ತು? ನೀನೇ ಹೇಳ್ತೀ ನಿನ್ನ ಕಂಡ್ರೆ ಬಹಳ ಪ್ರೇಮ ಅಂತ. ಅದ್ಕೇ ಹೇಳ್ತಾ ಇರೋದು.

**ಕೋದರ್** : - ಅವಳು ನಮ್ಮನ್ನು ನೋಡಿಲ್ಲಾ ಅಂತ ಅನ್ಸುತ್ತೇ ......

**ಭಗಾ** : - ಸಾಕು. ಸುಮ್ನಿರು ಯಾಕೆ ಸುಳ್ಳು ಹೇಳ್ತಿ, ಆಣೆ ಇಟ್ಟು ಹೇಳು ನೀವಿಬ್ಬರೂ ಒಬ್ಬರನ್ನೊಬ್ಬರು: ನೋಡದ್ರೋ ಇಲ್ವೋ.

**ಕೋದರ್** : - **(ರೇಗಿ)** ಹೌದು ನೋಡಿದೆವು. ನಾ ಯಾಕೆ ಬಂದೆ ಅಂದ್ರೇ.

**ಭಗಾ** : - ಸಮಜಾಯಿಷಿ ಮಾಡ ಬೇಡ. ಇಷ್ಟರಲ್ಲಿ ಎಲ್ಲಾ ಗೊತ್ತಾಗ್ಬಿಟ್ತಾ?

**ಕೋದರ್** : - ಸುಮ್ನಿರಯ್ಯ.

**(ಅದೇ ಹೊತ್ತಿಗೆ ರೂಪೀ ಜಮುನಾ ಬರುತ್ತಾರೆ. ಕೋದರನ ಮುಖ ಸಂತೋಷದಿಂದ ಅರಳುತ್ತದೆ)**

**ಭಗಾ** : - ನೀ ಬಂದ ಮೇಲೆ ದುಡ್ಡು ಕಾಸು ಸಿಗುತ್ತೇ ಅಂತ ವಾಪಸ್ಸು ಬಂದಿದ್ದಾರೆ. ಕೊಡು. ನಿನ್ಗೆ ನಾಚ್ಕೆ ಆದ್ರೆ ನಾನೇ ಕೊಟ್ಟು ಬರ್ತೀನಿ.

**ಕೋದರ್** : - ನನ್ನ ಪ್ರಾಣ ಯಾಕೆ ಹಿಂಡ್ತಿ. ನನ್ನ ಅತ್ತೆ ಕೇಳ್ತಾಳೆ ಅಂದ್ಕೊಂಡಿದಿಯಾ? ಹದಿನೈದು ದಿನ ಬೇಕಾದ್ರೂ ...........

**ಜಮುನಾ** : - **(ಗಾದಿಗಳನ್ನು ತರುತ್ತಾಳೆ)** ಏಳಿ. ಗಾದಿ ಹಾಸುತ್ತೇನೆ.

**ಭಗಾ** : - ಗಾದಿ ಏತಕ್ಕೆ? ನಾವಿಬ್ಬರೂ ವಾಪಸ್ಸು ಹೋಗಬೇಕು.

**ಜಮುನಾ** : - ಕುದ್ರೆ, ಗಿದ್ರೆ ತಂದಿದ್ರೆ ಸ್ವಲ್ಪ ಕಟ್ಟಿಹಾಕು. **(ಓರೆಗಣ್ಣಿನಿಂದ ಕೋದರನನ್ನು ನೋಡುತ್ತಾಳೆ)** ಬರೋದು ಹೊತ್ತಾಯ್ತೇನು? **(ಭಗಾ ದೃಷ್ಟಿ ಆ ಕಡೆ ತಿರುಗಿಸುತ್ತಾನೆ)** ಮಾತಾಡೋಕೆ ನಾಚ್ಕೆ ಆಗಲ್ವೇನು?

**ಕೋದರ್** : - ಇದರಲ್ಲಿ ನಾಚ್ಕೆ ಏನು ಬಂತು? ಕರ್ಕೊಂಡು ಹೋಗೋಕೆ ಬಂದಿದ್ದಾರೆ ಅಂತ ನಿನ್ನ ಸೋದರತ್ತೆಗೆ ಹೇಳು

**ಅತ್ತೆ** : - **(ಹೊರಬಂದು)** ನೀವು ಬಂದ ಕೂಡಲೇ ಗೊತ್ತಾಯ್ತು. ಪಾಪ ಹಬ್ಬದ ದಿನಾನೇ ಪುರಸೋತ್ತು ಸಿಗಬೇಕೇನೂ ಸ್ವಾಮಿಯವರಿಗೆ?

**ಭಗಾ** : - ಬೇರೆ ಇನ್ಯಾವ ದಿನ ಬಿಡುವು ಆಗುತ್ತೆ? ಜಾಸ್ತಿ ಕೆಲಸ.

**ಅತ್ತೆ** : - ದರದು ಇರೋದು ನನಗಾ?

**(ಕೋದರ್ ಆಶ್ಚರ್ಯಚಕಿತನಾಗುತ್ತಾನೆ)**

**ಭಗಾ** : - ದರದು ಇರೋದು ಇವನಿಗೆ ಸರಿ. ಇದು ಐದನೇ ಸಾರಿ ಬರ್ತಾ ಇರೋದು.

**ಅತ್ತೆ** : - ಐದು ಆಗುತ್ತೇ. ಹತ್ತು ಆಗುತ್ತೇ. ಇನ್ನೇನು ಹೇಳಬೇಕು?

**ಭಗಾ** :- ಅದು ನಿನಗೂ ಗೊತ್ತು. ನಿನ್ನಳಿಯನಿಗೂ ಗೊತ್ತು. **(ಕೋದರನ ಕಡೆ ಕೋಪದಿಂದ ನೋಡುತ್ತಾನೆ)** ಏಳಪ್ಪ. ಅವ್ರು ಹೇಳಿದ್ದು ಕೇಳಿಸಲಿಲ್ವಾ?

**ಕೋದರ್** : - ಈ ಸಲ ಕಳುಹಿಸಲೇ ಬೇಕು.

**ಅತ್ತೇ** : - ಏನಂದಿ? ಇನ್ನೊಂದು ಸಲ ಹೇಳು ನೋಡೋಣಾ?

**ಕೋದರ್** : - ಹೇಳ್ತೀನಿ. ನನಗೇನು ಭಯಾನ? ಮನೇಲೇ ಇಟ್ಕೊಳ್ಳೋ ಹಾಗಿದ್ರೆ ಯಾಕೆ ಮದುವೆ ಮಾಡಬೇಕಾಗಿತ್ತು.

**ಅತ್ತೆ** : - ನೀನ್ಯಾವ ರಾಜಕುಮಾರ ಅಂತ ನಿನ್ನ ಕೇಳೋಕೆ ಬರಲಿಲ್ಲ. ನೋಡೆ ಬಿಡೋಣ. ಯಾವ ದೌಲತ್‌ನಿಂದ ನನ್ನ ಮಗಳನ್ನು ಬಲವಂತವಾಗಿ ಕರ್‍ಕೊಂಡು ಹೋಗ್ತಾನೋ. ಲೇ ಹುಡುಗೀರಾ ನೀವು ವಾಪಸ್ಸು ಯಾಕೆ ಬಂದಿದ್ದು? ಜಾತ್ರೆಗೆ ಹೋಗಿ ನೋಡೋಣ ಯಾರು ಜಬರ್‌ದಸ್ತಿ ಮಾಡ್ತಾರೋ ಅಂತ.

**ಭಗಾ** : - **(ಮೆಲ್ಲಗೆ)** ಕೇಳಿಸ್ತಾ?

**ಕೋದರ್** : - **(ಅತ್ತೆಗೆ ಕೇಳಿಸುವಂತೆ)** ಅಯ್ಯೋ. ಜುಟ್ಟು ಹಿಡಿಯೋದು ಎಷ್ಟೊತ್ತು?

**ಅತ್ತೆ** : - **(ನುಗ್ಗಿ ಬಂತು)** ನಿನ್ನ ಬಾಯಲ್ಲಿ ಎಷ್ಟು ಹಲ್ಲು ಇದೆಯೋ ಎಣಿಸಿದ್ದೀಯಾ? ನನ್ನ ಮುಂದೆ ಮಗಳ ಜುಟ್ಟು ಹಿಡಿತೀಯಾ? ನನ್ನ ಮನೆಯ ಅಂಗಳದಲ್ಲಿ ಎಷ್ಟು ಕಲ್ಲು ಇದೆ ಎಣಿಸಿದೆಯಾ?

**ಜಮುನಾ** : - ಅತ್ತೀ. ನೀನು ಸುಮ್ಮನೆ ಒಳಕ್ಕೆ ಬಾ. **(ಎಳೆಯುತ್ತಾಳೆ)**

**ಕೋದರ್** : - ಏನು ಮಾಡ್ತಿಯ ಮಾಡು. ನೋಡೋಣಾ?

**(ಅಂಗಳಕ್ಕೆ ರೂಪೀ ಬರುತ್ತಾಳೆ)**

**ಅತ್ತೆ** : - ಯಾಕೇ ಹುಡ್ಗಿ ಇಲ್ಲಿ ನಿಂತಿ. ಜಾತ್ರೆಗೆ ಹೋಗದಿದ್ರೆ ಬೇಡ. ಒಳಗೆ ಏನೂ ಕೆಲಸವಿಲ್ಲೇನು?

**(ಅತ್ತೆ ಮನೆ ಒಳಗೆ ಹೋಗುತ್ತಾಳೆ. ಜಮುನಾ ರೂಪಿಯನ್ನೇ ನೋಡುತ್ತಾ ಅಂಗಳದಲ್ಲಿ ನಿಲ್ಲುತ್ತಾಳೆ)**

**ಭಗಾ** : - ನಿನ್ನತ್ತೆಗೆ ಬಲು ಕೋಪ. ತಲೆ ಮೇಲೆ ಕಲ್ಲು ಹೊಡೆದ್ರು ಹೊಡೆದ್ಬಿಟ್ಟಾಳು.

**ಕೋದರ್** : - ಹೂಂ. ಹೊಡೆದು ಬಿಟ್ತಾಳೇ ...........!

**ಭಗಾ** : - ಹಾಗಾದ್ರೇ ಏನು ಯೋಚನೆ ಮಾಡ್ದಿ?

**ಕೋದರ್** : - ಏನು ಯೋಚನೇ ಮಾಡೋದು? ಮನಸ್ಸು ಅನ್ನೋದು ಒಡೆದರೆ. ಕನ್ನಡಿ ಒಡೆದ ಹಾಗೆ.

**ಭಗಾ** : - ಈ ಇಂಗ್ಲೀಷೋನೋರ ಕಾಲದಲ್ಲಿ ಒಡೆದ ಕನ್ನಡಿಯನ್ನು ಜೋಡಿಸಬಹುದು.

**ಕೋದರ್** : - ಜೋಡಿಸಿದ್ರೂ ಗುರ್ತು ಹಂಗೇ ಇರತ್ತಲ್ಲ.

**(ರೂಪಿ ಮುಖ ತಿರುಗಿಸಿ ಒಳಗೆ ಹೋಗುತ್ತಾಳೆ)**

**ಭಗಾ** : - ಹಾಗೇ ಮಾಡಪ್ಪ. ನೀನೊಬ್ಬನೇ ಮುರಿದ ಗಾಜನ್ನು ಸೇರಿಸು. ನಾನು ಹೊರಟೆ **(ಏಳುತ್ತಾನೆ)**

**ಕೋದರ್** : - ಎಲ್ಲಿಗೆ?

**ಭಗಾ** : - ಜಾತ್ರೆಗೆ.

**ಕೋದರ್** : - ಕೂತ್ಕೋ. ಕೂತ್ಕೋ. **(ಒಳಗಡೆ ಮುಖ ತಿರುಗಿಸಿ)** ಜಮುನಾ ಎಲ್ಲಿ ಹೋದಿ?

**ಜಮುನಾ** : - **(ಜಮುನಾ ರೂಪೀ ಅಂಗಳದಲ್ಲಿ ಪಿಸ, ಪಿಸ ಮಾತಾಡ್ತಾ ಇದ್ದಾರೆ)** ಏನು? **(ರೂಪೀ ಅವಳ ಕೈ ಅದಮುತ್ತಾಳೆ )** ಹೋಗ್ತಾ ಇದ್ದಿರೇನು?

**(ರೂಪೀ ಮನೆ ಒಳಗೆ ಹೋಗ ತೊಡಗುತ್ತಾಳೆ)**

**ಭಗಾ** : - ಇನ್ನೇನ್ಮಾಡೋದು? ಈಗ್ಲೂ ಸಮಯ ಇದೆ. ಜಾತ್ರೆಗೆ ಹೋಗೋಣ. ಅಲ್ಲಿಂದ ಸೀದಾ ಮನೆಗೆ ಹೋಗೋಣ.

**ಕೋದರ್** :- **(ಜಮುನಾಗೆ)** ಅವರು ಕರೆದುಕೊಂಡು ಹೋಗದೇ ಇರೋಲ್ಲ ಅಂತ ಹೇಳು.

**ಜಮುನ** :- **(ಬೇಸರದಿಂದ)** ಆದ್ರೇ ನಿಮ್ಮತ್ತೆ ಕೇಳ್ಬೇಕ್ಕಲ್ಲಾ. ಅತ್ತೆ ಯಾವತ್ತೂ ಕಳಿಸೊಲ್ಲ ಓಟುವಳಿವರ್‍ಗ್ಲ ಖಂಡಿತಾ ಕಳಿಸೋಲ್ಲ. **(ಒಳಗೆ ಹೋಗುತ್ತಾಳೆ)**

**ಕೋದರ್** :- **(ವಿಚಾರ ಮಗ್ನನಾಗಿ, ಒಂದೆರಡು ನಿಮಿಷ ಬಿಟ್ಟು)** ಹಾಗಾದ್ರೆ ನೀನು ಹೋಗು. ನಾನು ಕರ್‍ಕೊಂಡೇ ವಾಪಸ್ಸು ಬರೋದು. ಎಷ್ಟು ದಿನ ಬೇಕಾದ್ರೂ ಆಗ್ಲಿ.

**ಭಗಾ** :- ಹಾಗಾದ್ರೆ ಹೋಗ್ಲಾ? ಇದರಿಂದ ನಿನಗೆ ಏನೂ ಪ್ರಯೋಜನವಿಲ್ಲ.

**(ರೂಖೀ ಕಸ ಹೊಡೆಯುತ್ತಾ ಬಾಗಿಲವರೆಗೆ ಬರುತ್ತಾಳೆ)**

**ಕೋದರ್** :- ಅದೆಷ್ಟು ದಿನ? ಮೂರು ನಾಲ್ಕು ದಿನ? ಕೊನೆಗೆ ಜನದ ಬಾಯಿಗೆ ಹೆದರಿ ನಿಮ್ಮತ್ತೆ ಕಳುಹಿಸ್ತಾಳೆ.

**ಭಗಾ** :- ಅದು ಸರಿ. ಅಲ್ಲಿಯವರೆಗೂ ನಿನ್ನ ದನ, ಕರುಗಳ ಗತಿ?

**ಕೋದರ್** :- ನಿಮ್ಮಮ್ಮನಿಗೆ ಹೇಳು. ಕಟ್ಟಿ ಬಿಚ್ಚಿ ಮಾಡ್ತಾಳೆ.

**ಭಗಾ** :- ಅದು ಹೆಂಗೋ ಆಗುತ್ತೆ. ಆದರೇ ಇಲ್ಲಿ ನಿನ್ನ ಗತಿ. ನನಗೆ ನಂಬಿಕೆ ಇಲ್ಲ.

**ಕೋದರ್** :- ಯಾಕೆ?

**ಭಗಾ** :- ಪ್ರಪಂಚದಲ್ಲಿ ಬುದ್ಧಿವಂತರೇ ತಲೆ ಬಗ್ಗಿಸಬೇಕಾಗುತ್ತೆ.

**ಕೋದರ್** :- ಯಾಕಯ್ಯಾ ಬಗ್ಗಬೇಕು? ಕೊನೆಗೆ **(ನಗುತ್ತಾ)** ನಿನ್ನ ಸಲಹೆ ಇದೆಯಲ್ಲಾ ...

**ಭಗಾ** :- ಯಾವುದೂ? ಹಾ. ಹಾ. ಗೊತ್ತಾಯ್ತು. ಅದೇ ಜುಟ್ಟು ...........

**(ರೂಖೀ ಬಾಗಿಲು ದಾಟುತ್ತಾಳೆ)**

**ಕೋದರ್** :- **(ರೂಖಿಗೆ ಕೇಳುವಂತೆ)** ಅವಳೇ ಒಪ್ಕೋತಾಳೆ. ಇಲ್ದಿದ್ರೇ ಜುಟ್ಟು ..........

**ರೂಖೀ** :- ಜುಟ್ಟು. ಜುಟ್ಟು ಅಂತಿಯಲ್ಲ. ಯಾವತ್ತಾದರೂ ಕುರಿ ಬಾಲ ಹಿಡಿದಿದ್ದೀಯಾ?

**(ಕೋದರ, ಭಗಾ ಆಶ್ಚರ್ಯ)**

**ಕೋದರ್** :- ಏನಂದೆ?

**ರೂಖೀ** :- ನಿಮ್ಮ ಸ್ನೇಹಿತನನ್ನು ಕೇಳು.

**ಭಗಾ** :- **(ತುಂಬಾ ಕೋಪದಿಂದ)** ಈಗ ಮನಸ್ಸಿಗೆ ಶಾಂತಿ ಆಯ್ತಾ? ನೀನು ಕುತ್ಕೋ. ನಾನು .................

**ಕೋದರ್** :- **(ಉರಿಯುತ್ತಿರುವ ಕೋಪದಿಂದ ರೂಖೀ ಕಡೆ ನೋಡಿ)** ಯಾಕೆ ಒಬ್ಬರಿಗೆ ಅವಮಾನ ಮಾಡ್ಬೇಕು ಅಂದ್ಕೋಂಡಿದ್ದಿ? **(ರೂಖೀ ಕತ್ತನ್ನು ಹಿಡಿಯುತ್ತಾನೆ)** ನಡಿ ಮುಂದೆ. ಇಲ್ದಿದ್ರೇ ....... **(ಅಳುತ್ತಿರುವ ರೂಖಿಯನ್ನು ಕುರಿತು)** ಪಾಪ ಜನಕ್ಕೆ ಹೇಗೆ ಮುಖ ತೋರಿಸ್ತಾಳೆ. ನಡಿ. ಇಲ್ದಿದ್ರೇ ನಿನ್ನ ಮೂಳೆ ಮುರಿದು ಹಾಕ್ತೀನಿ.

**ಅತ್ತೆ** :- **(ದಡ ದಡ ಒಳಗಿನಿಂದ ಬರುತ್ತಾಳೆ)** ನೀನು ಸತ್ಕೋಗೊ. ಹಾಳಾದವ್ನೇ ನೀ ಹೋಗ್ತೀಯೋ ಇಲ್ವೋ. **( ಅಂಗಳದಿಂದ ಕೈಗೆ ಕಲ್ಲು ತೆಗೆದುಕೊಳ್ಳುತ್ತಾಳೆ)**

**ಭಗಾ** :- ಅಯ್ಯೋ. ಬೀಗಿತ್ತೀ ಸ್ವಲ್ಪ ಯೋಚನೆ ಮಾಡು.

**ಜಮುನಾ** :- **(ಅತ್ತೆಯನ್ನು ದಬ್ಬಿಕೊಳ್ಳುತ್ತಾಳೆ)** ಈ ಮುದುಕಿ. ಹುಡುಗಿ ತಲೆ ಹೊಡೆದ್ರೂ ಒಡೆದು ಬಿಡ್ತಾಳೆ

**(ಅವಳ ಸಹಾಯಕ್ಕೆ ನಾಲ್ಕೈದು ಜನ ಬರುತ್ತಾರೆ. ರೂಪೀಯ ಅಳುವ ಧ್ವನಿ)**

**ಅತ್ತೆ** :- ನಾನು ಇದ್ದೂ ನನ್ನ ಮಗಳ ಜುಟ್ಟು ಹಿಡಿದೆಳೆದ್ರೇ ನನ್ನ ಜೀವನಕ್ಕೆ ಧಿಕ್ಕಾರ. ನನ್ನನ್ನು ಬಿಡ್ರಿ ಇಲ್ದಿದ್ರೇ ಒಬ್ಬೊಬ್ಬರನ್ನೇ ..........

**ಜಮುನಾ** :- **(ಗುಂಪಿನಿಂದ ಹೊರಗೆ ಬಂದು ಹುಚ್ಚನಂತೆ ನಿಂತಿರುವ ಭಗಾನ ಬಳಿ ಹೋಗುತ್ತಾಳೆ)** ಏನು ನೋಡ್ತಾ ಇದ್ದೀಯಾ? **(ರೂಪೀಯ ಅಳು ಕೇಳಿ ಬರುತ್ತದೆ ......... ಎಷ್ಟು ಧೈರ್ಯ ನಿನಗೆ, ನಡಿ, ಎಂಬ ಮಾತುಗಳು ಕೇಳಿ ಬರುತ್ತದೆ )** ಆ ದುರದೃಷ್ಟದೋಳನ್ನ ಸಾಯಿಸೇ ಬಿಡ್ತಿರೇನು?

**ಭಗಾ** :- **(ಶಾಂತನಾಗಿ)** ಅವಳು ಮಾಡಿದ ಕೆಲಸಕ್ಕೆ ಹೊಡಿಲೇ ಬೇಕು.

**ಜಮುನಾ** :- **(ಕೋಪದಿಂದ)** ಸಾಕು ಬಿಡು ನಿನ್ನ ಸಮಜಾಯಿಷಿ. ರೂಪೀ ಅವನನ್ನು ರೇಗಿಸದೇ ಇದ್ರೇ ಅವನು ಮೂರ್ಖನಂತೆ ಕುಳಿತಿರುತ್ತಿದ್ದ.

**ಭಗಾ** :- **(ಆಶ್ಚರ್ಯ)** ಅಂದ್ರೇ .... ರೂಪೀ ಅತ್ತಿಗೆ .... ಬೇಕೂಂತಲೇ ........

**ಜಮುನಾ** :- ಹೌದು ಅವಳಿಗೆ ಗಂಡನ ಮೇಲೆ ಬಹಳ ಮೋಹ ಬಂದಿದೆ ......

**ಭಗಾ** :- ಹಾಗೋ ಸಮಾಚಾರ.

**ಜಮುನಾ** :- **(ನಗು)** ನೀನೇನು ಕಮ್ಮಿ? ಹೋಗು ಅವಳನ್ನು ಉಳಿಸು.

**ಭಗಾ** :- **(ಅವಸರ)** ಇಗೋ ಹೊರಟೇ. ಒಂದು ಮಾತು. ನೀನೂ ಬರಬೇಕು. **(ಜಮುನಾ ಮೂಗು ಒರೆಸಿಕೊಳ್ಳುತ್ತಾ ಅತ್ತೆಯಂತೆ ಮಾತನಾಡುತ್ತಾಳೆ)** ಎಲ್ಲಿ ಹೊರಟೆ? ಸೀರೆ ಉಟ್ಕೊಂಡು ಜಾತ್ರೆಗೆ ಅಂತ ಹೊರಟಿದ್ಯ. ಆವಾಗಿನಿಂದ .........

**ಜಮುನಾ** :- **(ತಲೆ ತಗ್ಗಿಸಿ ಓಡಿ ಹೋಗುತ್ತಾಳೆ, ಅತ್ತೆಯ ಬಳಿ ಹೋಗಿ ಮುದ್ದಿನಿಂದ )** ಅತ್ತೇ. ಭಗಾ ಜಾತ್ರೆಗೆ ಹೊರಟಿದ್ದಾನೆ. ನೀನು ಹೂ ಅಂದ್ರೆ. ನಾನೂನು ಕೋದರನಿಗೆ ಹೇಳಿ ರೂಪೀನಾ ...........

**ಅತ್ತೆ** :- ಎಲ್ಲಾ ಹೋಗಿ. ನಿಮ್ಮ ಗಂಡಂದಿರ ಜೊತೆಗೆ **(ಅತ್ತೆ ಬಡಬಡಿಸುತ್ತಾಳೆ)** ಬೆಂಕಿ ಬೀಳಲಿ ಈ ಕೋದರನಿಗೆ. ಇನ್ನೊಂದು ಸಲ ನಮ್ಮನೇ ಅಂಗಳಕ್ಕೆ ಬರ್ಲಿ. ಕಾಲು ಮುರಿದು ಹಾಕ್ತೀನಿ. ಹೂಂ ..........

**ಜಮುನಾ** :- **(ಕಂಕುಳಲ್ಲಿ ಸೀರೆ, ಬಟ್ಟೆ ಇಟ್ಕೊಂಡು ಬರುತ್ತಾಳೆ)** ನೀನಿನ್ನೂ ಇಲ್ಲೇ ನಿಂತ್ಯಾ? ಅವಳಿಗೆ ...

**ಭಗಾ** :- ರೂಪೀ ಅತ್ಗೇ ತಾನೇ. ಅವಳು ಸುಮ್ಮನಿದ್ದಾಳೆ. ಎಲ್ಲಾ ತಿಳ್ಕೋ.

**(ಇಬ್ಬರೂ ಹೋಗುತ್ತಾರೆ)**

**ನೆರೆ ಹೊರೆಯ ಸ್ತ್ರೀಯರು** :- **(ಅತ್ತೆಗೆ ಸಮಾಧಾನ ಹೇಳುತ್ತಾ)** ಹೆಣ್ಣು ಹೆತ್ತವರು ಯಾವಾಗಲೂ ಬಗ್ಗ ಬೇಕು.

**ಅತ್ತೆ** :- ಆ ಕಟುಕ ನನ್ನ ಮಗಳನ್ನು ಸಾಯಿಸಿ ಬಿಡ್ತಾನೆ.

**ಮತ್ತೊಂದು ಹೆಂಗುಸು** :- ಏನಂದಿ? ಎರಡು ದಿನ ಅಷ್ಟೇ. ನೀನೇ ನೋಡುವಿಯಂತೆ. **(ಹಾಡು ಶುರುವಾಗುತ್ತದೆ.)** ನಡಿರೇ ನಡಿರೆ **(ಹೋಗುತ್ತಾ ಅತ್ತೆಗೆ)** ತಿಳ್ಕೊ ಬೇಕಮ್ಮ ನೀನು. ಇವೆಲ್ಲಾ ವಯಸ್ಸಿನ ಆಟ. **(ಹೋಗುತ್ತಾ ಎಲ್ಲಾರೂ ನಗುತ್ತಾರೆ)** ಗಮನ ಕೊಟ್ಟು ಕೇಳಿ ನಮ್ಮ ಹುಡುಗರೇ ಹಾಡು ಹೇಳ್ತಾ ಇರೋದು

**(ಕೋದರ್ ಮತ್ತು ರೂಪೀ ಧ್ವನಿ)**

ಹಾರಿ ಹಾರಿ ಹೋಗುವಾ ನಾವು ಹಾರಿ ಹಾರಿ ಹೋಗುವಾ

**(ಭಗಾ ಮತ್ತು ಜಮುನಾ ಧ್ವನಿ)**

ಇನಿಯನ ಸಂಗ ಹೋಗುವಾ ನುವ್ವು. ಇನಿಯನ ಸಂಗ ಹೋಗುವಾ ನಾವು.

**ಅತ್ತೆ** : - ಹೋಗಿ. ಹೋಗಿ. ಹೆಣ್ಣು ಪರಧನ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ. ನಾವು ಎಷ್ಟು ದಿನ ಅಂತ ಇಟ್ಕೊಳ್ಳೋದು?

**(ತೆರೆ)**

## ಪಾತ್ರವರ್ಗ

ಭಾಯಿ ಸಾಹೇಬ

ನಾಗರ ದಾಸ್

ನಂದ ನಂದನ

ಉತ್ತಮ ಚಂದ್

ಚಿತ್ರ ಗುಪ್ತ

ಭೋಗಿಲಾಲ್

ಅಗ್ನಿ ಕುಮಾರ

ಶಕ್ತಿ ಶರಣ

**[ಪ್ರೇಕ್ಷಕನನ್ನು ರಂಗ ಭೂಮಿಯ ಬಳಿ ಕುಳ್ಳಿರಿಸಲಾಗಿದೆ. ಇದು ಸಾಮಾನ್ಯ ರಂಗ ಭೂಮಿ ಅಲ್ಲ. ಇದು ಬೇರೆ ರೀತಿಯದು ಎಂದು ಪ್ರೇಕ್ಷಕ ಯೋಚಿಸುತ್ತಾನೆ. ಇಲ್ಲಿ ನಟರನ್ನೂ, ಪ್ರೇಕ್ಷಕರನ್ನೂ ಬೇರ್ಪಡಿಸುವ ತೆರೆ ಇಲ್ಲ. ಪ್ರೇಕ್ಷಾ ಗೃಹದಲ್ಲಿ ಖುರ್ಚಿಗಳಿವೆ, ಅದೇ ರೀತಿ ರಂಗ ಭೂಮಿಯ ಮೇಲು ಅರ್ಧ ವೃತ್ತಾಕಾರವಾಗಿ ಕುರ್ಚಿಗಳಿವೆ. ಮಧ್ಯ ಒಂದು ದೊಡ್ಡ ಮೇಜು ಇದೆ. ಮೇಜಿನ ಮೇಲೆ ಹಾಕಿದ ಬಟ್ಟೆಯೇ, ತೆರೆ.**

**ಸ್ವಲ್ಪ ಹೊತ್ತಾದ ಮೇಲೆ ಪ್ರೇಕ್ಷಕರು ಬರುತ್ತಾರೆ. ಹೋಗುತ್ತಾರೆ, ಅನೇಕರು ನೇರವಾಗಿ ಹೋಗಿ ರಂಗಭೂಮಿಯ ಮೇಲಿರುವ ಕುರ್ಚಿಗಳಲ್ಲಿ ಕೂರುತ್ತಾರೆ. ಎಲ್ಲಾರೂ ಗಂಭೀರವಾಗಿದ್ದಾರೆ. ಯಾರೂ ಮಾತನಾಡುವುದಿಲ್ಲ. ಒಬ್ಬ ಕಾರ್ಯಕರ್ತ ಗಂಭೀರನಾಗಿ ಮೇಜಿನ ಬಳಿ ಒಂದು ಪತ್ರಿಕೆ ಓದುತ್ತಾ ಕುಳಿತಿದ್ದಾನೆ. ಎಲ್ಲಾರ ಗಮನವು ಬಾಗಿಲಿನಿಂದ ಒಳಗೆ ಪ್ರವೇಶಿಸುವ ಒಬ್ಬ ಪ್ರೌಢ ವ್ಯಕ್ತಿಯ ಮೇಲಿದೆ. ಟೋಪಿ, ಜುಬ್ಬಾ, ಗಡಿಯಾರ ಮತ್ತು ಚಿನ್ನದ ಚೈನು, ಕೈಯಲ್ಲಿ ಕೋಲು. ಎರಡೂ ಕೈಗಳನ್ನು ಜೋಡಿಸಿ ನಮಸ್ಕಾರ ಮಾಡುತ್ತಾ ಬರುತ್ತಾನೆ.]**

**ನಾಟಕ ಆರಂಭವಾಗುತ್ತೆ. ಒಂದು ಕಾರ್ಯಕರ್ತ ಪತ್ರಿಕೆ ಓದುತ್ತಾನೆ.**

"ನಿಮ್ಮ ನಗರದ ಅಗ್ರಗಣ್ಯ ನಾಗರೀಕರೂ, ಚಿರಪರಿಚಿತರಾದ ಕೈಗಾರಿಕೋದ್ಯಮಿಗಳೂ, ಸುಪ್ರಸಿದ್ಧ ದಾನ ವೀರರೂ, ಸ್ವಾವಲಂಬಿಗಳೂ ಆದ ಸೇಠ್ ನಂದ ನಂದನರ ನಿಧಾನದ ಬಗ್ಗೆ ಶೋಕ ಸೂಚಿಸಲು ಪುರಜನರ ಸಾರ್ವಜನಿಕ ಸಭೆಯು ಗುರುವಾರ ಸಾಯಂಕಾಲ ಆರು ಗಂಟೆಗೆ ಸೇರುತ್ತದೆ (**ಪತ್ರಿಕೆ ಮಡಚುತ್ತಾ**) ಈ ದಿನ ಸಭೆಗೆ ಅಧ್ಯಕ್ಷತೆ ವಹಿಸಬೇಕೆಂದು ಭಾಯೀ ಸಾಹೇಬರನ್ನು ನಾನು ಕೇಳಿ ಕೊಳ್ಳುತ್ತೇನೆ. ಶ್ರೀ ಭಾಯಿ ಸಾಹೇಬರ ಪರಿಚಯ ಮಾಡಿಕೊಡುವ ಅವಶ್ಯಕತೆ ಇಲ್ಲ. ಕಳೆದ ಮೂರು ವರ್ಷಗಳಿಂದಲೂ ನಡೆದ ಕಲ್ಯಾಣ ಕಾರ್ಯಗಳಲ್ಲಿ ಪ್ರೇರಣೆ ಕೊಟ್ಟು ಅವುಗಳನ್ನು ನಡೆಸಿದವರು ಭಾಯೀ ಸಾಹೇಬರೇ. ಸೇಠ್ ನಂದ ನಂದನರಿಗೂ, ಇವರಿಗೂ ಬಹಳ ಹತ್ತಿರ ಸಂಬಂಧವಿತ್ತು.

**(ತನ್ನ ಸ್ಥಾನಕ್ಕೆ ಬರುತ್ತಾನೆ. ಒಬ್ಬಿಬ್ಬರು ಶ್ರೋತೃಗಳು ಚಪ್ಪಾಳೆ ತಟ್ಟುತ್ತಾರೆ)**

**ನಾಗರ ದಾಸ** : - ಭಾಯಿ ಸಾಹೇಬರನ್ನ ಅಧ್ಯಕ್ಷ ಸ್ಥಾನ ವಹಿಸಕೊಳ್ಳಬೇಕೆಂದು ಪ್ರಾರ್ಥಿಸಲಾಗಿದೆ. ನಾನು ಇದನ್ನು ಅನುಮೋದಿಸುತ್ತೇನೆ.

**(ಭಾಯಿ ಸಾಹೇಬರು ಅಧ್ಯಕ್ಷ ಸ್ಥಾನಕ್ಕೆ ಬರುತ್ತಾರೆ. ಜೋಬಿನಿಂದ ಕಾಗದ ಮತ್ತು ಕನ್ನಡಕ ತೆಗೆಯುತ್ತಾರೆ. ಕನ್ನಡಕ ಹಾಕಿ, ಕಾಗದ ನೋಡಿಕೊಂಡು ಭಾಷಣ ಆರಂಭಿಸುತ್ತಾರೆ)**

**ಭಾಯೀ ಸಾಹೇಬ** :- ಸಹೋದರ ಸಹೋದರಿಯರೇ, ಸೇಠ್ ನಂದನಂದನರಿಗೂ ನನಗೂ ಇದ್ದ ಸಂಬಂಧದಿಂದಾಗಿ ಈ ದಿನ ಅವರ ಬಗ್ಗೆ ಮಾತನಾಡುವುದು ತುಂಬಾ ಕಷ್ಟವಾಗಿದೆ. ಪ್ರಪಂಚದಲ್ಲಿ ಯಾರೂ ಶಾಶ್ವತವಲ್ಲ. ಎಲ್ಲಾರೂ ಸಾಯಲೇಬೇಕು. ವ್ಯಕ್ತಿ ತನ್ನ ಹಿಂದೆ ಬಿಟ್ಟ ಪರಿಮಳ ಮಾತ್ರ ಉಳಿಯುತ್ತದೆ. ಅಂತಹವರಿಗೇ ನಿಜವಾಗಿಯೂ ಜೀವಿಸುವ ಅಧಿಕಾರವಿರುವುದು. ಸೇಠ್ ನಂದನಂದನವರಿಗೆ ಈ ಅಧಿಕಾರ ಅವರ ಪುರುಷಾರ್ಥವಾಗಿ ಸಿಕ್ಕಿದ್ದು. ಇದಕ್ಕೆ ನಾನೇ ಸಾಕ್ಷಿ. ನನಗೂ ಅವರಿಗೂ ಮೂವತ್ತು ವರ್ಷದ ಸಂಬಂಧ. ಅವರ

ಜೀವನದಲ್ಲಿ ಎಂಥಾ ಪರಿಮಳ ಇತ್ತು ಅಂದ್ರೆ ಗುಜರಾತಿನ ಎಲ್ಲಾ ನಾಗರೀಕರಲ್ಲೂ ಅಚ್ಚಳಿಯದೆ ಉಳಿಯುತ್ತದೆ ಎಂದು ನನ್ನ ನಂಬಿಕೆ. ತೀರ ಕೆಳ ಮಟ್ಟದಿಂದ ಆರಂಭಿಸಿ ತಮ್ಮ ಪುರುಷಾರ್ಥದಿಂದ ಅವರು ಬಹಳ ದೊಡ್ಡ ಸ್ಥಾನವನ್ನು ಗಳಿಸಿದರು. ಅವರಿಗೆ ತಮ್ಮ ಯಶಸ್ಸಿನಿಂದ ಗರ್ವ ಉಂಟಾಗಿರಲಿಲ್ಲ. ಆದರೆ ಪ್ರಯತ್ನ ........

**(ಇದ್ದಕ್ಕಿದ್ದಂತೆ ರಂಗ ಮಂಚದ ಮೇಲೆ ಕತ್ತಲೆ ಉಂಟಾಗುತ್ತದೆ. ಪ್ರೇಕ್ಷಕರಲ್ಲಿ ಗಲಿಬಿಲಿ ಉಂಟಾಗುತ್ತದೆ. ಬೆಳಕು ಬಂದಾಗ ರಂಗ ಮಂಚದ ಮೇಲೆ ಸಭಾಗೃಹವಿರುವುದಿಲ್ಲ. ಅದರ ಬದಲು ರಾಜಮಾರ್ಗ ಕಾಣಿಸುತ್ತದೆ. ಸೇಠ್ ನಂದನಂದನ ಪ್ರವೇಶಿಸುತ್ತಾನೆ)**

ಇದೇನು ರೀತಿ? ಯಾರ ಹತ್ತಿರ ಹೇಗೆ ಮಾತಾಡಬೇಕೆಂದು ಗೊತ್ತಿಲ್ಲ.

**(ಸೇಠ್ ಹಿಂದೆ ಬರುತ್ತಿರುವ ದಪ್ಪ ಪರಿಚಾರಕ ಜವಾಬು ಕೊಡುತ್ತಾನೆ)**

**ಪರಿಚಾರಕ** : - ಮನುಷ್ಯ ಎಂತಹವನು ಅಂತ ಈಗ್ಲೇ ಗೊತ್ತಾಗುತ್ತೆ.

**ನಂದ ನಂದನ** : - ಅಂದರೆ? ಮಾತಾಡೋ ರೀತಿನೂ ಗೊತ್ತಾಗಲ್ವೇನು? ಯಾರು ನಿನ್ನ ಯಜಮಾನ?

**ಪರಿಚಾರಕ** : - ಯಜಮಾನ ಗಿಜಮಾನ ಎಲ್ಲಾ ಅಲ್ಲೇ ನೀನು ಬಂದ ಜಾಗದಲ್ಲೇ.

**ನಂದ ನಂದನ** : - ಹಾಗಾದ್ರೇ ಇಲ್ಲೇನಿದೆ?

**ಪರಿಚಾರಕ** : - ಮಾವನ ಮನೆ. ದೂರವೇನೂ ಇಲ್ಲ.

**ನಂದ ನಂದನ** : - ನನ್ನ ಹತ್ತಿರ ಯಾರಾದ್ರೂ ಹೀಗೆ ಮಾತನಾಡಿದ್ರೆ ಅವರಿಗೆ ಏಟು ಹೊಡೆದು ಕೆಲಸ ಬಿಡಿಸಿ ಓಡಿಸಿ ಬಿಡುತ್ತಿದ್ದೆ.

**ಪರಿಚಾರಕ** : - ಆ ಮಾತೆಲ್ಲಾ ಈಗ್ಲೆ ಜ್ಞಾಪಕಕ್ಕೆ ಬರುತ್ತೆ ಇರು.

**ನಂದ ನಂದನ** : - ಮೂರ್ಖ. ಇಷ್ಟೊತ್ತಾದರೂ ನನ್ನನ್ನು ಬರ ಮಾಡಿಕೊಳ್ಳೋದಿಕ್ಕೆ ಯಾರನ್ನೂ ಕಳಿಸಲಿಲ್ವಾ?

**ಪರಿಚಾರಕ** : - ಯಾಕೆ? ನಾನು ಇಲ್ವೇ?

**(ಹತ್ತಿರದಿಂದ ಒಂದು ಪಲ್ಲಕ್ಕಿ ಹೋಗುತ್ತದೆ)**

**ನಂದ ನಂದನ** : - ಯಾವ ಮೂರ್ಖನದೋ ಈ ಕಾರುಭಾರು? ಅವನು ಪಲ್ಲಕ್ಕಿಯಲ್ಲಿ ನಾನು ನಡೆದುಕೊಂಡು? ಅವನ್ಯಾರು ಗೊತ್ತಾ. ನನ್ನ ಸೇವಕ. ನನ್ನ ಸೇವಕನಾಗಿದ್ದ.

**ಪರಿಚಾರಕ** : - ಅದೇ ನಾಲ್ಕೈದು ಏಟು ಬಾರಿಸಿದ್ದೀಯಲ್ಲ ............

**ನಂದ ನಂದನ** : - ಅಲ್ಲ, ಅವನಲ್ಲ. ಇವನು ನನ್ನ ಮಿಲ್ಲಿನಲ್ಲಿ ಕೆಲ್ಸ ಮಾಡ್ತಿದ್ದ. ನಾಯಿದು ಕೊರಳ ಪಟ್ಟಿ ಹಾಕ್ಕೊಂಡು ಬಂದಿದ್ದ. ಅವನಿಗೆ ಪಲ್ಲಕ್ಕೀನಾ?

**ಪರಿಚಾರಕ** : - ಹೌದು, ಪಾಪ ಅವನಿಗೆ ಕಾಲುಗಳೇ ಇಲ್ಲಾ.

**ನಂದ ನಂದನ** : - ಪ್ರಶ್ನೇ ಕಾಲಿಂದಲ್ಲ, ಗೌರವದ್ದು.

**ಪರಿಚಾರಕ** : - ಯಾರ ಗೌರವ?

**ನಂದ ನಂದನ** : - ಯಾವ ಜಾತಿಯವನೋ? ನೀಚ, ಮನುಷ್ಯರ ಗುರ್ತು ಸಿಗೋಲ್ವಾ?

**ಪರಿಚಾರಕ** : - ಒಳ್ಳೇ ಜಾತೀನ ಕೆಟ್ಟ ಜಾತೀನ ಅನ್ನೊದಕ್ಕೆ ಒರೆಗಲ್ಲಾಗಿಯೇ ನೀನು ಹೋಗ್ತಾ ಇರೋದು?

**ನಂದ ನಂದನ** : - ಹೋಗ್ತಾ ಇರೋದು ಅಂದ್ರೆ? ನನ್ನ ಎಲ್ಲಿಗೆ ಕರ್ಕೊಂಡು ಹೋಗ್ತಿದ್ದೀರಿ?

**ಪರಿಚಾರಕ** : - ನಾನು ಯಾರನ್ನೂ ಕರ್ಕೊಂಡು ಹೋಗ್ತಾ ಇಲ್ಲ. ಮನುಷ್ಯ ಸತ್ತ ಮೇಲೆ ಅವನ ಜೀವನದ ಪಾಪ - ಪುಣ್ಯಗಳ ಲೆಕ್ಕ ಒಪ್ಪಿಸೋಕೆ ಚಿತ್ರಗುಪ್ತನ ದರಬಾರಿಗೆ ಬರಲೇ ಬೇಕು

**ನಂದ ನಂದನ** : - ಚಿತ್ರಗುಪ್ತ? ಯಾರು ಈತ?

**ಪರಿಚಾರಕ** : - ಗೊತ್ತಾಗುತ್ತೆ ಇರು?

**ನಂದ ನಂದನ** : - ಹಾಂಗಾದ್ರೇ ಪಾಪ-ಪುಣ್ಯಗಳ ಲೆಕ್ಕಾಚಾರ ನಡೆಯುತ್ತೆ ಅನ್ನು. ಆಮೇಲೇನಾಗುತ್ತೆ?

**ಪರಿಚಾರಕ** : - ಕಳಿಯೋದು, ಕೂಡೋದು, ಆಮೇಲೆ ಗುಣಾಕಾರ. ನಿನ್ಗೇ ಅವೆಲ್ಲಾ ಗೊತ್ತಾಗುತ್ತೆ. ನಾನು ಜಾಸ್ತಿ ಹೇಳಬೇಕಾಗಿಲ್ಲ.

**ನಂದ ನಂದನ** : - ಚಿತ್ರಗುಪ್ತನ ದರಬಾರಿನಲ್ಲಿ ವಿವೇಕ ಅನ್ನೋದು ಇಲ್ವೇ ಇಲ್ಲ. ಮನುಷ್ಯನಿಗೆ ಹೇಗೆ ಗೌರವ ತೋರಿಸಬೇಕೊಂತಲೂ ಗೊತ್ತಿಲ್ಲ. ಅಲ್ಲದೇ, ವ್ಯವಹಾರದಲ್ಲಿ ಪಕ್ಷಪಾತನೂ ಜಾಸ್ತಿ.

**ಪರಿಚಾರಕ** : - ಅದು ಹೇಗೆ?

**ನಂದ ನಂದನಾ** : - ನೋಡಿದ್ಯಲ್ಲಾ. ಅವನು ಪಲ್ಲಕ್ಕೀಲಿ, ನಾನು ಬರೀಗಾಲಿನಲ್ಲಿ. ನಾನ್ಯಾರು ಅಂತ ಗೊತ್ತಿಲ್ಲೇನು ನಿನಗೆ?

**ಪರಿಚಾರಕ** : - ನನಗೆ ಗೊತ್ತಿಲ್ಲ. ಆದರೇ ನಿನ್ನ ಗತಿ ಏನಾಗುತ್ತೆ ಅಂತ ಗೊತ್ತು.

**ನಂದ ನಂದನ** : - ಏನಾಗುತ್ತೆ?

**ಪರಿಚಾರಕ** : - ಚಿತ್ರಗುಪ್ತನ ಬಾಯಿಂದಲೇ ಕೇಳು.

**(ರಂಗ ಮಂಚದ ಮೇಲೆ ಕತ್ತಲೆ ಆವರಿಸುತ್ತದೆ. ಮತ್ತೆ ಬೆಳಕಾದಾಗ ಮೊದಲಿನಂತೆ ಸಭಾಗೃಹ ಕಾಣುತ್ತದೆ. ಉತ್ತಮ ಚಂದ್ ಮಾತನಾಡುತ್ತಿದ್ದಾನೆ)**

**ಉತ್ತಮ ಚಂದ್** : - ನಿಮಗೆ ನಾನು ಸೇಠ್ ನಂದ ನಂದನರ ವಿಚಾರ ತಿಳಿಸ್ತೇನೆ. ಅವರು ಯಾವ ಕಠಿಣ ಪರಿಸ್ಥಿತಿಯಲ್ಲಿ ಜೀವನ ಆರಂಭಿಸಿದರು, ಅವರು ಯಾವ ರೀತಿ ಮುಂದುವರಿದರು ಅಂತ ಹೇಳ್ತೀನಿ. ನಗರದ ವೃದ್ಧ ಸ್ತ್ರೀಪುರುಷರಿಗೆ ಒಬ್ಬ ಯುವಕ ಜ್ಞಾಪಕ ಇರಬಹುದು. ಅವನು ಬೀದೀಲಿ ಸುತ್ತಾಡುತ್ತಿದ್ದ. ತನ್ನ ನಗುಮುಖದಿಂದ ಎಲ್ಲಾರ ಮನಸ್ಸನ್ನು ಸೂರೆಗೊಳ್ಳುತ್ತಿದ್ದ. ತನ್ನ ಕುಶಲತೆ ಹಾಗೂ ವ್ಯಾಪಾರ ಬುದ್ಧಿಯಿಂದ ಅನೇಕ ವ್ಯಾಪಾರಿಗಳ ಸ್ನೇಹ ಗಳಿಸಿಕೊಂಡ. ಎರಡು ಮೂರು ವರ್ಷದ ನಂತರ ಸುತ್ತು ಹಾಕೋದು ಬಿಟ್ಟು ಒಂದು ಸಣ್ಣ ಅಂಗಡಿ ತೆಗೆದ. ಸ್ವರ್ಗಸ್ಥರಾದ ಸೇಠ್ ನಂದ ನಂದನರವರು ಇದೇ ರೀತಿ ತಮ್ಮ ವ್ಯಾಪಾರ ಶುರು ಮಾಡಿದ್ರು.

**(ಕತ್ತಲು ಮತ್ತೆ ಪ್ರಕಾಶ, ಸೇಠ್ ಚಿತ್ರಗುಪ್ತನ ದರ್ಬಾರಿನಲ್ಲಿದ್ದಾನೆ)**

**ನಂದ ನಂದನ** : - ಇದನ್ನು ಹೇಳೋಕೆ ನಿನಗೇನು ಅಧಿಕಾರ? ನನ್ನ ಬುದ್ಧಿಬಲದಿಂದ, ಬಾಹುಬಲದಿಂದ ಸಂಪಾದಿಸಿದೆ.

**ಚಿತ್ರಗುಪ್ತ** : - ನೀನು ನಿನ್ನ ಶಕ್ತಿಯಿಂದಲೇ ಇಷ್ಟೆಲ್ಲಾ ಸಂಪಾದಿಸಿದಿಯಾ?

**ನಂದ ನಂದನ** : - ಹೌದೌದು, ಎಲ್ಲಾ ನನ್ನ ಶಕ್ತಿಯಿಂದಲೇ.

**ಚಿತ್ರಗುಪ್ತ** : - ನೋಡು. ಈ ವಿಷಯದಲ್ಲಿ ನಿಜ ಹೇಳಿ ಬಿಡು.

**ನಂದ ನಂದನ** : - ನಾನು ಸುಳ್ಳು ಹೇಳ್ತಿದ್ದೇನೆ ಅಂತಲೋ?

**ಚಿತ್ರಗುಪ್ತ** : - ಬಹುಶಃ ನಿನ್ನ ಇಡೀ ಜೀವನದಲ್ಲಿ ಇದೇ ಮೊದಲ ಬಾರಿಗೆ ನಿಜ ಹೇಳ್ತಾ ಇರೋದು.

**ನಂದ ನಂದನ** : - ಇಷ್ಟೊಂದು ಅಪಮಾನ ಸಹಿಸಲಾರೆ.

**ಚಿತ್ರಗುಪ್ತ** : - ಅಪಮಾನದ ವಿಷಯ ಮಾತನಾಡದಿರು. ನಿನ್ನ ಜೀವನದ ಹಾಗೂ ಮನಸ್ಸಿನ ಸೂಕ್ಷ್ಮಾತೀಸೂಕ್ಷ್ಮ ಗುಪ್ತ ವಿಷಯಗಳೆಲ್ಲಾ ನಮಗೆ ಗೊತ್ತು. ನೀನೇ ಸ್ವತಃ ತಪ್ಪು ಒಪ್ಕೋ. ಇದರಿಂದ ನಿನಗೆ ಬಹಳ ಒಳ್ಳೇದು.

**ನಂದ ನಂದನ** : - ನಾನು ಏನೂ ಹೇಳಬೇಕಾಗಿ ಇಲ್ಲ. ನೀನು ಕೇಳಬೇಕಾಗಿಯೂ ಇಲ್ಲ.

**ಚಿತ್ರಗುಪ್ತ** : - ಹಾಗಾದ್ರೆ ಸರಿ. **(ಪರಿಚಾರಕನನ್ನು ಕುರಿತು)** ಹೋಗಿ ಆ ಭೋಗಿಲಾಲ್‌ನ ಕರೆದು ತಾ.

**ನಂದ ನಂದನ** : - ಭೋಗಿಲಾಲನೇ?

**ಚಿತ್ರಗುಪ್ತ** : - ಓ! ಇನ್ನೂ ನಿನಗೆ ಅವನ ಜ್ಞಾಪಕ ಇದೆ.

**ನಂದ ನಂದನ** : - ಇಲ್ಲಿಗೆ ಹೇಗೆ? ಯಾಕೆ ಬಂದ?

**ಚಿತ್ರಗುಪ್ತ** : - ನೀನು ಇಲ್ಲಿ ಬರೋ ಸಮಾಚಾರ ತಿಳಿಯುತ್ತಲೂ ಅವನನ್ನು ಕರೆಸಿದೆ. ಅಗೋ ಬಂದ.

**ನಂದ ನಂದನ** : - **(ಭೋಗಿಲಾಲ್‌ನನ್ನು ನೋಡಿ)** ಭೋಗಿಲಾಲ್ ....

**ಭೋಗಿಲಾಲ್** : - ಹೌದು ನಾನೇ. ಸೇಠ್ ನನ್ನ ಗುರ್ತು ಇದೆಯಲ್ಲಾ?

**ನಂದ ನಂದನ** : -ಏನಪ್ಪಾ ನೀನು ಇಲ್ಲಿ?

**ಭೋಗಿಲಾಲ್** : - ಏನು ಮಾಡೋದು? ಎಲ್ಲಾರೂ ಒಂದು ದಿನ ಈ ಜಾಗಕ್ಕೆ ಬರಲೇಬೇಕು.

**ನಂದ ನಂದನ** : - ನೀನು ಏನು ಹೇಳ್ತಿದ್ದೀಯೋ ನನಗೆ ಅರ್ಥವಾಗುತ್ತಿಲ್ಲ.

**ಚಿತ್ರಗುಪ್ತ** : - ನಾನು ಹೇಳ್ತೀನೆ ಕೇಳು.

**ನಂದ ನಂದನ** : - ನಮ್ಮಿಬ್ಬರ ಮಾತಿನಲ್ಲಿ ಮಧ್ಯ ನೀನ್ಯಾಕೆ ತಲೆ ಹಾಕ್ತೀ?

**ಪರಿಚಾರಕ** : - ಯಾಕೆ? ನಿನಗೆ ಇನ್ನೂ ಭೂಲೋಕದ ಅಮಲು ಹೋಗಿಲ್ವಾ?

**ಚಿತ್ರಗುಪ್ತ** : - ಸೇಠ್. ನೀನು ಎಲ್ಲಾ ನಿನ್ನ ಶಕ್ತಿಯಿಂದಲೇ ಸಂಪಾದಿಸಿದ್ದು ಅಲ್ವಾ?

**ನಂದ ನಂದನ** : - ಹೌದು ನಿಜ.

**ಚಿತ್ರಗುಪ್ತ** : - ಈ ಭೋಗಿಲಾಲನ್ನು ನೋಡಿಯೂ ಹಾಗೆ ಹೇಳ್ತಿಯಾ?

**ನಂದ ನಂದನ** : - ಇದನ್ನ ನಾವು ಯೋಚಿಸಬೇಕು.

**ಪರಿಚಾರಕ** : - ಇಲ್ಲಿ 'ನಾವು' ಅಂತ ಯಾರೂ ಇಲ್ಲ. 'ನಾನು. ನೀನು' ಅಷ್ಟೆ.

**ನಂದ ನಂದನ** : - ಎಂಥಾ ಅಯೋಗ್ಯ. ಸ್ವಾರ್ಥಿ.

**ಚಿತ್ರಗುಪ್ತ** : - ಸೇಠ್ ಇಲ್ಲಿ ಇಂಥಾ ಶಬ್ದಗಳನ್ನು ಹೇಳೋ ಸಾಮರ್ಥ್ಯ ಯಾರಿಗೂ ಇಲ್ಲ. ಯಾಕೆಂದರೆ ನಿನ್ನ ಸ್ವಾರ್ಥಕ್ಕಾಗಿ ಒಬ್ಬ ಒಳ್ಳೇ ಸ್ನೇಹಿತನ ಕತ್ತು ..........

**ನಂದ ನಂದನ** : - ಇದು ಸುಳ್ಳು. ನಾನು ..........

**ಭೋಗಿಲಾಲ್** : - ನಾನು ಹಾಗೇ ಹೇಳಿದ್ನ? ನನ್ನ ನಿನ್ನ ಸಂಬಂಧ ನಾನು ನಿನ್ನ

ಮೇಲಕ್ಕೆತೋದರಲ್ಲಿ ಮತ್ತು ನನ್ನ ಹತ್ತು ಸಾವಿರ ರೂಪಾಯಿಗಳ ಪತ್ರಾನೂ ಇದೆ.

**ನಂದನಂದನ** :- ಆದರೆ .......... ಆದರೆ .........

**ಚಿತ್ರಗುಪ್ತ** :- ಈಗಲೂ ಹೇಳ್ತೀನೆ ಒಪ್ಪಿಕೋ. ಕೊನೆಗಂತೂ ಒಪ್ಪಿಕೊಳ್ಳಲೇ ಬೇಕಲ್ಲ.

**ನಂದ ನಂದನ** :- ಆದರೆ ಈ ವಿಷಯದಲ್ಲಿ ನನ್ನದೇನು ತಪ್ಪಿಲ್ಲ. ನನ್ನ ಹಣ ಕೈಗೆ ಬಂದ ತಕ್ಷಣ ಭೋಗಿಲಾಲನಿಗೆ ಕೊಟ್ಟು ಬಿಡಬೇಕು ಅಂತಿದ್ದೆ. ಆದರೇ ಅಷ್ಟರಲ್ಲೇ ಭೋಗಿಲಾಲ್ ತೀರಿಕೊಂಡ.

**ಚಿತ್ರಗುಪ್ತ** :- ಅಂದ್ರೆ ಭೋಗಿಲಾಲನಿಗೆ ಹಣ ವಾಪಸ್ಸು ಮಾಡೋ ಅವಕಾಶ ಒದಗಲಿಲ್ಲ. ಸರಿ ತಾನೇ?

**ನಂದ ನಂದನ** :- ಹೌದು ......... ಇಲ್ಲ.

**(ಕತ್ತಲೆ, ಬೆಳಕು ಬಂದಾಗ ಮೊದಲಿನಂತೆ ಸಭಾಗೃಹ. ಈ ಸಾರಿ ಶ್ರೀ ಅಗ್ನಿ ಕುಮಾರ್ ಮಾತನಾಡುತ್ತಿದ್ದಾರೆ)**

ಮಹನೀಯರೇ, ಎಲ್ಲಾರ ಬಾಯಿಂದಲೂ ಕೇಳಿಯೇ ಇದ್ದೀರಿ. ಪ್ರಾಮಾಣಿಕತೆಯೇ ಜೀವನಕ್ಕೂ, ವ್ಯವಹಾರಕ್ಕೂ ಆಧಾರ. ಪ್ರಾಮಾಣಿಕತೆ ಅನ್ನೋದು ಹಣಕಾಸಿನ ಲೇವಾದೇವಿಯಲ್ಲಿ ಮಾತ್ರವಲ್ಲ. ಕೈಲಾಸವಾಸಿಗಳಾದ ನಂದ ನಂದನವರು ಇದನ್ನು ಜೀವನದಲ್ಲಿ ಆಚರಣೆಗೆ ತಂದರು. ಇಂತ ಅನೇಕ ಪ್ರಸಂಗಗಳಿಗೆ ನಾನು ಸಾಕ್ಷಿಯಾಗಿದ್ದೆ. ಯಾರಾದರ ಕುರುಡು ಕಾಸು ಅವರ ಹತ್ರ ಇದ್ರೆ ಅದನ್ನು ಅದರ ವಾರಸುದಾರರಿಗೆ ತಲುಪುವವರೆಗೂ ಅವರ ಮನಸ್ಸಿಗೆ ಶಾಂತಿ ಇರುತ್ತಿರಲಿಲ್ಲ. ಅನೇಕ ಹೆಂಗಸರ, ವಿಧವೆಯರ ಹಣ ಅವರಲ್ಲಿ ಇರುತ್ತಿತ್ತು. ಆದರೂ ಅವರ ಪ್ರಾಮಾಣಿಕತೆಯಿಂದ ಪ್ರತಿಯೊಬ್ಬರಿಗೂ ನಂಬಿಕೆ ಹುಟ್ಟಿಸುತ್ತಿದ್ದರು. ಭಗವದ್ಗೀತೆಯ ಆದರ್ಶವೇ ಅವರ ಆಧಾರವಾಗಿತ್ತು ...............

**(ಮತ್ತೆ ಕತ್ತಲೆ. ಬೆಳಕು) (ಚಿತ್ರಗುಪ್ತನ ದರ್ಬಾರು)**

**ನಂದ ನಂದನ** :- ಸುಳ್ಳು ಮಾತಿದು ....... ಸುಳ್ಳು.

**ಮುದುಕಿ ಮಾಲಿ** :- ಇಡೀ ಜೀವನವೇ ಸುಳ್ಳು ಹೇಳಿದ್ದಾನೆ. ಒಪ್ಕೊಳೋದಿಲ್ಲ.

**ನಂದ ನಂದನ** :- ಏನು ಒಪ್ಕೊಳ್ಳೋದು, ನಿನ್ನ ತಲೆ.

**ಚಿತ್ರಗುಪ್ತ** :- ಸೇಠ್, ನಿನ್ನಲ್ಲಿ ಅನೇಕ ಜನ ತಮ್ಮ ಹಣಾನ ಜೋಪಾನವಾಗಿಡಲು ಬರುತ್ತಿದ್ದರು, ಇದು ನಿಜ ತಾನೇ?

**ನಂದ ನಂದನ** :- ಹೌದು, ನನ್ನ ಪ್ರಭಾವ ಹಾಗಿತ್ತು. ಆದ್ದರಿಂದ ಎಲ್ಲಾರೂ ಹಣ ಇಡುತ್ತಿದ್ದರು. ನಾನು ಅದಕ್ಕೆ ಸರ್ಪಕಾವಲು ಇರಬೇಕಾಗಿತ್ತು. ಅದಕ್ಕೆ ಬದಲು ನನಗೆ ಸಿಕ್ಕಿದ್ದು ಕೆಟ್ಟ ಹೆಸರು.

**ಮುದುಕಿ ಮಾಲಿ** :- ಸೇಠ್, ನೀನು ಇಂತಹವನು ಅಂತ ಗೊತ್ತಿರಲಿಲ್ಲ.

**ನಂದ ನಂದನ** :- ಮಾಲಿ ಬಹೆನ್, ನೀನು ನನ್ನನ್ನು ಏನಂತ ತಿಳಿದಿದ್ದಿಯಾ? ಅದಕ್ಕೂ, ನನಗೂ ಏನು ಸಂಬಂಧ? ನಾನು ಬೇರೆ ಕೆಲ್ಸ ಮಾಡಬೇಕಿತ್ತೋ ಇಲ್ವೋ?

**ಚಿತ್ರಗುಪ್ತ** :- ಬೇರೆ ಕೆಲಸ ಅಂದ್ರೇ, ಧನ ಪ್ರಾಪ್ತಿ? ಹಣ ಸಂಪಾದನೆ ತಾನೆ?

**ನಂದ ನಂದನ** :- ಹೌದು. ಕರ್ತವ್ಯ ಪೂರೈಸಲೇ ಬೇಕು. ಅಲ್ವೇನು?

**ಚಿತ್ರಗುಪ್ತ** :- ಅದೇ ನಾನು ಹೇಳ್ತಾ ಇರೋದು. ಅದನ್ನು ಇಟ್ಕೊಳ್ಳೋದು ಹಣ

ಸಂಪಾದನೆಯ ಮಾರ್ಗವಾಗಿತ್ತು ಅಲ್ವೇನೂ? ಎಷ್ಟು ಜನರ ಹಣಾನಾ ನೀನು ವಾಪಸ್ಸು ಮಾಡಿದೆ? ಎಷ್ಟು ಜನರ ಗಂಟು ಹೊಡೆದೆ? ಹೇಳು?

**ನಂದ ನಂದನ** : - ಇದು ಸುಳ್ಳು.

**ಚಿತ್ರಗುಪ್ತ** : - ಈ ಮಾಲಿ ಬಹೆನ್‌ಳ ಹಣ ವಾಪಸ್ಸು ಕೊಟ್ಟೆಯೇನು?

**ನಂದ ನಂದನ** : - ಇಲ್ಲ. ಆ ಹಣ ಅವಳಿಗೆ ಸೇರಿದ್ದೇ ಅಲ್ಲ.

**ಮುದುಕಿ** : - ಹಾಗಾದ್ರೇ ಯಾರದು?

**ನಂದ ನಂದನ** : - ದಾನ ಧರ್ಮದ್ದು. ಮುದುಕಿ ಹಾಗೇ ಅಂತ್ಲೇ ಹೇಳಿ ಕೊಟ್ಟಿದ್ದು.

**ಮುದುಕಿ** : - ಪಾಪೀ! ಸುಳ್ಳು ಹೇಳ್ತೀಯಾ? ನಾನು ಆ ರೀತಿ ಹೇಳಲೇ ಇಲ್ಲ.

**ನಂದ ನಂದನ** : - ವಾರಸುದಾರರಿಲ್ಲದಿದ್ದರೆ ಆ ಹಣ ದಾನ ಧರ್ಮದ್ದು ತಾನೇ?

**ಚಿತ್ರಗುಪ್ತ** : - ಅಂದ್ರೇ, ವಾರಸುದಾರ ಇಲ್ದಿದ್ರೇ ಅದನ್ನು ಅನುಭವಿಸುವವನು ನೀನು?

**ನಂದ ನಂದನ** :- ನೀವೆಲ್ಲಾ ಒಂದೇ ತರಾ ಯೋಚ್ನೇ ಮಾಡ್ತಿರಾ. ಅದರ ಅರ್ಥ ಗೊತ್ತಾ?

**ಚಿತ್ರಗುಪ್ತ** : - ಒಬ್ಬರ ಇಡೀ ಜೀವನದ ಗಳಿಕೆಯನ್ನು ಕಸಿದುಕೊಂಡು, ಅವರು ಹೊಟ್ಟೆಗಿಲ್ಲದೆ ಸಾಯುವ ಹಾಗೇ ಮಾಡೋದು. ಇದೇ ತಾನೆ ನಿನ್ನ ಅರ್ಥ?

**ನಂದ ನಂದನ** : - ನನಗೆ ಇಲ್ಲಿ ನ್ಯಾಯ ದೊರೆಯುವುದಿಲ್ಲ ಅಂತ ಕಾಣುತ್ತೆ.

**ಚಿತ್ರಗುಪ್ತ** : - ಕಾರಣ ಇಷ್ಟೇ . ನಿಜವಾದ ನ್ಯಾಯ ಯಾವುದು ಅಂತ ಗೊತ್ತೇ ಇಲ್ಲ ನಿನಗೆ.

**(ಕತ್ತಲೆ-ಪ್ರಕಾಶ. ಶ್ರೀ ಚೇತನ್‌ರವರು ಭಾಷಣ ಮಾಡುತ್ತಿದ್ದಾರೆ)**

**ಚೇತನ್** : - ನನ್ನ ಮನಸ್ಸಿನಲ್ಲಿ ಒಂದು ನಂಬಿಕೆ ಬೇರೂರಿ ಬಿಟ್ಟಿದೆ. ಮನುಷ್ಯ ಪ್ರಪಂಚದಲ್ಲಿ ಎಷ್ಟು ಸತ್ಕಾರ್ಯಗಳನ್ನು ಮಾಡುತ್ತಾನೋ ಅದರ ಹಿಂದೆ ಕೀರ್ತಿಪಡೆಯಬೇಕೆಂಬ ಆಸೆ, ಅಭಿಲಾಷೆ ಇದ್ದೇ ಇರುತ್ತದೆ. ಆದರೆ ಸೇಠ್ ನಂದನದಾಸರು ದಾನ ಮಾಡುವಾಗ ಕೀರ್ತಿಲಾಲಸೆಯಾಗಲೀ, ಪ್ರಪಂಚ ಮೆಚ್ಚಿಕೊಳ್ಳಲಿ ಅಂತ ಭಾವನೆ ಇರಲಿಲ್ಲ. ಸೇಠ್‌ರವರು ಸುಖ ದುಃಖಗಳೆರಡನ್ನೂ ಅನುಭವಿಸಿದವರು ............

**(ಕತ್ತಲೆ-ಬೆಳಕು. ಚಿತ್ರಗುಪ್ತನ ಸಭಾಗೃಹ)**

**ಚಿತ್ರಗುಪ್ತ** : - ಹಾಗಾದ್ರೇ, ನೀನು ದಾನ ಧರ್ಮ ಮಾಡಿದ್ದು ಕೀರ್ತಿ ಪಡೆಯಬೇಕು ಅಂತಾ?

**ನಂದ ನಂದನ** :- ನೀನು ಇದೆಂತಹ ಪ್ರಶ್ನೇ ಕೇಳ್ತಾ ಇದ್ದೀಯಾ? ನಾನು ಮಾಡೋದರಲ್ಲೂ ಒಂದು ಇದ್ದೇಶ ಇದೆ. ದುಃಖ ನೋಡುವುದಿಕ್ಕೆ ನನ್ನ ಕೈಲಾಗುವುದಿಲ್ಲ.

**ಚಿತ್ರಗುಪ್ತ** :- ನಿನಗೆ ದುಃಖ ನೋಡೋದಕ್ಕಾಗಲ್ಲ ಅನ್ನೋ ಸ್ಥಿತಿ ಯಾವಾಗ ಬರುತ್ತೆ?

**ನಂದ ನಂದನ** : - ಮನುಷ್ಯನಿಗೆ ಹೃದಯ ಇದ್ದರೆ ಈ ಸ್ಥಿತಿಗೆ ಕಾಯಬೇಕಾಗಿಲ್ಲ.

**ಚಿತ್ರಗುಪ್ತ** : - ಹೌದೇನು? **(ಮಾತು ಬದಲಾಯಿಸಿ)** ನಿನಗೆ ಮಾಲತಿ ಗೊತ್ತಾ?

**ನಂದ ನಂದನ** : - ಮಾಲತಿ? ಯಾವ ಮಾಲತಿ?

**ಚಿತ್ರಗುಪ್ತ** :- ಸ್ವಲ್ಪ ಜ್ಞಾಪಕ ಮಾಡ್ಕೋ. ನಿನ್ನ ಬಂಗಲೆಯ ಪಕ್ಕದಲ್ಲಿ ಒಂದು ಕುಟುಂಬ ಇತ್ತು. ಅಲ್ಲಿ ವಿಧವೆಯಾದ ಸೊಸೆ ಇದ್ದಳು.

**ನಂದ ನಂದನ** : - ಹಾ! ಜ್ಞಾಪಕ ಬಂತು. ಅದರಿಂದೇನು?

**ಚಿತ್ರಗುಪ್ತ** : - ಏನೂ ಇಲ್ಲ. ಅನಾಥಾಶ್ರಮಕ್ಕೂ ನಿನಗೂ ಸಂಬಂಧ ಆಗೋಕ್ಕೆ ಈ ಮಾಲತೀನೇ ಕಾರಣ. ಇದೇ ಕಾರಣದಿಂದ ನೀನು ವಿಧವಾಶ್ರಮಕ್ಕೂ ಸಹಾಯ ಮಾಡಿದೆ.

**ನಂದ ನಂದನ** : - ಅಂದ್ರೇ ನೀನು ಹೇಳೋದು, ನಾನು ಪ್ರಪಂಚದಲ್ಲಿ ಅತಿ ದೊಡ್ಡ ಪಾಪಿ ಅಂತ.

**ಚಿತ್ರಗುಪ್ತ** : - ಪಾಪ ಅಂದ್ರೆ ನೀನು ಏನರ್ಥ ತಿಳಿದುಕೊಂಡಿದ್ದೀಯ? ಆದರೇ ನೀನು ಮಾಲತಿ ದುಃಸ್ಥಿತಿಗೆ ಈಡಾದಾಗ ಅನಾಥಾಶ್ರಮಕ್ಕೆ ಸಹಾಯ ಮಾಡಿದೆ. ಇದೆಲ್ಲ ನಿಜವಲ್ಲವೇನು?

**ನಂದ ನಂದನ** : - ಇದಕ್ಕಾಗಿ ಮನುಷ್ಯನಿಗೆ ದೊಡ್ಡ ಸ್ಥಾನ ಸಿಗಬೇಕು.

**ಚಿತ್ರಗುಪ್ತ** : - ನಿನಿಗೆ ಸಿಕ್ಕಿದೆ. ನೀನು ಬದುಕ್ಕಿದಾಗ್ಲೂ, ಸತ್ತಿದಾಗ್ಲೂ ನಿನ್ನನ್ನು ದಾನವೀರ ಅಂತ್ಲೇ ಕರಿಯುತ್ತಿದೆ ಈ ಪ್ರಪಂಚ. ಇಷ್ಟೊಂದು ಗೌರವ ಸಾಲದೇನು?

**ನಂದ ನಂದನ** : - ನಾನು ಅವುಗಳನ್ನು ಪಾಪ ಅಂತ ತಿಳಿಯೋಲ್ಲ. ನಾನು ಗೀತೆಯ ಉಪದೇಶವನ್ನು ಜೀವನದಲ್ಲಿ ಆಚರಣೆಗೆ ತಂದಿದ್ದ ಗೌರವಾನೂ ........

**ಚಿತ್ರಗುಪ್ತ** : - ಕರ್ಮಯೋಗಿಯ ಆದರ್ಶ?

**(ಕತ್ತಲೆ-ಬೆಳಕು. ಶಕ್ತಿ ಶರಣರ ಭಾಷಣ)**

**ಶಕ್ತಿಶರಣ** : - "ನಮ್ಮ ದೇಶದಲ್ಲಿ ಹಣವಂತರದ್ದೇ ಒಂದು ಬೇರೆ ರಾಜ ನೀತಿ. ಕಳ್ಳನಿಗೆ ಕನ್ನ ಹಾಕು ಅನ್ನೋದು. ಸಾಹುಕಾರರಿಗೆ ಹುಷಾರಾಗಿರಿ ಅಂತ ಹೇಳೋದು. ಜನರ ಭಾವನೆಗಳನ್ನು ದುರುಪಯೋಗ ಪಡಿಸಿಕೊಳ್ಳುವುದು ಇವರ ಉದ್ದೇಶ. ಆದರೆ ಸದ್ಗತಿ ಪಡೆದ ನಂದ ನಂದನರ ರಾಷ್ಟ್ರಪ್ರೇಮ, ಅವರ ದೇಶ ಭಕ್ತಿ, ಸಿದ್ಧಾಂತ ನಿಷ್ಠೆ, ಹಾಗೂ ದಾನ ಶೂರತೆ ನಿಜವಾಗಿಯೂ ಅಪ್ರತಿಮವಾದದ್ದು. ತ್ಯಾಗ ಮಾಡೋದರಲ್ಲಿ ಅವರು ಹಿಂಜರಿಯಲಿಲ್ಲ. ಅವರ ವ್ಯವಹಾರದಲ್ಲಿ ಉಜ್ವಲ ದೇಶಪ್ರೇಮ ಉದಾಹರಣೆ ಸಿಕ್ಕುತ್ತವೆ.

**(ಕತ್ತಲೆ-ಬೆಳಕು, ಚಿತ್ರಗುಪ್ತನ ದರಬಾರು)**

**ಚಿತ್ರಗುಪ್ತ** : - ಸೇಠ್, ಈಗ ನಿನ್ನ ದೇಶಸೇವೆಯ ಬಗ್ಗೆ ಮಾತಾಡೋಣ.

**ನಂದ ನಂದನ** : - ಈ ವಿಷಯದಲ್ಲಿ ಮಾತನಾಡುವುದು ಏನಿದೆ? ಅದು ನನ್ನ ಕರ್ತವ್ಯ. ಆ ಕರ್ತವ್ಯ ನಾನು ಪೂರೈಸಿ ಆಯ್ತು.

**ಚಿತ್ರಗುಪ್ತ** : - ಖಂಡಿತ ಸರಿ. ಏನು ಪೂರೈಸಿದ್ದಿ ಅನ್ನುವುದು ನನ್ನ ಪ್ರಶ್ನೆ?

**ನಂದ ನಂದನ** : - ದೇಶಭಕ್ತರಿಗೆ ಚಂದಾಹಣ ಕೊಟ್ಟಿದ್ದೇನೆ. ಅವರ ಲೇವಾದೇವಿ ವಿಷಯದಲ್ಲಿ ಒಂದು ಚಕಾರನೂ ಎತ್ತಿಲ್ಲ.

**ಚಿತ್ರಗುಪ್ತ** : - ಆದರೇ ಸರಕಾರಿ ನೌಕರರಿಗೂ ಹಣ ಕೊಟ್ಟೆಯಲ್ಲ?

**ನಂದ ನಂದನ** : - ಹೌದು ನಿಜ. ನಿನಗೆ ವ್ಯವಹಾರ ಜ್ಞಾನ ಇಲ್ಲ. ಪ್ರಪಂಚದಲ್ಲಿ ಹೇಗೆ ಬಾಳ ಬೇಕು ಅಂತ ನಿನಗೆ ಗೊತ್ತಿಲ್ಲ. ಅಲ್ಲಿ ಮಣ್ಣಿಗೂ ಬೆಲೆಯಿದೆ. ಸಮಯ ಬಂದಾಗ ಪ್ರತಿವಸ್ತುವಿಗೂ ಬೆಲೆ ಇರುತ್ತದೆ.

**ಚಿತ್ರಗುಪ್ತ** : - ಆ ಸ್ವದೇಶ ಚಳುವಳಿಯಲ್ಲಿ ಏನಾಯ್ತು?

**ನಂದ ನಂದನ** : - ಅದಕೋಸ್ಕರ ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡ್ದೆ. ದೇಶದಲ್ಲಿ ಸ್ವದೇಶಿ ವಸ್ತುಗಳ ಬಳಕೆ ಜಾಸ್ತಿಯಾಗಲಿ ಅಂತ.

**ಚಿತ್ರಗುಪ್ತ** : - ಇದರಲ್ಲಿ ನಿನಗೆ, ನಿನ್ನ ಕಾರ್ಖಾನೆಗೆ ಎಷ್ಟು ಲಾಭ ಬಂತು? ಸ್ವದೇಶಿ ಅಂತ ಹೇಳಿ, ಎಲ್ಲಾ ಸ್ವದೇಶಿಯನ್ನೇ ಕೊಟ್ಟಿದ್ದೀಯಾ?

**ನಂದ ನಂದನ** : - ಸ್ವದೇಶಿ ಅನ್ನೋದಿಕ್ಕೆ ನೀನು ಎಷ್ಟು ಕಷ್ಟವಾದ ಅರ್ಥ ಕೊಡ್ತಿದ್ದೀಯಲ್ಲ.

**ಚಿತ್ರಗುಪ್ತ** : - ನೀನು ಮಾರಿದ್ದೆ ಸ್ವದೇಶಿ. ಈ ಅರ್ಥ ನಿನಗೆ ಒಪ್ಪಿಗೆಯಾಗುತ್ತಲ್ವೇ?

**ನಂದ ನಂದನ** : - ಜನರ ಬೇಡಿಕೆಗಳನ್ನು ಪೂರೈಸಬೇಕು ಅನ್ನುವುದೇ ನನ್ನ ದೃಢ ನಿರ್ಧಾರವಾಗಿತ್ತು.

**ಚಿತ್ರಗುಪ್ತ** : - ನೀನು ಕಪ್ಪು ಮಾರುಕಟ್ಟೆ ನಿರ್ನಾಮ ಸಮಿತಿಯಲ್ಲಿದ್ದಿ. ಸರಿಯಾ?

**ನಂದ ನಂದನ** : - ಹೌದು, ನಾನು ಅದರ ಪ್ರಮುಖನಾಗಿದ್ದೆ.

ಚಿತ್ರಗುಪ್ತ : - ಹಾಗಾದರೆ ಸರಿ, ನೀನು ವ್ಯವಹಾರ ಬುದ್ಧಿಯುಳ್ಳವನಾಗಿದ್ದ. ನಿನ್ನ ಸಮಿತಿ ಚೆನ್ನಾಗಿ ನಡೆಯಬೇಕಾದರೆ ಕಪ್ಪು ಮಾರುಕಟ್ಟೆ ಇರಲೇ ಬೇಕು, ಇಲ್ಲದಿದ್ದರೆ ನೀವು ನಿರ್ನಾಮ ಮಾಡುವುದಾದರೂ ಏನನ್ನು?

**ನಂದ ನಂದನ** : - ನಿಜ ಹೇಳಬೇಕು ಅಂದರೆ ಈಗೀಗ ನಿನ್ನ ಮೇಲೆ ನನಗೆ ಭಾರಿ ಆಸಕ್ತಿ ಉಂಟಾಗುತ್ತದೆ. ನನ್ನ ಜೊತೆಗಿದ್ದರೆ ನಿನ್ನನ್ನು ವ್ಯವಹಾರ ಕುಶಲನ್ನನ್ನಾಗಿ ಮಾಡಬಲ್ಲೆ.

**ಚಿತ್ರಗುಪ್ತ** : - ನಾನು ನಿನಗೆ ಆಭಾರಿ. ಆದರೆ ನನಗೆ ಆ ಸೌಭಾಗ್ಯ ದೊರೆಯಲಾರದು

**ನಂದ ನಂದನ** : - ಯಾಕೆ? ಕಾರಣವೇನು?

**ಚಿತ್ರಗುಪ್ತ** : - ಇಷ್ಟೆ. ನಿನ್ನ ಮೊಕದ್ದಮೆ ಮುಕ್ತಾಯ ಆಯ್ತು. ತೀರ್ಪು ಕೊಡಬೇಕಾಗಿದೆ.

**ನಂದ ನಂದನ** : - ಯಾವ ತೀರ್ಪು?

**ಚಿತ್ರಗುಪ್ತ** : - ಅದೇ ಆಗ್ಲೆ ಹೇಳಿದ್ದೇನಲ್ಲ, ಕೂಡೋದು ಕಳಿಯೋದು ಮುಗಿತು. ಈಗ ಗುಣಕಾರ ಆಗುತ್ತೆ

**(ಕತ್ತಲೆ, ಪ್ರಕಾಶ. ಕೊನೆಯಾಗಿ ಭಾಯಿ ಸಾಹೇಬರು ಭಾಷಣ ಮಾಡುತ್ತಿದ್ದಾರೆ)**

"ಇಂತಹ ಒಬ್ಬ ಶ್ರೇಷ್ಠ ಪುರುಷನ ನಿಧನದಿಂದಾಗಿ ನಮ್ಮ ನಗರದ ಜನರು ತಲ್ಲಣಿಸಿದ್ದಾರೆ. ಅವರ ಜಾಗವನ್ನು ತುಂಬ ತಕ್ಕವರು ಯಾರೂ ಇಲ್ಲ. ಜೀವನದಲ್ಲಿ ನನಗೆ ಉಪನಿಷತ್ತುಗಳ ಪರಮ ಆದರ್ಶವಾದ "ತೇನ ವ್ಯಕ್ತೇನಾ ಮುಂಜೀಥಾಂ" ಇದರ ಪ್ರತ್ಯಕ್ಷ ಪ್ರಮಾಣ ವೈಕುಂಠವಾಸಿಗಳಾದ ನಂದನಂದನರಲ್ಲಿ ಗೋಚರಿಸಿತು. ಇದು ನನ್ನ ಸೌಭಾಗ್ಯವೆಂದು ತಿಳಿದಿದ್ದೇನೆ. ಬೈಬಲಿನ ಒಂದು ವಾಕ್ಯ ಈ ಸಮಯದಲ್ಲಿ ಜ್ಞಾಪಕ ಬರುತ್ತಿದೆ. ಸೂಜಿಯ ಮೊನೆಯಿಂದ ಒಂದು ಒಂಟೆ ಹಾದು ಹೋಗಬಹುದು, ಆದರೇ ಹಣವಂತರಿಗೆ ಸ್ವರ್ಗದ ಬಾಗಿಲು ತೆಗೆದಿರುವುದಿಲ್ಲವೆಂದು. ಆದರೆ ಈ ದಿನ ಸದ್ಗತಿಯನ್ನು ಪಡೆದ ನಂದನಂದನರು ಈ ವಾಕ್ಯವನ್ನು ಸುಳ್ಳಾಗಿಸಿದ್ದಾರೆ. ಸೂಜಿಯ ಮೊನೆಗೆ ಅಪವಾದವಾಗಿದ್ದ ಅವರಿಗೆ ಭಗವಂತನು ಅಮರವಾದ ಶಾಂತಿಯನ್ನು ಕೊಡಲಿ.

**(ಕತ್ತಲು. ಬೆಳಕು. ರಂಗಮಂಚದ ಮೇಲಿರುವ ಸಭಾಗೃಹ ಖಾಲಿ. ಹೊರಬರುತ್ತಿರುವ ಪ್ರೇಕ್ಷಕರು ಖಾಲಿ ಖುರ್ಚಿಗಳ ಬಳಿ ನೇತು ಹಾಕಲ್ಪಟ್ಟ ಶೋಕ ಸಭೆಯ ಆಮಂತ್ರಣವನ್ನು ನಿರ್ವಿಕಾರ ಭಾವದಿಂದ ನೋಡುತ್ತಿದ್ದಾರೆ. ತೆರೆ ಬೀಳುತ್ತದೆ)**

**(ತೆರೆ)**

## ಪಾತ್ರವರ್ಗ

ಸರ್ ಅಮಲ್

ನಂದ ರಾಯ್

ದೀಪಕ

ಡಾಕ್ಟರ್

ಮೈನಾ

ಊರ್ಮಿ

[ 17 ಮೇ 1930. ರಾತ್ರಿ ಎಂಟು ಗಂಟೆಯ ಸಮಯ. ಗ್ರಾಮ ದೇವಿ ಮಾರ್ಗದಲ್ಲಿ ಸರ್ ಅಮಲ್ ರವರ ಬಿಲ್ಡಿಂಗ್‌ನ ಮೂರನೇ ಅಂತಸ್ತಿನ ಒಂದು ದಿವಾನ ಖಾನ. ವಿದ್ಯುತ್ ದೀಪಗಳು ಬೆಳಗುತ್ತಿವೆ. ಉತ್ತರ ಮತ್ತು ದಕ್ಷಿಣದ ಗೋಡೆಗಳ ಬಳಿ ಇರುವ ಕೊಠಡಿಗಳ ಬಾಗಿಲುಗಳು ಎದರು ಬದರಾಗಿವೆ. ಪೂರ್ವಕ್ಕೆ ಮೇಲೆ ಹೋಗುವ ಮಾರ್ಗ ಚಿಹ್ನ ಇದ್ದು ಮತ್ತೆ ತೋಟಕ್ಕೆ ಇಳಿಯುವಂತೆ ಮೆಟ್ಟಿಲುಗಳಿವೆ. ಪಶ್ಚಿಮಕ್ಕೆ ಇರುವ ಕಿಟಕಿ ಬೀದಿಯ ಕಡೆ ತೆರೆಯುತ್ತದೆ.

ಕೋಣೆಯ ನೆಲಕ್ಕೆ ರತ್ನಗಂಬಳಿ ಹಾಸಿದೆ. ಗ್ರೀಕ್ ಮೂರ್ತಿಗಳನ್ನು ಮೂಲೆಯಲ್ಲಿ ಇಡಲಾಗಿದೆ. ಕೆಂಪು ಮಖಮಲ್ಲಿನ ಸೋಫಾಗಳಿವೆ. ಮಧ್ಯದಲ್ಲಿ ಮೇಜು, ಮೇಜಿನ ಮೇಲೆ ಹೂದಾನಿ ಇದೆ. ಗೋಡೆಗಳ ಮೇಲೆ ಗವರ್‌ನರ್ ಮತ್ತು ವೈಸ್‌ರಾಯರ ಚಿತ್ರಗಳಿವೆ. ಒಂದು ಕಡೆ ಚಿನ್ನದ ಚೌಕಟ್ಟು ಇರುವ ನೈಟೇ ಹುಡ್‌ನ ಪ್ರಶಸ್ತಿ ಪತ್ರವಿದೆ.

ಪಶ್ಚಿಮ ದಿಕ್ಕಿನ ಕಿಟಕಿಯ ಬಳಿ ಮಂಚದ ಮೇಲೆ ಎಂಟು ವರ್ಷದ ದೀಪಕ್ ಜ್ವರದಿಂದ ಚಡಪಡಿಸುತ್ತಿದ್ದಾನೆ. ಹಣೆಯ ಮೇಲೆ ಬಿಳೀ ಪಟ್ಟಿ ಇದೆ. ಅದರಲ್ಲಿ ರಕ್ತದ ಕಲೆಗಳಿವೆ. ತಲೆಯ ಭಾಗದಲ್ಲಿ ದೀಪಕ್‌ನ ತಾಯಿ ಕುಳಿತಿದ್ದಾಳೆ. ಅವಳ ಪಕ್ಕದಲ್ಲಿ ದೀಪಕನ ಒಂಬತ್ತು ವರ್ಷದ ಅಕ್ಕ ಕೂತಿದ್ದಾಳೆ. ಕುರ್ಚಿಗಳ ಮೇಲೆ ದೀಪಕನ ತಂದೆ ಅಮಲ್, ಡಾಕ್ಟರ್, ಪೋಲಿಸ್ ಅಧಿಕಾರಿ ನಂದರಾಯ್ ಮತ್ತು ಇತರರು ವ್ಯಾಕುಲಚಿತ್ತರಾಗಿ ಕುಳಿತಿದ್ದಾರೆ.

ಸ್ವಲ್ಪ ಹೊತ್ತು ಕೈಗಡಿಯಾರ ನೋಡುತ್ತಿದ್ದು ಡಾಕ್ಟರ್ ಎದ್ದು ದೀಪಕನ ಬಳಿ ಹೋಗುತ್ತಾರೆ]

**ಡಾಕ್ಟರ್** : - ಮೈನಾವರೆ ಸ್ವಲ್ಪ ಥರ್ಮಾಮಿಟರ್ ಕೊಡಿ. **(ಮೈನಾ ಕೊಡುತ್ತಾಳೆ)** ಜ್ವರ ಹೆಚ್ಚುತ್ತಲೇ ಇದೆ.

**ಅಮಲ್** : - **(ಒಣ ದನಿಯಲ್ಲಿ)** ಎಷ್ಟಿದೆ?

**ಡಾಕ್ಟರ್** : - ನೂರ ನಾಲ್ಕು. ಮಂಜುಗಡ್ಡೆ ಇಡಬೇಕು. ಆದರೆ ಹಣೆಯ ಮೇಲಿನ ಗಾಯ ಆಳವಾಗಿದೆ. ಮಂಜುಗಡ್ಡೆ ಇಡುವಂತಿಲ್ಲ. **(ದೀಪಕನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು)** ಮಗೂ, ಈಗ ಹೇಗಿದ್ದಿ? ತಲೆ ನೋಯುತ್ತಾ?

**ಮೈನಾ** :- ಮಗೂ ಡಾಕ್ಟರ್ ಕೇಳ್ತಿದ್ದಾರೆ. ಹೇಳಪ್ಪಾ, ಹೇಗಿದ್ದಿ? ತಲೆನೋವು ಹೋಯ್ತಾ?

**ದೀಪಕ್** :- **(ಕಣ್ಣುಗಳನ್ನು ನಿಧಾನವಾಗಿ ತೆರೆಯುತ್ತಾನೆ)** ಅಮ್ಮಾ, ತಲೆ ತುಂಬಾ ನೋಯ್ತಾ ಇದೆ. ಅಮ್ಮಾ ಉರ್ಮಿ ಎಲ್ಲಿ?

**ಮೈನಾ** : - ಉರ್ಮಿ, ನಿನ್ನ ಪಕ್ಕದಲ್ಲೇ ಇದ್ದಾಳಪ್ಪ. ನೀನು ಬಿದ್ದುಬಿಟ್ಟಾಗಿನಿಂದ ಅಳುತ್ತಿದ್ದಾಳೆ. **(ಉರ್ಮಿ ಅಳಲು ಶುರು ಮಾಡುತ್ತಾಳೆ. ಮೈನಾ ಅವಳ ತಲೆ ನೇವರಿಸುತ್ತಾಳೆ)**

**ದೀಪಕ್** : - ಉರ್ಮಿ, ಅಳಬಾರದು ಗೊತ್ತಾಯ್ತಾ? ರಾಷ್ಟ್ರಧ್ವಜವನ್ನು ಏರಿಸೋಣಾಂತ ಮಹಡಿಯ ಮೇಲೆ ಹತ್ತಿದ್ದೆ. ಅಪ್ಪ ನೋಡಿ ಬಿಟ್ಟಾರೂ ಅಂತ ಹೆದರಿಕೆ ಆಯ್ತು. ಅವಸರದಲ್ಲಿ ಬಿದ್ದು ಬಿಟ್ಟೆ. ಇದರಲ್ಲಿ ನಿಂದೇನೂ ತಪ್ಪಿಲ್ಲ

**ಅಮಲ್** : - ಆ ಧ್ವಜವನ್ನು ಮರೆತು ಸ್ವಲ್ಪ ಸುಮ್ಮನಿರು ದೀಪಕ್

**ನಂದರಾಯ** : - ಆ ಧ್ವಜದಿಂದಾನೇ ಇಷ್ಟೆಲ್ಲಾ ಅನಾಹುತ ಆಗಿದ್ದು. ಸಾವಿರಾರು ಜನ

ಸತ್ತರೂ ಇನ್ನೂ ಜನರಿಗೆ ಈ ಹುಚ್ಚು ಬಿಟ್ಟಿಲ್ಲ. ಮುಖಂಡರೆಲ್ಲಾ ಜೈಲಿನಲ್ಲಿ ಕೂತು ತೂಕಡಿಸುತ್ತಾ ಇದ್ದಾರೆ. ನಿನ್ನಂಥ ಕುರಿಮರಿಗಳು ಈ ತರಹ ಕೆಲ್ಸ ಮಾಡ್ತಿದ್ದಾರೆ.

**ದೀಪಕ್** :- ಆ ಮಾತು ಹೇಳಬೇಡ ನಂದಾ ಚಿಕ್ಕಪ್ಪ. ಅಮ್ಮಾ, ನಾನು ಬಿದ್ದಾಗ ಅತ್ತಿಲ್ಲ, ಅಲ್ವೇನಮ್ಮಾ? ಯಾಕೆ ಅಳಬೇಕು? ನಾನು ಧ್ವಜ ಹಾರಾಡಿಸುತ್ತಾ ಬಿದ್ದೆ.

**ಅಮಲ್** :- ಧ್ವಜದ ಮಾತು ಮರಿ. ನೀನು ಪಾಪ ಮಾಡ್ದೆ. ಅದ್ಕೆ ದೇವರು ನಿನಗೆ ಈ ರೀತಿ ಶಿಕ್ಷೆ ಕೊಟ್ಟ. ನೀ ಯಾಕೆ ಇದನ್ನ ಅರ್ಥ ಮಾಡ್ಕೊಳೋದಿಲ್ಲ.

**ದೀಪಕ್** :- ನಾನು ಹೇಗೆ ಮರಿಯಲಿ. ಕಣ್ಣು ಮುಚ್ಚಿದ್ರೂ ನನಗೆ ಬಿಳಿ, ಹಸಿರು ಮತ್ತು ಕೇಸರಿ ಬಣ್ಣ ಕಾಣುತ್ತದೆ.

**ಅಮಲ್** :- **(ಕಠೋರವಾಗಿ)** ದೀಪಕ್ ....

**ಡಾಕ್ಟರ್** :- ಸ್ವಾಮಿ, ನೀವು ಈ ರೀತಿ ಮಾತನಾಡಿದರೆ ಅವನು ಉದ್ರೇಕಗೊಳ್ಳುತ್ತಾನೆ. ದಯವಿಟ್ಟು ..........

**ಮೈನಾ** :- ಮಗೂ, ಒಂದೆರಡು ಗಳಿಗೆ ಮಲಗಿ ನಿದ್ರೇ ಮಾಡಪ್ಪ.

**ದೀಪಕ್** :- ಅಮ್ಮಾ, ನಮ್ಮ ಮೇಷ್ಟ್ರು ಏನು ಹೇಳ್ತಿದ್ದರು ಗೊತ್ತಾ? ಕೊರಿಯದಲ್ಲಿ ನನ್ನಂಥ ಸಾವಿರಾರು ಮಕ್ಕಳು ಧ್ವಜಕೋಸ್ಕರ ಪ್ರಾಣ ಕೊಟ್ರಂತೆ. ಅವರ ತಂದೆ ತಾಯಿಗಳಿಗೆ ಹೆಮ್ಮೆ ಅಂತೆ. ಆದ್ರೇ ಅಪ್ಪ ಯಾಕೆ ರೇಗಾಡ್ತಾರೆ?

**ಮೈನಾ** :- ಮಲಕೋಪ್ಪ ಮಗು.

**ದೀಪಕ್** :- ಉರ್ಮಿ, ಮಧ್ಯಾಹ್ನ ಅಮ್ಮ ಮಲಗಿದ್ದಾಗ ನೀನು ಬಂದು ಅಪ್ಪ ನಮ್ಮ ರಾಮನ ಮಗ ಸುಂದರ್‌ನನ್ನು ಹೊಡೆದು ಬಂದಿಸಿದ್ದಾರೆ ಅಂತ ಹೇಳಿದ್ಯಲ್ಲ, ಅವನ್ನ ಬಿಟ್ರೋ ಇಲ್ವೋ?

**ಉರ್ಮಿ** :- **(ಹೆದರಿ)** ಅಪ್ಪ, ಅವನ್ನ ಇನ್ನೂ ಬಿಟ್ಟಿಲ್ಲ. ರಾಮನ್ನ ಇಲ್ಲಿಂದ ಕಳಿಸಿ ಬಿಡೋಣ ಅಂತ ಹೇಳ್ತಾ ಇದ್ದಾರೆ. ಸುಂದರನ ತಾಯಿ ಮತ್ತು ರಾಮ ಇಬ್ಬರೂ ಅಳ್ತಾ ಇದ್ದಾರೆ.

**ದೀಪಕ್** :- ಅಪ್ಪಾ, ಯಾಕೆ ನೀನು ಹೀಗೆ ಮಾಡ್ತಿ? ಇದರಲ್ಲಿ ಸುಂದರನದೇನೂ ತಪ್ಪಿಲ್ಲ. ಅವನು ಧ್ವಜ ಎತ್ತಿಕೊಳ್ಳಲ್ಲ ಅಂತ ಹೇಳ್ತಾ ಇದ್ದ. ನಾನು ಅವನಿಗೆ ಕೆಲ್ಸ ಬಿಡಿಸ್ತೀನಿ ಅಂತ ಹೇಳ್ದೆ. ಅದಕ್ಕೆ ಅವನು ಹೆದರಿಕೊಂಡೆ ಹೋದ. ಅವನದೇನೂ ತಪ್ಪಿಲ್ಲ. ಅಪ್ಪ ಅವನನ್ನು ಬಿಟ್ಟು ಬಿಡಿ, ರಾಮನ್ನ ಕೆಲ್ಸಕ್ಕೆ ಇಟ್ಕೊಳ್ಳಿ. ಇಲ್ದಿದ್ರೇ ನಾನೂನೂ .......... ನಾನೂನೂ .......

**ಅಮಲ್** :- **(ಕನಿಕರದಿಂದ ದೀಪಕನ ಬಳಿ ಹೋಗಿ)** ಮಗೂ, ನೀನು ಹೇಳಿದ ಹಾಗೆ ಮಾಡ್ತೀನಿ. ಈಗ ನಿದ್ರೆ ಮಾಡು.

**ದೀಪಕ್** :- ಅಪ್ಪಾ, ನೀವು ನನ್ನ ಹತ್ರಾನೇ ಕುಳಿತಿರಬೇಕು. ನೀನುನೂ ಉರ್ಮಿ, ಅಮ್ಮಾ ನೀನುನೂ ಹಾಂ, ಇವತ್ತು ನೀವೆಲ್ಲಾ ನನ್ನ ಹತ್ರಾನೇ ಇರಿ.

**ಮೈನಾ** :- ನಾವೆಲ್ಲಾ ಇಲ್ಲೇ ಇದ್ದೀವಿ ಚಿನ್ನಾ. ನೀನು ಮಲಕ್ಕೋ.

**ದೀಪಕ್** :- ನನಗೆ ನಿದ್ರೇನೇ ಬರೋಲ್ಲ, ಉರ್ಮಿ ಹೋಗಿ ಧ್ವಜ ಹಾರಾಡ್ತಾ ಇದೆಯೋ ಇಲ್ವೋ ನೋಡಿ ಬಾ.

**ಅಮಲ್** :- ಅದು ಹಾರಾಡ್ತನೇ ಇದಿಯೋ. ಈಗ ಸುಮ್ಮನಿರು ಮಾತಾಡಬೇಡ.

**ದೀಪಕ್** :- ಏನಂದೆ ಅಪ್ಪ, ಮುರಿದು ಬೀಳ್ತಾ ಇದೆಯಾ? ನಮ್ಮ ಬಂಗ್ಲೆ ಬಿದ್ದು ಹೋಗ್ತಾ

ಇದೆಯಾ? ಯಾಕೆ ಗೊತ್ತ ಅಪ್ಪ, ನೀವು ನಿಮ್ಮ ಬಂಗಲೆಯ ಮೇಲೆ ರಾಷ್ಟ್ರಧ್ವಜ ಹಾರಿಸಲಿಲ್ಲ, ಅದಕ್ಕೆ.

**ಮೈನಾ** : - ಈಗ ಮಲಕ್ಕೋ ಅಪ್ಪ. ಇಲ್ದಿದ್ರೇ ತಲೆ ನೋವು ಬರುತ್ತೆ.

**(ದೀಪಕ್ ಕಣ್ಣು ಮುಚ್ಚುತ್ತಾನೆ. ಶಾಂತಿ, ಆಮೇಲೆ ಮತ್ತೆ ಕಣ್ಣು ಬಿಡುತ್ತಾನೆ)**

**ದೀಪಕ್** : - ಉರ್ಮಿ ನೋಡು, ಸರಿಯಾಗಿ ಒಂಬತ್ತು ಗಂಟೆಗೆ ನಾನು ತಿರುಗಾಡುವುಕ್ಕೆ ಹೋಗಬೇಕು. ನೀನು ಬರುವ ಹಾಗಿದ್ದಾರೆ ಬಾ. ಸುಂದರನಿಗೂ ಹೇಳಿ ಬಿಡು. **(ಮತ್ತೆ ಕಣ್ಣು ಮುಚ್ಚುತ್ತಾನೆ. ಡಾಕ್ಟರ್ ಶಥಪಥ ತಿರುಗುತ್ತಿದ್ದಾರೆ. ಸರ್ ಅಮಲ್ ಕಿಟಕಿಯ ಬಳಿ ಹೋಗಿ ಕಣ್ಣು ಒರೆಸಿಕೊಳ್ಳುತ್ತಾರೆ. ಮೈನಾ ಅಳುತ್ತಿದ್ದಾಳೆ, ದೀಪಕ್ ಕಣ್ಣು ಬಿಡುತ್ತಾನೆ)** ಅಮ್ಮಾ, ನೀನು ಬರ್ತೀಯಾ ತಾನೆ, ಅಪ್ಪ ಬೇಡ. **(ಕಣ್ಣು ಮುಚ್ಚಿ, ಏದುಸುರು ಬಿಡುತ್ತಾನೆ)**

**ನಂದರಾಮ್** : - ನಾನು ಹೋಗ್ತೇನೆ ಸಾಹೇಬ್ರೆ. ಏನಾದರೂ ಕೆಲಸ ಇದ್ರೆ ಫೋನ್ ಮಾಡಿ.

**ಅಮಲ್** : - ಸರಿ, ನೀವು ಹೋಗ ಬಹುದು.

**(ನಂದರಾಮ್ ಹೋಗುತ್ತಾನೆ, ಸ್ವಲ್ಪ ಹೊತ್ತು ಮೌನ. ದೂರದಲ್ಲಿ ಮೆರವಣಿಗೆ ಹಾಗೂ ಹಾಡಿನ ಧ್ವನಿ ಕೇಳಿ ಬರುತ್ತುದೆ)**

**ಮೂವತ್ತು ಕೋಟಿ ಶಿರ ಬಾಗುವೆವು**
**ಭಾರತದ ಹೇ ಧರ್ಮ ಧ್ವಜ**
**ನವಲಕ್ಷ ಆಶಿರ್ವಾದ ಕೊಡು**
**ಭಾರತದ ಹೇ ಕರ್ಮ ಧ್ವಜ**

**ದೀಪಕ್** : - **(ಬೆಚ್ಚಿ ಕಣ್ಣು ಬಿಡುತ್ತಾನೆ)** ಅಮ್ಮಾ ಸಂಧ್ಯ ಫೇರಿ ಬರ್ತಾ ಇದೆ. ನನ್ನ ಕಿಟಕಿ ಹತ್ತಿರ ಕರ್ಕೊಂಡು ಹೋಗು. ಬೇಗ ನಾನು ಎಲ್ಲರನ್ನೂ ನೋಡಬೇಕು.

**ಮೈನಾ** : - ನಾಳೇನೂ ಬರುತ್ತಾರೆ. ಈಗ ಮಲಕ್ಕೋ ಮಗು.

**ದೀಪಕ್** : - **(ಹಠ)** ನನ್ನ ಕಿಟಕಿ ಹತ್ರ ಕರ್ಕೊಂಡು ಹೋಗಿ.

**ಡಾಕ್ಟರ್** : - ಅವನು ಹೇಳಿದ ಹಾಗೆ ಮಾಡಿ.

**(ಎಲ್ಲಾರೂ ಮಂಚ ಎತ್ತಿಕೊಂಡು ಕಿಟಕಿಯ ಬಳಿ ಹೋಗುತ್ತಾರೆ. ದೀಪಕನ ಮುಖ ಬೆಳಗುತ್ತದೆ. ಹಾಡು)**

**ಆಕಾಶವೇ ಅದರ ಪತಾಕೆ**
**ಹಿಮಪರ್ವತವೇ ದಂಡ**
**ಸಂಸ್ಕೃತಿಯ ಜಗದಂಗಳದಿ**
**ಧ್ವಜ ಕಾಣುತ್ತಿದೆ ಸ್ವಚ್ಛಂದ**

**ದೀಪಕ್** : - ಅಮ್ಮಾ, ಎಷ್ಟು ಮುದ್ದಾದ ಗೀತೆ. ನಿನಗೆ ಬರೋಲ್ವ ಅಮ್ಮ. ಬಂದರೆ ಹಾಡ್ತಿಯಾ?

**(ಕೆಳಗಡೆಯಿಂದ ಬರುವ ಧ್ವನಿಯಲ್ಲಿ ಈಗ ಮೈನಾಳ ಧ್ವನಿ ಸೇರುತ್ತದೆ)**

**ಗಾಂಧೀಜಿಯ ಸ್ವಚ್ಛತೆಯಿಂದ**
**ಇದಕ್ಕೆ ಕೊಟ್ಟರು ಬಿಳಿಯ ಬಣ್ಣ**
**ಭಗತ ಜತೀನರು ತಮ್ಮ ರಕ್ತದಿ**

**ಇದಕ್ಕೆ ಕೊಟ್ಟರು ಕೆಂಪು ಬಣ್ಣ**
**ಶಾಂತಿ ಪ್ರತೀಕವು ಹಸಿರು ಬಣ್ಣ**
**ಭಾರತದ ಹೇ ಧರ್ಮ ಧ್ವಜ.**

**(ಕೆಳಗೆ ಹಾದು ಹೋಗುತ್ತಿರುವ ಮೆರವಣಿಗೆಯಿಂದ ದೀಪಕನಿಗೆ ಜೈ ಎಂಬ ಧ್ವನಿ ಬರುತ್ತದೆ. ಮೆರವಣಿಗೆ ಹಾದು ಹೋಗುತ್ತದೆ)**

**ದೀಪಕ್** : - ಅಮ್ಮ, ಅವರು ಯಾರಿಗೆ ಜೈ ಎಂದು ಕೂಗಿದ್ದು?

**ಮೈನಾ** : -ದೀಪಕನಿಗೆ

**ದೀಪಕ್** : - ದೀಪಕ್ ಯಾರು?

**ಮೈನಾ** : - ನೀನೇ ಮಗು. ನೀನು ಮಧ್ಯಾನ್ಹ ಧ್ವಜ ಹಾರಿಸೋಕ್ಕೆ ಹೋಗಿ ತಲೆ ಒಡೆದುಕೊಂಡೆಯಲ್ಲ, ಅದಕ್ಕೆ ದೀಪಕನಿಗೆ ಜಯವಾಗಲಿ ಅಂತ ಕೂಗ್ತಾ ಇದ್ದಾರೆ.

**ದೀಪಕ್** : - ಅಮ್ಮಾ, ಬಾವುಟ ಹಾರಿಸುವವರಿಗೆಲ್ಲಾ ಜೈ ಅಂತ ಕೂಗ್ತಾರಾ? **(ಆಕಾಶದ ಕಡೆ ನೋಡ್ತಾನೆ)** ಅಲ್ಲಿ ನೋಡಮ್ಮಾ ನಕ್ಷತ್ರಗಳು ಕಣ್ಣಿನಿಂದ ಸನ್ನೇ ಮಾಡುತ್ತಿವೆ. ನಾನು ಇವತ್ತು ಒಂಬತ್ತು ಗಂಟೆಗೆ ತಿರುಗಾಡೋದಿಕ್ಕೆ ಹೋಗಬೇಕು. ನೀನು ಬರ್ತೀಯಾ?

**ಮೈನಾ** : - ಬರ್ತೀನಿ ಮಗೂ.

**ದೀಪಕ್** : - ಅಮ್ಮ, ಆಕಾಶದಲ್ಲಿ ನಕ್ಷತ್ರಗಳು ಕಾಣಿಸುತ್ತೆಯಲ್ಲ, ನಮ್ಮ ಕೋಣೆಲೂ ಯಾಕೆ ಕಾಣಿಸಬಾರದು? ಬಂಗಲೆಯ ಮೇಲೆ ಧ್ವಜ ಹಾಕಿ ಬಿಟ್ರೆ ಕೋಣೆಯಲ್ಲೂ ನಕ್ಷತ್ರಗಳೂ ಕಾಣಿಸಿಕೊಳ್ಳುತ್ತವೆಯ? ಅಮ್ಮಾ ನನಗೆ ನಿದ್ರೆ ಬರುತ್ತಿದೆ. ನಾನು ನಿದ್ರೆ ಮಾಡದ್ರೂ ನೀನು ಹೋಗಬಾರದು. ಸರಿಯಾಗಿ ಒಂಬತ್ತು ಗಂಟೆಗೆ ಎಬ್ಬಿಸು. ಮತ್ತೇ ನೀನು, ಉರ್ಮಿ, ಸುಂದರ್ ತಯಾರಾಗಿರಿ. ಅಮ್ಮ, ಮಧ್ಯಾಹ್ನ ಉರ್ಮಿ ಹೇಳ್ತಾ ಇದ್ಲು. ಪಟ್ಟಿ ಕಟ್ಟಿಕೊಂಡಾಗ ನನ್ನ ಮುಖ ಚೆನ್ನಾಗಿ ಕಾಣುತ್ತದೆ ಎಂದು, ಸ್ವಲ್ಪ ಕನ್ನಡಿ ಕೊಡು ನೋಡೋಣ. **(ಸರ್ ಅಮಲ್ ಕನ್ನಡಿ ತರುತ್ತಾರೆ. ದೀಪಕ್ ನೋಡುತ್ತಾನೆ)** ಅಮ್ಮಾ, ಪಟ್ಟಿನೂ ರಾಷ್ಟ್ರ ಧ್ವಜ ಇದ್ದ ಹಾಗಿದೆ. ಚರಖಾ ಕೊಡಿಸಿ ಅಂತ ಎಷ್ಟು ಸಲ ಹೇಳಿದ್ರೂ ಅಪ್ಪ ತರ್ಲೇ ಇಲ್ಲ. **(ಕೋಪದಿಂದ)** ತಗೊಂಡು ಹೋಗು ನಿನ್ನ ಕನ್ನಡಿ. ನಿಮ್ಮ ಕನ್ನಡಿಯಲ್ಲಿ ನಾನು ನೋಡೋದೇ ಇಲ್ಲ. **(ಅಮಲ್ ಕನ್ನಡಿ ತೆಗೆದುಕೊಂಡು ಹೋಗುತ್ತಾರೆ)** ಅಮ್ಮ, ನಾನು ತಿರಗಾಡೋಕೆ ಹೋದಾಗ ಜೈಲಿಗೆ ಪತ್ರ ಬರೆದು ಗಾಂಧೀಜಿಯವರಿಗೆ ದೀಪಕ್ ತಿರುಗಾಡಲು ಹೋಗಿದ್ದಾನೆ ಅಂತ ತಿಳಿಸಿ ಬಿಡು. ಆಮೇಲೆ ದೀಪಕ್ ಎಲ್ಲಿ ಹೋದ್ರು ಧ್ವಜ ಹಾರಿಸ್ತಾನೇ ಇರ್ತಾನೇ ಅಂತ ಬರಿ.

**ಮೈನಾ** : - ಖಂಡಿತಾ ಬರ್ತೀತೀನಿ ಚಿನ್ನಾ, ಈಗ ಮಲಗು.

**ದೀಪಕ್** : - ನಾನು ನಿದ್ದೇ ಮಾಡ್ತೀನಿ ಆದ್ರೆ ಸರಿಯಾಗಿ 9 ಗಂಟೆಗೆ, ಹಾಂ

**(ದೀಪಕ ಕಣ್ಣು ಮುಚ್ಚುತ್ತಾನೆ)**

**ಸರ್ ಅಮಲ್** : - **(ಹತ್ತಿರ ಹೋಗಿ)** ಮಲಗಿದ ಅಂತ ಕಾಣುತ್ತೆ.

**ಮೈನಾ** : - ಹೌದು, ಆದರೇ. **(ಅಳುತ್ತಾಳೆ)**

**ಡಾಕ್ಟರ್** : - ದೇವರ ಮೇಲೆ ನಂಬಿಕೆ ಇಡಿ. ಎಲ್ಲಾ ಸರಿ ಹೋಗುತ್ತೆ.

**ಮೈನಾ** : - ನಿಮಗೆ ಮಕ್ಕಳಿವ?

**ಡಾಕ್ಟರ್** : - ಹಾಗಾದ್ರೇ ನೀವು ಸುಮ್ನಿರಿ.

**ಅಮಲ್** : - ಮೈನಾ. ಹೀಗೆ ಹೇಳೋ ಅಧಿಕಾರ ನಿನಗಿದೆ. ನನ್ನ ಮನಸ್ಸಿನ ಸ್ಥಿತಿ ನಿನಗೆ ಅರ್ಥವಾಗೋ ಹಾಗಿದ್ದರೆ.

**ಮೈನಾ** : - **(ಅಳುತ್ತಾ)** ಈಗ ನನ್ನ ಮನಸ್ಸೇ ಇಲ್ಲ.

**ಅಮಲ್** : - ಇರಬಹುದು ಮೈನಾ.

**ಮೈನಾ** : - ವ್ಹಾ! ಎಂತ ತಂದೆ. ಎಷ್ಟು ಸಮಾಧಾನದಿಂದ್ದಿರಿ.

**ಅಮಲ್** : - ಮೈನಾ. ನಾನು ಗಂಡಸು.

**ಮೈನಾ** : - ಆದರೇ ನಾನು ತಾಯಿ. ದೀಪಕ್ ನನ್ನ ಬಿಟ್ಟು.

**(ಗಡಿಯಾರದಲ್ಲಿ 9 ಹೊಡೆಯುತ್ತದೆ. ದೀಪಕ್ ಎಚ್ಚರಗೊಳ್ಳುತ್ತಾನೆ)**

**ದೀಪಕ್** : - ಅಮ್ಮ 9 ಗಂಟೆ ಆಯಿತಲ್ಲ. ನಡೀ ನಡೀ ಈಗ ತಿರಗಾಡೋದಿಕ್ಕೆ ಹೋಗ್ಬೇಕು. ಆದ್ರೆ ಅಮ್ಮ ಈಗ ಮನಸ್ಸು ಬದಲಾಯಿಸಿದೆ. ನಾನೊಬ್ಬನೆ ಹೋಗಬೇಕು. ಅಪ್ಪಾ ಊರ್ಮಿ ನಾನು ಹೋಗ್ತೀನಿ. ಅಮ್ಮಾ ನಾನು ಬರೋದು ಹೊತ್ತಾದ್ರೆ ಕಾಯಬೇಡ. ಗೊತ್ತಾಯ್ತಾ?

**(ದೀಪಕ್ ಕಣ್ಣು ಮುಚ್ಚುತ್ತಾನೆ)**

**ಮೈನಾ** : - ದೀಪಕ್. ದೀಪಕ್. **(ಅವಳ ಧ್ವನಿ ಒಡೆಯುತ್ತದೆ. ದೀಪಕನ ಶರೀರ ನಿರ್ಜೀವವಾಗಿರುತ್ತದೆ. ಊರ್ಮಿ ಅಳತೊಡಗುತ್ತಾಳೆ)**

**ಡಾಕ್ಟರ್** : - **(ಹತ್ತಿರ ಹೋಗಿ ನಾಡಿ ನೋಡಿ)** ದೀಪಕ್ ಇನ್ನಿಲ್ಲ.

**ಅಮಲ್** : - **(ಎರಡೂ ಕೈಗಳಿಂದ ಕಿಟಕಿಯ ಬಳಿ ಹೋಗಿ ತಲೆ ಚಚ್ಚಿಕೊಳ್ಳುತ್ತಾರೆ. ನಂತರ ಟೆಲಿಫೋನ್ ಬಳಿ ಹೋಗುತ್ತಾರೆ)** ಎಸ್. ಒನ್. ಫೋರ್. ನಾಟ್ ಸೆವೆನ್. **(ಸ್ವಲ್ಪ ಹೊತ್ತಾದ ಮೇಲೆ)** ಹೌದು. ತಾವು ಯಾರು? ಸ್ವಯಂಸೇವಕರ? ಹೌದು. ಸ್ವಲ್ಪ ಶಿಶಿರ ಕುಮಾರರನ್ನು ಕರೀತೀರಾ ? ಎಲ್ಲಿ ಮೀಟಿಂಗಿಗೆ ಹೋಗಿದ್ದಾರಾ? ಬರೋಲ್ಲ ಅಂದ್ರೆ ಹೇಗೆ? ಸರ್ ಅಮುಲ್ ಯಾವುದೋ ಜರೂರೀ ಕೆಲಸಕ್ಕೆ ಒಂದೆರಡು ನಿಮಿಷ ಕರಿತಿದ್ದಾರೆ ಅಂತ ಹೇಳಿ.

**(ಬೀರುವಿನ ಬಳಿ ಹೋಗಿ ಒಂದೇ ಗುದ್ದಿನಿಂದ ಚೂರು, ಚೂರು ಮಾಡುತ್ತಾರೆ. ಕೈಯಿಂದ ರಕ್ತ ಬರುತ್ತದೆ. ರಕ್ತ ರಂಜಿತವಾದ ಕೈಗಳಿಂದ ದೀಪಕನ ಪಾದಗಳನ್ನು ಮುಟ್ಟುತ್ತಾರೆ. ಪಾದಗಳ ಮೇಲೆ ತಲೆಯಿಟ್ಟು ಅಳುತ್ತಾರೆ)**

**ಅಮಲ್** : - ಮಗನೇ. ಇವತ್ತು ನಿನ್ನ ತಂದೆಗೆ ಹೊಸ ಜನ್ಮ ಕೊಟ್ಟೆ.

**(ಮತ್ತೆ ಟೇಲಿಫೋನ್ ಬಳಿ ಹೋಗಿ ಎತ್ತಿಕೊಳ್ಳುತ್ತಾರೆ)**

ಹೌದು. ತಾವು ಯಾರು? **(ಕೇಳಿ)**

ಶಿಶಿರ ಕುಮಾರರೇನು?

ಹಾ! ನಾನೇ. ನಾಳಿನ ದೊಡ್ಡ ಮೆರವಣಿಗೆಯ ಮುಂದಾಳತ್ವವನ್ನು ಸರ್ ಅಮಲ್ ವಹಿಸಿಕೊಳ್ಳುತ್ತಾರೆ ಅಂತ ತಕ್ಷಣ ಎಲ್ಲಾ ಕಡೆಗಳಲ್ಲೂ ತಿಳಿಸಿ ಬಿಡಿ. ಹಾ! ಗೊತ್ತಾಯ್ತು. ಧನ್ಯವಾದಗಳು.

**(ಟೆಲಿಫೋನ್ ದದಾರನೆ ಇಟ್ಟು ಪಕ್ಕದ ಕೋಣೆಗೆ ಹೋಗುತ್ತಾರೆ)**

**(ತೆರೆ)**

## ಪಾತ್ರ ವರ್ಗ

ರಾವ್ ಸಾಹೇಬ್ ಮೆಹ್ತಾ

ವಸಂತ

ಸರಳಾ

ಪೋಲಿಸ್ ಧಫೇದಾರ

[ಕಾಲ 1943ರ ಒಂದು ಮಧ್ಯಾಹ್ನ. ಸ್ಥಳ : - ಬೊಂಬಾಯಿ ಪೋಲಿಸ್ ಸಿ.ಐ.ಡಿ ಅಧಿಕಾರಿ ರಾವ್ ಸಾಹೇಬ್ ಮೆಹ್ತಾರವರ ಕೊಟಡಿ. ಕೊಟಡಿಯಿಲ್ಲಿ ಆಫೀಸಿನಲ್ಲಿ ಇರುವಂತಹ ಫರ್ನಿಚರ್‌ಗಳು. ಪರದೆ ಸರಿಯುತ್ತಿದ್ದಂತೆ ರಾವ್ ಸಾಹೇಬ್‌ರವರು (ಯಾರದೋ : ನಿರೀಕ್ಷೆಯಲ್ಲಿ ಕೊಟಡಿಯಲ್ಲಿ ಶಥಪಥ ತಿರುಗುತ್ತಿದ್ದಾರೆ. 60 ವರ್ಷ ವಯಸ್ಸಾದರೂ ಇನ್ನೂ 45 - 50 ವರ್ಷದವರಂತೆ ಕಾಣುತ್ತಾರೆ. ದಫೇದಾರ ಖೈದಿ ವಸಂತ ಶುಕ್ಲಾನನ್ನು ಕರೆದುಕೊಂಡು ಕೊಟಡಿಯೊಳಗೆ ಬರುತ್ತಾನೆ. ವಸಂತನ ವಯಸ್ಸು ಸುಮಾರು 24 - 25 ಇರಬಹುದು.]

**ರಾ. ಮೆಹತಾ** : - **(ಆತ್ಮೀಯತೆಯಿಂದ)** ಓಹೋ, ಬನ್ನಿ ಮಿ. ಶುಕ್ಲಾ, please ಕುತ್ಕೊಳ್ಳಿ. [ಈ ಕುರ್ಚಿಲಿ ಕುತ್ಕೊಳ್ಳಿ. **[ದಫೇದಾರನಿಗೆ]** ನೀನು ಹೋಗಬಹುದು. ಆದರೆ ಹೊರಗಡೆ ಗಮನ ಇರಲಿ.

**ದಫೇದಾರ** : - **(ಸಲ್ಯೂಟ್ ಹೊಡೆದು)** ಆಗಲಿ ಸಾರ್.**(ಹೋಗುತ್ತಾನೆ)**

**ರಾ. ಮೆಹ್ತಾ** : - ಅರೇ, ನಿಂತೇ ಇದ್ದಿರಲ್ಲ, ಕುತ್ಕೊಳ್ಳಿ ಮಿ. ಶುಕ್ಲಾ. **(ಒಂದು ನಿಮಿಷದ ನಂತರ)** ಅಂ, ಅಂದಹಾಗೆ ನಿಮಗೆ ಏರ್ಪಾಡು ಹೇಗಿದೆ? ಏನೂ ತೊಂದರೆ ಇಲ್ಲವೇನು?

**ವಸಂತ್** : - ಇಲ್ಲ, ಏನೂ ತೊಂದರೆ ಇಲ್ಲ. ಎಲ್ಲಾ ಸರಿಯಾಗಿದೆ ರಾವ್ ಸಾಬ್.

**ರಾ. ಮೆಹ್ತಾ** : - ಹಾಗಿದ್ರೆ ಸರಿ ಬಿಡಿ, ನೀವೇ ನೋಡ್ತಾ ಇದ್ದಿರಲ್ಲ ಈ ಪೋಲಿಸ್ ಕೆಲಸ, ಕೋಮಲ ಹೃದಯದ ವ್ಯಕ್ತಿ ಕೂಡ ಕಠೋರನಾಗಿ ಬಿಡ್ತಾನೆ. ನೋಡಿ ಈ ಡಿಪಾರ್ಟ್‌ಮೆಂಟಿನವರಿಗೆ ಕೊಲೆಗಡುಕ ಮತ್ತು ನಿಮ್ಮಂಥ ಕ್ರಾಂತಿಕಾರಿಗಳು ಇಬ್ಬರೂ ಒಂದೇ.

**ವಸಂತ್** : - ಹೌದು ಮತ್ತೇ .........

**ರಾ. ಮೆಹ್ತಾ** : - ಆದರೇ ಇವರಿಗೆಲ್ಲಾ ನನ್ನದೊಂದು ಆಜ್ಞೆ. ರಾಜಕೀಯ ಬಂದಿಗಳನ್ನು ಅವನು ಸತ್ಯಾಗ್ರಹಿಯಾಗಿರಲಿ ಅಥವಾ ನಿಮ್ಮಂಥಾ ........ ಏನು ಹೇಳ್ಲಿ? ನನಗೆ ಶಬ್ದಗಳೇ ಹೊಳಿತಾ ಇಲ್ಲ, ಹಿಂಸೆ, ಅಹಿಂಸೆಯ ಚಿಂತೆಯೇ ಇಲ್ಲದ ನಿಮ್ಮಂಥಾ ಕ್ರಾಂತಿಕಾರಿಗಳು....... ಅವ್ರಿಗೆ ಏನಾದರೂ ಕಿಂಚಿತ ತೊಂದರೆ ಕೊಟ್ಟರೂ ಮಾರನೆಯ ದಿನವೇ ಕೆಲಸ ಹೋಯ್ತು ಅಂತ ಇಟ್ಕೊಳ್ಳಿ. ಏನೇ ಇರಲೀ.... **(ಆತ್ಮೀಯತೆಯಿಂದ)** ಭಾರತಮಾತೆಯ ಸೇವೆಗಾಗಿ, ಬಿಡುಗಡೆಗಾಗಿ ತಾನೇ ಇದನ್ನೆಲ್ಲಾ ಮಾಡ್ತಿರೋದು.

**ವಸಂತ್** : - **(ನಗುತ್ತಾ)** ಓ, ಏನೂ ರಾವ್ ಸಾಹೈಬ್ರಿಗೂ 42ರ ಗಾಳಿ ತಗಲ್ತೇನು?

**ರಾ. ಮೆಹ್ತಾ** : - ಯಾಕೆ ತಗಲ್ಬಾರ್ದು? ನಾನೇನು ಈ ಭಾರತದ ಪ್ರಜೆ ಅಲ್ಲವೇನು? **(ಜೋರಾಗಿ)** ಆದ್ರೇ ನಾನು ನಿಮ್ಮ ಸ್ಥಾನದಲ್ಲಿದ್ದಿದ್ರೆ ನಿಮ್ಮ ಜೊತೆಗಾರರಂಥವರನ್ನು ಎಂದೂ ಹುಡುಕ್ಕೊಕ್ಕೆ ಆಗ್ತಿರಲಿಲ್ಲ.

**ವಸಂತ್** : - **(ಆಶ್ಚರ್ಯದಿಂದ)** ನಿಮಗೆ ಇದೂ ಗೊತ್ತಾಗಿ ಬಿಟ್ಟದೆಯೇನೂ? ನನಗೆ ಜೊತೆಗಾರರು ಇದ್ದಾರೆ ಅಂತ?

**ರಾ. ಮೆಹ್ತಾ** : - ನೀವು ಗಂಡಸು ಮಿ. ವಸಂತ್, ಅದ್ದರಿಂದ ನೀವು ನಿಮ್ಮ ಸ್ನೇಹಿತರ

ಬಗ್ಗೆ ಮುಚ್ಚಿಟ್ಟಿರೋದು ಸರಿ. ಆದ್ರೆ ನಿಮ್ಮೆದುರಿರೋರು ಹಾಗೆ ಪುರುಷರೇ ಆಗಿರ ಬೇಕಲ್ಲವೇ?

**ವಸಂತ್** : - ಅಂದ್ರೇ .......

**ರಾ. ಮೆಹ್ತಾ** : - ಅಂದರೇ ಇದರ ಅರ್ಥವಾ? ಆ ನರೇಂದ್ರನಿಗೆ ನಾಲ್ಕು ಒದೆ ಒದ್ದ ತಕ್ಷಣ ಎಲ್ಲಾ ವಿಷಯವನ್ನೂ ಹೇಳಿಬಿಟ್ಟ.

**ವಸಂತ್** : - **(ತಿಳಿಯದವನಂತೆ)** ಯಾವ ನರೇಂದ್ರ?

**ರಾ.ಮೆಹ್ತಾ:-(ನಗುತ್ತಾ)** ನೀವೇನು ತಿಳಿಯದವರಂತೆ ಆಡ್ತೀರಾ. ಆದ್ರೇ ನರೇಂದ್ರ ತನ್ನ ಮಾತುಗಳಿಂದ್ಲೇ ಸಿಕ್ಕಿಹಾಕಿಕೊಂಡು ಬಿಟ್ಟ. ಮಿ. ವಸಂತ್ ನನ್ನ ಡೈರಿ ಓದುತ್ತೇನೆ ಕೇಳಿ. **(ಡ್ರಾಯರ್‌ನಿಂದ ಡೈರಿ ತೆಗೆದು ಓದುತ್ತಾನೆ)** ಅಂ...... ಇಲ್ಲ ....... ಹೆಸರು ಹೇಳೊಲ್ಲ. ಗುಪ್ತ ನಿರ್ದೇಶನಗಳ ಆದೇಶದಂತೆ ನಾನು ಎಲ್ಲಾ ಕೆಲಸವನ್ನೂ ಮಾಡುತ್ತೇನೆ. ಅವನು ಆಗ್ಗಾಗ್ಗೆ ಅಚ್ಯುತ, ಲೋಹಿಯಾ ಮುಂತಾದವರನ್ನೂ ಭೇಟಿ ಮಾಡುತ್ತಿದ್ದ ಮತ್ತು ಅವರ ಸೂಚನೆಗಳಂತೆ ಕೆಲಸ ಮಾಡುತ್ತಿದ್ದ. ಒಂದು ದಿನ ...... ಕ್ಷಮಿಸಿ, ಎಲ್ಲಾ ಹೇಗೆ ಹೇಳೋಕ್ಕಾಗುತ್ತೆ ...... ನಿಮಗೆ ಸ್ವಲ್ಪ ಒಳ್ಳೆ ಸ್ನೇಹಿತರು ಸಿಗಬೇಕಾಗಿತ್ತು.

**ವಸಂತ್** : - ನಿಮ್ಮ ಸಹಾನುಭೂತಿಗಾಗಿ ನಾನು ಕೃತಜ್ಞನಾಗಿದ್ದೇನೆ. ಮಿ. ರಾವ್ ಸಾಬ್.

**ರಾ. ಮೆಹ್ತಾ** : - ನಿಮ್ಮ ವ್ಯಂಗ್ಯ ನನಗೆ ಅರ್ಥವಾಗುತ್ತೆ ಮಿ. ಶುಕ್ಲಾ. ಆದರೂ ನಿಮ್ಮ ಬಗ್ಗೆ ನನಗೆ ಸಹಾನುಭೂತಿ ಇದೆ. ನೀವಿನ್ನೂ ಚಿಕ್ಕವರು. ನಿಮಗೆ ಗೊತ್ತಿರಲಾರದು. ನಿಮ್ಮ ತಾಯಿ ಮತ್ತು ನಾನು ಚಿಕ್ಕಂದಿನಲ್ಲಿ ಒಟ್ಟಿಗೆ ಕಾಲ ಕಳೆದವರು. ಮುಂದೆ ನಿಮ್ಮ ತಾಯಿಯ ಮದುವೆಯಾಗಿ ಬೇಗ ತೀರಿಕೊಂಡರು. ನಿಮ್ಮ ಪತ್ರಗಳಿಂದ ನೀವು ಯಾರು ಎಂದು ತಿಳಿಯಿತು. ಹಾಗಾಗಿ ನಾನೇ ಸ್ವತಃ ಈ ಕೇಸನ್ನು ಕೈಗೆ ತೆಗೆದುಕೊಂಡೆ.

**ವಸಂತ್** : - ರಾವ್ ಸಾಹೇಬರೇ, ಒಂದು ವಿನಂತಿ.

**ರಾ. ಮೆಹ್ತಾ** : - ಹೇಳಿ. ಮನಸ್ಸಿನಲ್ಲಿ ಏನೂ ಇಟ್ಕೊಳ್ಳದೆ ಧೈರ್ಯವಾಗಿ ಹೇಳಿ. ಆ ಮಾತುಗಳು ನಮ್ಮಿಬ್ಬರ ಹೊರತು, ಮೂರನೇ ಯಾವ ವ್ಯಕ್ತಿಗೂ ...........

**ವಸಂತ್** : - **(ನಗುತ್ತಾ)** ತುಂಬಾ ಧನ್ಯವಾದಗಳು. ಆದರೆ ನಾನು ಹೇಳೋದ್ರಲ್ಲಿ ಅಂತಹ ವಿಶೇಷವೇನೂ ಇಲ್ಲ.

**ರಾ. ಮೆಹ್ತಾ** : -ಆಗ್ಲಿ, ಏನು ಹೇಳಬೇಕು ಅಂತಿದ್ದೀರೂ ಅದನ್ನೇ ಹೇಳಿ.

**ವಸಂತ್** : - ನೋಡಿ, ನೀವು ಹಿರಿಯರು. ನಿಮ್ಮ ಹತ್ತಿರ ಹೇಗೆ ಹೇಳ್ಲಿ? ಆದರೂ ಒಂದು ಮಾತು ಹೇಳ್ತೀನಿ. ಇಲ್ಲಿ ನಾವು ಸಂಬಂಧಿಕರಲ್ಲ. ನೀವು ಸರ್ಕಾರದ ಅಧಿಕಾರಿಗಳು, ನಾನು ಅಪರಾಧಿ. ನಮ್ಮ ಸ್ನೇಹ ಸಂಬಂಧಗಳನ್ನು ಕರ್ತವ್ಯದ ಮಧ್ಯೆ ತರದಿದ್ದರೆ ಒಳ್ಳೆಯದು. ನೀವು ನಿಮ್ಮ ಕರ್ತವ್ಯವನ್ನು ಮಾಡಿ, ನಾನು, ನನಗೇನು ತೋಚತ್ತೋ ಅದನ್ನ ಮಾಡ್ತೀನಿ.

**ರಾ. ಮೆಹ್ತಾ** : - ಭೇಷ್ ಮಿ. ವಸಂತ್. ನಾನು ನಿಮ್ಮ ಬಗ್ಗೆ ಕೇಳಿದ್ದೆಲ್ಲಾ ನಿಜ. ಇದು ಎಷ್ಟು ಗಂಭೀರ ವಿಷಯ ಅಂದ್ರೇ ಸಂಬಂಧ ತರದಿದ್ರೆ ಸಾಧ್ಯವೇ ಇಲ್ಲ.

**ವಸಂತ್** : - ನನಗೆ ಅದು ಅಷ್ಟೊಂದು ಮಹತ್ವದಲ್ಲ. ಆಗಸ್ಟ್ ಘೋಷಣೆ ಆಯಿತು. ಮಹಾತ್ಮಾಜಿಯವರನ್ನು ಸರ್ಕಾರ .ಯಾವ ಸೂಚನೆಯೂ ಕೊಡದೆ ಬಂಧಿಸಿದರು. ದೇಶದಲ್ಲೆ ಸತ್ಯಾಗ್ರಹ ಶುರುವಾಯಿತು. ನಮ್ಮಂತಹ ಯುವಕರು ಅದರಲ್ಲಿ ಸೇರಿದರು. ಅದರ

ಪರಿಣಾಮವೇ ನಾವು ಇಲ್ಲಿಗೆ ಬಂದದ್ದು. ಸಹಾಸ್ರಾರು ಜನ ಶಿಕ್ಷೆ ಅನುಭವಿಸುತ್ತಿದ್ದಾರೆ. ನಾನೂ ಅನುಭವಿಸುತ್ತೇನೆ. ಅದರಲ್ಲಿ ಮಹತ್ವವಾದುದ್ದೇನಿದೆ?

**ರಾ. ಮೆಹ್ತಾ** :- ಇದರಲ್ಲೇನೂ ಮಹತ್ವವಿಲ್ಲವೆ? ನೀವು ಹೇಳೋ ಅಷ್ಟು ಸುಲಭವಾಗಿಲ್ಲ ಅಂತ ನಿಮಗೂ ಮತ್ತು ನನಗೂ ಗೊತ್ತಿದೆ.

**ವಸಂತ್** : - ಇಲ್ಲಿ, ನನಗೇನೂ ಗೊತ್ತಿಲ್ಲ.

**ರಾ. ಮೆಹ್ತಾ** :- ಯಾವ ವ್ಯಕ್ತಿ ಯೋಜನೆಗಳನ್ನು ತಯಾರಿಸುತ್ತಾನೆ. ಯಾರು ಅವನ್ನೆಲ್ಲಾ ನಡೆಸುತ್ತಾನೋ ಅವನಿಗೆ ಗೊತ್ತಿಲ್ಲ ಅಂದರೇ ಏನರ್ಥ?

**ವಸಂತ್** : - ನನಗೇನು ಗೊತ್ತಿತ್ತೋ ಅದನ್ನಾಗಲೇ ಹೇಳಿದ್ದೇನೆ. ಹೌದು ಕೆಲವೊಂದು ವಿಚಾರಗಳನ್ನು ಮಹಾತ್ಮಾಜಿಯವರ ಆದೇಶದಂತೆ ಗುಪ್ತವಾಗಿಡಲು ಬಯಸುತ್ತೇನೆ.

**ರಾ. ಮೆಹ್ತಾ** : - **(ಆವೇಶದಿಂದ)** ಹೌದು. ಮತ್ತೇ ಬಾಂಬುಗಳನ್ನು ಎಸೆದು ನಿರ್ದೋಷಿಯರಾದ ಸೈನಿಕರನ್ನು ಮತ್ತು ನಾಗರೀಕರನ್ನು ಕೊಲ್ಲಿಸಬೇಕಾಗಿತ್ತು, ಅಲ್ವೇ ಮಿ. ಶುಕ್ಲಾ?

**ವಸಂತ್** : - ಓಹೋ! ನೀವು ಆ ಅಘಾತದ ವಿಷಯ ಹೇಳ್ತಿದ್ದೀರಾ?

**ರಾ. ಮೆಹ್ತಾ** : - ಏಕೆ? ಈ ವಿಷಯ ನಿಮಗೇನು ಗೊತ್ತಿಲ್ಲವೇನು?

**ವಸಂತ್** : - ನನಗೆ ಹ್ಯಾಗೆ ಗೊತ್ತಾಗುತ್ತೆ?

**ರಾ. ಮೆಹ್ತಾ** :- ನಾನು ಹೇಳ್ಲೇನು. ಡಿಸೆಂಬರ್ 22, 1942ರ ದಿನ ಬಾಂಬ್ ಎಸಿಯಬೇಕು. 21ನೇ ತಾರೀಖು ಪಾಧ್ಯೆ ಮನೆಯಲ್ಲಿ ಮೀಟಿಂಗ್. ಅದರಲ್ಲಿ ತುಪಾಕಿ ಯಾವ ರೀತಿ ಬಾಂಬ್ ಎಸಿಯಬೇಕು. ಮೃಣಾಲ ಎಲ್ಲಿ ನಿಂತು ನೋಡಬೇಕು - ಯಾವ ರೀತಿ signal ಕೊಡಬೇಕು - 20 ರಂದು ಬಾಂಬ್ ತಯಾರಿಕೆ - ಕೇಶವನ ಕೈ ಮುರಿತ - ಡಾ|| ದೇಸಾಯಿ ಸೇವೆ - 19ರ ರಾತ್ರಿ ಒಂಬತ್ತು ಗಂಟೆಗೇ ................

**ವಸಂತ್** :- **(ನಕ್ಕು)** ಏನು ರಾವ್ ಸಾಹೇಬ್ರು ಪಾಠ ಉರು ಹೊಡೆದೋರಾಗೆ ಹೇಳ್ತಿರಲ್ಲ.

**ರಾ. ಮೆಹ್ತಾ** : - ನಿಜವಾಗಿ, ನನಗೆ ಬಾಯಿ ಪಾಠ ಆಗಿಬಿಟ್ಟಿದೆ ಮಿ.ವಸಂತ್. **(ಗಂಭೀರವಾಗಿ)** ಇದನ್ನು ನನಗೆ ಬಾಯಿ ಪಾಠ ಮಾಡ್ಸೋ ಮುಖಗಳು ಬೇರೆ ಬೇರೆ. ಆದರೇ ಪಾಠ ಮಾತ್ರ ಒಂದೇ. ಪಾಧ್ಯೆ. ತುಷಾರ. ನರೇಂದ್ರ. ಇವರೆಲ್ಲಾ ನನ್ನ ಗುರುಗಳು. ಇನ್ನೂ ಎಷ್ಟು ಹೆಸರು ಬೇಕು ಹೇಳಿ?

**ವಸಂತ್** : - ನಿಮಗೆ ಒಳ್ಳೇ ಗುರುಗಳು ಸಿಕ್ಕಿದ್ದಾರೆ.

**ರಾ. ಮೆಹ್ತಾ** : - ಹೌದು. ಆದರೆ ನನಗೆ ಅವರುಗಳ ಗುರುವನ್ನು ನೋಡೋ ತವಕ ಹೆಚ್ಚಾಗಿದೆ.

**ವಸಂತ್** : - ಅವರ ಗುರುಗಳು ತುಂಬಾ ಶಕ್ತಿಶಾಲಿಯಾಗಿರಬೇಕು.

**ರಾ. ಮೆಹ್ತಾ** : - ಹೌದು. ಅದಕ್ಕೆ ನಾನು ಅವರ ಗುರುಗಳನ್ನು ಹುಡುಕ್ತಾ ಇದ್ದೀನಿ.

**ವಸಂತ್** : - ಹಾಗಾದರೆ ಅವನು ತುಂಬಾ ಭಾಗ್ಯಶಾಲಿ ಇರಬೇಕು.

**ರಾ. ಮೆಹ್ತಾ** : - ನನಗೆ ಹಾಗೇನನ್ನಿಸುವುದಿಲ್ಲ ಏಕೆಂದರೆ ಇಂಥ ಹೇಡಿ ಸ್ನೇಹಿತರು ಅವನ ಬಳಿ ಕೆಲಸ ಮಾಡುತ್ತಾರಲ್ಲ ಅಂತ. ಈಗ ನಿಮಗೆ ಗೊತ್ತಿರಬಹುದು ಮಿ.ವಸಂತ್. ಈ ಘಟನೆಗಳಿಗೆ ಎಲ್ಲಿ ತನಕ ಸಂಬಂಧ ಇದೆ ಅಂತ. ಈ ವಿಷಯದಲ್ಲಿ ನನಗೆ ಪ್ರತಿಯೊಂದು

ಸೂಕ್ಷ್ಮವೂ ಗೊತ್ತಿದೆ. ಯಾರು, ಯಾವ ದಿನ, ಯಾವ ವೇಷದಲ್ಲಿದ್ದರು ಅಂತ ಪ್ರತಿಯೊಂದು ವಿವರಣೆಯೂ ನನ್ನ ಬಳಿ ಇದೆ. ಆದ್ದರಿಂದ ಈ ವಿಷಯದಲ್ಲಿ ನಾವಿಬ್ಬರೂ ಸ್ಪಷ್ಟವಾಗಿ ಮಾತನಾಡಿದರೆ ಒಳ್ಳೇದು. ನಿನ್ನ ಸ್ನೇಹಿತರ ಪ್ರಾಣಗಳನ್ನು ನೀವು ಉಳಿಸಿಕೊಳ್ಳುವುದಕ್ಕೆ ಆಗೋಲ್ಲ. ಆದರೇ ನಿಮ್ಮಪ್ರಾಣ ..........

**ವಸಂತ್** : - ರಾವ್ ಸಾಹೇಬ್, ಮನುಷ್ಯ ಪ್ರಾಣ ಉಳಿಸಿಕೊಳ್ಳಲು ಓಡಿಹೋಗುತ್ತಾನ?

**ರಾ. ಮೆಹ್ತಾ** : - **(ನಗುತ್ತಾ)** ಎಂಥ ಮಾತು ಮಿ.ಶುಕ್ಲಾ. ಇಲ್ದಿದ್ರೆ ಪಾಧ್ಯೆ, ವೃಂದಾವನ್ ಅವರೆಲ್ಲಾ ಯಾಕೆ ಓಡಿ ಹೋಗ್ತಿದ್ರು ? ನೋಡಿ ಮಿ. ವಸಂತ್ ನಾನು ನಿಮಗೆ ಯಾವ ದುರಾಸೆಯನ್ನು ತೋರಿಸುವುದಿಲ್ಲ. ಇದು ನನಗೂ ಗೌರವವಲ್ಲ, ಜೊತೆಗೆ ನಮಗೂ ಈ ನಪುಂಸಕರ ಜೊತೆಗೆ ನಿಮ್ಮಂಥ ಗಂಡಸರನ್ನು ಸೇರಿಸಲು ಇಷ್ಟವಿಲ್ಲ. ಆದರೇ ಕೇವಲ ಒಂದು ವಿಷಯದಲ್ಲಿ ನಿಮ್ಮ ಸಹಾಯದ ಅವಶ್ಯಕತೆ ನನಗಿದೆ.

**ವಸಂತ್** : - **(ನಕ್ಕು)** ತಮಾಷೆ ಮಾಡ್ತಿದ್ದೀರೇನು ರಾವ್ ಸಾಹೇಬ್. ನೀವು ರಾಜ್ಯದ ಹಿರಿಯ ಅಧಿಕಾರಿಗಳು, ನಾನೋ ಕೇವಲ ಖೈದಿ. ನಾನೇನು ನಿಮಗೆ ಸಹಾಯ ಮಾಡಬಲ್ಲೇ?

**ರಾ ಮೆಹ್ತಾ** : - ಈ ವಿಷಯಕ್ಕೂ, ನಿಮ್ಮ ಬಾಂಬೂ ಮತ್ತು ಕ್ರಾಂತಿಯ ವಿಷಯಕ್ಕೂ ಯಾವ ಸಂಬಂಧವಿಲ್ಲ. ನಿಮ್ಮಲ್ಲಿ ಕೇಳೋದು ಏನು ಇಲ್ಲ. ನನಗೆ ಸತ್ಯಾಗ್ರಹದ ಬಗ್ಗೆ ಕೆಲವು ಮಾತುಗಳನ್ನಾಡ ಬೇಕಾಗಿದೆ.

**ವಸಂತ್ : -** ಓಹೋ! ಧಾರಾಳವಾಗಿ ಮಾತಾಡಿ.

**ರಾ. ಮೆಹ್ತಾ** : - ಇಷ್ಟು ಸಣ್ಣವಯಸ್ಸಿಗೆ ನೀನು ಬಹಳ ಮುಂದುವರಿದಿದ್ದೀ ಅಂತ ನನಗೆ ಗೊತ್ತಿದೆ. ನಿನ್ನ ನೋಡಿದಾಗಲೆಲ್ಲಾ ನನ್ನ ಬಾಲ್ಯದ ನೆನಪುಗಳು ಬರುತ್ತದೆ. ಆ ಸುಂದರವಾದ ದಿನಗಳೆಲ್ಲಿ? ಈ ತಲೆ ಕೆಡಿಸುವ ಪೋಲಿಸ್ ಕೆಲಸವೆಲ್ಲಿ? ನಿನ್ನ ಮಹಾನಾಯಕರ ಸಂಪರ್ಕವೆಲ್ಲಿ? ನನ್ನ ಈ ದೇಶದ್ರೋಹದ ಕೆಲಸಗಳೆಲ್ಲಿ?

**ವಸಂತ್** : - **(ಚೇಷ್ಟೆಯಿಂದ)** ಮಹಾನಾಯಕರ ಸಂಪರ್ಕದಿಂದ ನಮ್ಮಂಥ ಚಿಲ್ಲರೇ ವ್ಯಕ್ತಿಗಳಿಗೆ ಏನು ಮಜಾ ಮಾಡೊಕ್ಕಾಗುತ್ತೇ? ಅವರಂತೂ ನಮ್ಮನ್ನು ಗುರ್ತಿಸೋದಿಲ್ಲ.

**ರಾ. ಮೆಹ್ತಾ** : - ಸರಿ, ನೆಹರು, ಗಾಂಧೀಜಿ ಗುರ್ತು ಇಲ್ಲದಿರಬಹುದು ಆದರೆ ಅಚ್ಯುತ , ಲೋಹಿಯಾ ಅಂತಹ ನಾಯಕರುಗಳ ಸ್ನೇಹ, ವಿಶ್ವಾಸ ನಿನಗೆ ಗೊತ್ತಿದೆಯಲ್ಲ. ಅಷ್ಟೇ ಸಾಕು. ಅದೇನು ಕಡಿಮೆ ಅಲ್ಲ.

**ವಸಂತ್** : - ನನ್ನ ವಿಚಾರದಲ್ಲಿ ಅವರುಗಳು ಕೂಡ ಗಾಂಧಿ, ನೆಹರುಗಳಷ್ಟೇ ಮುಖ್ಯರಾದವರು. ಪ್ರೀತಿ ವಿಶ್ವಾಸ ಹಾಗಿರಲಿ, ಗುರುತು ಪರಿಚಯ ಆದ್ರೂ ಸಹ ಭಾಗ್ಯಶಾಲಿ ಅಂತ ತಿಳ್ಕೋತೀನಿ.

**ರಾ. ಮೆಹ್ತಾ** : - ಅಂದರೇ ನಿನಗೆ ಅವರುಗಳ ಪರಿಚಯ ಸಹಾ ಇಲ್ವೇನು?

**ವಸಂತ್** : - ಹಾಗಲ್ಲ, ಅವರ ಪರಿಚಯ ನನಗಿದೆ, ನನ್ನ ಪರಿಚಯ ಪಕ್ಷಕ್ಕೆ ಸೀಮಿತವಾದದ್ದು ಅಷ್ಟೇ.

**ರಾ. ಮೆಹ್ತಾ** : - ನಿನಗೆ ಅವರ ಪರಿಚಯ ಇರೋದು ಮಾತ್ರವಲ್ಲ, ಅವರನ್ನ ಬೇರೆ ಊರುಗಳಿಂದ ಬಂದ ಜನರಿಗೆ ಅಚ್ಯುತನ ಜೊತೇಲಿ ಭೇಟಿ ಮಾಡಸ್ತಾ ಇರೋ ಮುಖಂಡ ಕೂಡ ನೀನೇ. ನವೆಂಬರ್ 15ನೇ ತಾರೀಖು ದಿಲ್ಲಿಯಿಂದ ರಾಮ್ ಚರಣ್ ಬಂದರು, ಅವರು

ಆ ದಿನ ರಾತ್ರಿ 9ಕ್ಕೆ ನಿನ್ನನ್ನು ಅಚ್ಯುತನ ಹತ್ತಿರ ಕರ್ಕೊಂಡು ಹೋದ್ರು. 18ನೇ ತಾರೀಖು ಮಧ್ಯಾಹ್ನ ನೀನು ..............

**ವಸಂತ್** : - **(ನಗುತ್ತಾ)** ಓಹ್! ಇದನ್ನೂ ನೀವು ಬಾಯಿ ಪಾಠ ಮಾಡಿದ್ದೀರೊ.

**ರಾ. ಮೆಹ್ತಾ** : - ನನಗೆ ಗೊತ್ತಿರುವ ವಿಷಯವನ್ನೆಲ್ಲಾ ನಿನಗೆ ಹೇಳಬೇಕಾದ ಅವಶ್ಯಕತೆ ಇಲ್ಲಾ. ನಾನು ನಿನ್ನಿಂದ ಅವರುಗಳ ವಿಷಯವನ್ನು ತಿಳಿಯಬೇಕಾಗಿದೆ. ಬಾಂಬ್ ಪ್ರಕರಣದಲ್ಲಿ ನಿನ್ನನ್ನು ಸಿಕ್ಕಿಸುವುದಿಲ್ಲ. ಪ್ರಮಾಣವಾಗಿ ಹೇಳ್ತೀನಿ.

**ವಸಂತ್** :- ನಾನು ನಿಮಗೆ ಕೃತಜ್ಞ. ಮಿ. ರಾವ್ ಸಾಹೇಬ್. ಆದರೇ ನನಗೆ ಲಂಚ ಕೊಟ್ಟು ಅಥವಾ ತೆಗೆದುಕೊಂಡು ಅಭ್ಯಾಸವಿಲ್ಲ. ಹೇಗೆ ಉತ್ತರ ಕೊಡಲಿ?.

**ರಾ. ಮೆಹ್ತಾ** : - ವಸಂತ್ ನೀನಿನ್ನೂ ಚಿಕ್ಕವನು. ನನಗೆ ಪ್ರಪಂಚದ ಅನುಭವವಿದೆ. ಈ ವಿಷಯದಲ್ಲಿ ಹಠ ಮಾಡಬೇಡ. ಇದು ಬದುಕಿನ ಪ್ರಶ್ನೆ ? ಬದುಕಿನ ಜೊತೆ ಆಟ ಆಡಬೇಡ.

**ವಸಂತ್** : - ಹೌದು. ಖಂಡಿತವಾದ ಮಾತು.

**ರಾ. ಮೆಹ್ತಾ** : - **(ಪ್ರೀತಿಯಿಂದ)** ಅದಕ್ಕೆ ಅಲ್ವಾ ನಾನಿಷ್ಟು ನಿನಗೆ ಹೇಳ್ತಾ ಇರೋದು. ಹೇಳು ನೀನು ಅಚ್ಯುತನನ್ನು ಭೇಟಿ ಮಾಡಿದ್ದೀಯೋ ಇಲ್ವೋ?

**ವಸಂತ್** : - **ನಾನು ಯಾವಾಗ ಅವರನ್ನು ಭೇಟಿ ಆಗಿಲ್ಲವೆಂದು ಹೇಳಿದೆ?**

**ರಾ. ಮೆಹ್ತಾ** : - **(ಆತುರದಿಂದ) ಯಾವಾಗ, ಎಲ್ಲಿ, ಏತಕ್ಕಾಗಿ ಭೇಟಿ ಆಗಿದ್ದಿ?**

**ವಸಂತ್** : - ಸತ್ಯಾಗ್ರಹಿ ಸ್ವಯಂಸೇವಕರ ಸೂಚನಾ ಪ್ರತಿಯನ್ನು ಸಿದ್ಧಮಾಡುವ ಕೆಲಸವನ್ನು ನನಗೆ ಕೊಟ್ಟಿದ್ದರು. ಇದರ ಬಗ್ಗೆ ಚರ್ಚಿಸಲು ಸುಮಾರು ಒಂದುವರೆ - ಎರಡು ತಿಂಗಳ ಹಿಂದೆ ಭೇಟಿಮಾಡಿದ್ದೆ.

**ರಾ. ಮೆಹ್ತಾ** : - ಎಲ್ಲಿ ಭೇಟಿಯಾಗಿದ್ದಿ?

**ವಸಂತ್** : - ಪುರೋಹಿತ್ ಹೊಟೆಲ್‌ನಲ್ಲಿ.

**ರಾ. ಮೆಹ್ತಾ** :- ತಮಾಷೆ ಮಾಡ್ತಿದ್ದೀರೇನು ಮಿ. ಶುಕ್ಲಾ. ಇಡಿ ಹಿಂದುಸ್ಥಾನದ ಪೋಲಿಸರು ಅವರನ್ನು ಹುಡುಕುತ್ತಿರುವಾಗ ಅಂತ ತೆರೆದ ಜಾಗಕ್ಕೆ ಅವರು ಬರುತ್ತಾರೇನು?

**ವಸಂತ್** : - ಖಂಡಿತಾ ಬಂದಿದ್ರು.

**ರಾ. ಮೆಹ್ತಾ** : - ಹೇಗೆ ಗೊತ್ತು?

**ವಸಂತ್** : - ಹೇಗೆ ಅಂದ್ರೆ, ಅವ್ರು ಅಲ್ಲಿಗೆ ಬಂದಿದ್ರು.

**ರಾ. ಮೆಹ್ತಾ** : - ನಿನ್ನ ಬುದ್ಧಿ ಸ್ಥಿಮಿತದಲ್ಲಿ ಇಲ್ಲವೆಂದು ತೋರುತ್ತೆ. ಎಂಥಾ ಬೇಜವಾಬ್ದಾರಿ ಮಾತು ಹೇಳ್ತಾ ಇದ್ದೀರಿ. ನೀನು ನನ್ನ ಜಾಗದಲ್ಲಿ ಇದ್ದಿದ್ರೆ ಈ ಮಾತನ್ನು ನಂಬ್ತಿದ್ರಾ? ಹೋಗ್ಲಿ. ಅವರು ಯಾತಕ್ಕೆ ಬಂದಿದ್ರು?

**ವಸಂತ್** : - ನೋಡಿ ಮಿ.ರಾವ್ ಸಾಹೇಬ್. ನಾನೊಬ್ಬ ಸಾಮಾನ್ಯ ಸೇವಕ. ನನ್ನ ಅಧಿಕಾರಿ ಏನ್ಮಾಡ್ತಾರೆ ಅಂತ ನನಗೆ ಗೊತ್ತಿಲ್ಲ. ಅವರ ಆದೇಶಗಳನ್ನು ಪಾಲಿಸುವುದೇ ನನ್ನ ಕೆಲಸ.

**ರಾ. ಮೆಹ್ತಾ** : - **(ಕೋಪದಿಂದ ಗಂಟೆ ಬಡಿಯುತ್ತಾ)** ಹಾ. ಹಾ. ಧಫೇದಾರ್. ಇವನನ್ನು ಕರೆದುಕೊಂಡು ಹೋಗು. ಮತ್ತೆ ಕರೆದಾಗ ಕರ್ಕೊಂಡು ಬಾ. **(ದಫೇದಾರ ಪ್ರವೇಶಿಸಿ ವಸಂತನ್ನು ಕರೆದೊಯ್ಯುತ್ತಾನೆ)**

**ರಾ ಮೆಹ್ತಾ** : - **(ಸ್ವಗತ)** ಇವನು ಹೀಗೆಲ್ಲಾ ಮಾತು ಕೇಳೊಲ್ಲ. ಆಕೇನ ನೋಡಿದ ತಕ್ಷಣ

ದಾರಿಗೆ ಬರುತ್ತಾನೆ. **(ಗಂಟೆ ಬಾರಿಸಿ)** ಆ ಹುಡುಗೀನ ಕರ್ಕೊಂಡು ಬಾ.

**(ದಫೇದಾರ ಸುಮಾರು 22 ವರ್ಷದ ಯುವತಿಯನ್ನು ಕರೆತರುತ್ತಾನೆ)**

ಓ. ಬನ್ನಿ ಸರಳಾದೇವಿಯವರೇ. ಈ ಕಡೆ ಬನ್ನಿ. ಕುರ್ಚಿಯ ಮೇಲೆ ಕುತ್ಕೋಳ್ಳಿ. **(ನಗುತ್ತಾ)** ನೋಡಿ. ನಿಮಗೆ ಎಲ್ಲಾ ವಿಷಯಾನೂ ಗೊತ್ತು. ಆದ್ದರಿಂದ ಹೆಚ್ಚೇನೂ ಹೇಳಬೇಕಾದ ಅವಶ್ಯಕತೆ ಇಲ್ಲಾ.

**ಸರಳಾ** : - ನೀವೂ ವಸಂತನನ್ನು ಭೇಟಿ ಆಗಿದ್ದರೇನು?

**ರಾ ಮೆಹ್ತಾ** : - ಭೇಟಿಯಾಗದೆ ಇರೋದಕ್ಕೆ ಹೇಗೆ ಸಾಧ್ಯ. ಈ ಕೆಲಸವೇ ಹಾಗೆ ....... ಆದರೇ ಅವನೇನು ಸುಲಭವಾಗಿ ಒಪ್ಪುವುದಿಲ್ಲ.

**ಸರಳಾ** : - ಏನು ಹೇಳಿದ ಅವನು?

**ರಾ. ಮೆಹ್ತಾ** : - **(ನಕ್ಕು)** ಪುರೋಹಿತ್ ಹೊಟೆಲ್‌ನಲ್ಲಿ ಸೂಚನೆಗಳನ್ನು ಪಡೆಯಕ್ಕೆಂದು ಅಚ್ಯುತರನ್ನು ಭೇಟಿ ಆಗಿದ್ದೆ ಅಂತ ಹೇಳ್ತಾನೆ.

**ಸರಳಾ** : - **(ನಗುತ್ತಾ)** ಅದಂತೂ ನಿಜ. ಅವನಿಗೆ ಏನೇನು ಉಪಾಯಗಳು ಹೊಳೆಯುತ್ತೆ ಅನ್ನೋದೆ ಗೊತ್ತಾಗೊಲ್ಲ.

**ರಾ. ಮೆಹ್ತಾ** :- ಅದೆಲ್ಲಾ ಸರಿ. ಆದರೇ ಅವನ ಬದುಕು ಎಷ್ಟು ಅಪಾಯಕಾರಿ ಸ್ಥಿತಿಯಲ್ಲಿದೆ ಅನ್ನೋದೆ ಗೊತ್ತಾಗೊಲ್ಲ ಅವನಿಗೆ.

**ಸರಳಾ** : - **(ಗಾಬರಿ)** ನೀವೂ ಅವನನ್ನು ಆ ಸ್ಥಿತಿಗೆ ತಳ್ಳೊಲ್ಲ ತಾನೇ?

**ರಾ. ಮೆಹ್ತಾ** : - ನಾನಂತೂ ಪ್ರಯತ್ನ ಪಡ್ತಾ ಇದ್ದೀನಿ. ಆದರೇ ಅವನು ಕಿವಿ ಮೇಲೆ ಹಾಕಿಕೊಳ್ಳೋದೇ ಇಲ್ಲ. ಜಗಮೊಂಡು.

**ಸರಳಾ** : - **(ಹೆದರಿಕೆಯಿಂದ)** ಅವನಿಗೇನಾಗುತ್ತೆ ಮಿ.ರಾವ್ ಸಾಹೇಬ್?

**ರಾ. ಮೆಹ್ತಾ** : - ಅವನ ಸ್ನೇಹಿತರೆಲ್ಲಾ ಅವನೇ ನಾಯಕನೆಂದು ಒಪ್ಕೊಂಡಿದ್ದಾರೆ. ಆದ್ದರಿಂದ ಆ ಕೇಸಿನಲ್ಲಿ .... ಶಿಕ್ಷೆ ಅಂದರೆ ..... ಗಲ್ಲು ಶಿಕ್ಷೇನೇ.

**ಸರಳಾ** : - **(ದುಃಖದಿಂದ)** ಬೇಡಿ. ಬೇಡಿ. ಮಿ. ರಾವ್ ಸಾಹೇಬ್.

**ರಾ. ಮೆಹ್ತಾ** :- ಅಳಬೇಡಿ. ಈ ಸಂದರ್ಭದಲ್ಲಿ ನಿಮ್ಮ ತಂದೆಯ ನೆನಪು ಬರುತ್ತೆ. ನಾನೂ ಅವನೂ ಲಂಗೋಟಿ ಸ್ನೇಹಿತರು. ಯಾವಾಗಲೂ ಜೊತೇಲೇ ಇರ್ತಿದ್ವೀ. ಅವನು ವ್ಯಾಪಾರ ಶುರು ಮಾಡ್ದಾ. ನಾನು ಈ ಡಿಪಾರ್ಟ್‌ಮೆಂಟ್ ಸೇರಿದೆ. ಆದರೇ ಆ ಬಾಲ್ಯದ ನೆನಪುಗಳನ್ನು ಮರೆಯಲು ಸಾಧ್ಯವೇ? ಅಂಥಾ ಸ್ನೇಹಿತನ ಮಗಳಿಗೆ ನನ್ನ ಕಡೆಯಿಂದ ತೊಂದರೆ ಹೇಗೆ ಸಾಧ್ಯ? ನೀನು ನನ್ನ ಮಗಳ ಸಮಾನ. ಹೆದರಬೇಡ. ಧೈರ್ಯದಿಂದಿರು.

**ಸರಳಾ** : - **(ಬಿಕ್ಕಳಿಸುತ್ತಾ)** ಹೆದರಿಕೆ ಇಲ್ಲಾ. ಆದರೆ ಆ ಕಲ್ಪನೆ ನನ್ನ ಕಣ್ಣು ಮುಂದಿನಿಂದ ಹೋಗೋದಿಲ್ಲ.

**ರಾ. ಮೆಹ್ತಾ** : - ಅದಕ್ಕೆ ಅಲ್ವೇ. ನಾನು ನಿಮಗೆ Help ಮಾಡ್ತಿರೋದು. ಆ ಹುಚ್ಚು ಮುಂಡೊದು ಒಪ್ಪದ್ರೇ ತಾನೇ?

**ಸರಳಾ** : - ಆದರೇ ....... ಆದರೇ ........ ರಾವ್ ಸಾಹೇಬ್ ..........

**ರಾ. ಮೆಹ್ತಾ** :- ಇದರಲ್ಲಿ ಹೇಳೋ ಅಂತಹದ್ದೇನಿದೆ. ನಿನಗೂ ಗೊತ್ತು. ಅವನ ಕಾರ್ಯ ಚಟುವಟಿಕೆಗಳೆಲ್ಲಾ, ಅವನ ಬಾಯಿಂದ ಬಿಡಿಸು.

**ಸರಳಾ** : - **(ಸ್ವಗತ)** ನನಗೇ ಗೊತ್ತಿಲ್ಲ. ಗೊತ್ತಿದ್ರೆ ಅವನ ಬಾಯಿಂದ ಬಿಡಿಸ್ತಿದ್ದೆ.

**ರಾ. ಮೆಹ್ತಾ** : - ಪ್ರೇಮಾ. ಪ್ರೀತಿ ಅಂದರೆ ಹಾಗೆ. ಅವನು ನಿನ್ನ ನೋಡುತ್ತಿದ್ದ ಹಾಗೇ ಎಲ್ಲಾ ಹೇಳ್ತಾನೆ. ಅವನ ಪ್ರಾಣಾನೂ ಉಳಿಯುತ್ತೆ ಮತ್ತು ..........

**ಸರಳಾ** : - ಹೌದು. ಆದರೇ ವಸಂತನ ಸ್ವಭಾವ ನಿಮಗೇ .............

**ರಾ. ಮೆಹ್ತಾ** : - ಇದರಲ್ಲಿ ಸೋಲೋ ವಿಷಯ ಏನೂ ಇಲ್ಲ. ಆದರೇ ಅಚ್ಯುತ ಎಲ್ಲಿದ್ರಾನೆ ಅಂತ ಹೇಳಿದರೆ ಸಾಕು ಅವನನ್ನು ನೇಣು ಗಂಬದಿಂದ ಉಳಿಸೋಕ್ಕೆ.

**ಸರಳಾ** : - **(ಆವೇಶದಿಂದ)** ಆ ರೀತಿ ಹೇಳ್ಬೇಡಿ. ಮಿ. ರಾವ್ ಸಾಹೇಬ್. ಅವನ ಪ್ರಾಣಕೋಸ್ಕರ ನೀವು ಹೇಳಿದಂತೆ ಕೇಳುತ್ತೇನೆ. ಈ ರೀತಿ ನಾನು ಮಾಡೋದರಿಂದ ಅವರು ನನ್ನಿಂದ ದೂರ ಆಗ್ತಾರೆ ಅನ್ನೋದು ನನಗೆ ಗೊತ್ತು.

**ರಾ. ಮೆಹ್ತಾ** :- ಇದರಿಂದ ಯಾರೂ ದೂರ ಆಗೋಲ್ಲ. ಅದರ ಬದಲು ನಿನಗೆ ಯಾವಾಗ್ಲೂ ಚಿರಋಣಿ ಆಗಿರ್ತಾನೆ.

**ಸರಳಾ** : - ಅವರು ನನ್ನನ್ನು ದೂರ ಮಾಡಿದ್ರೂ ಪರವಾಗಿಲ್ಲ. ಆದ್ರೇ ..... ಅವರಿಗೆ ಏನಾದ್ರೂ ತೊಂದರೆಯಾದರೇ ನನಗೆ ಸಹಿಸೋಕ್ಕಾಗೋಲ್ಲ.

**ರಾ. ಮೆಹ್ತಾ** : - ಏನೂ ಆಗೋಲ್ಲ. ನೀನು ಧೈರ್ಯದಿಂದಿರು.

**ಸರಳಾ** : - **(ಬೇಡಿಕೊಳ್ಳುತ್ತಾ)** ನಿಮ್ಮ ಕಾಲಿಗೆ ಬೀಳ್ತೀನಿ ರಾವ್ ಸಾಹೇಬ್ರೇ. ನನ್ನ ವಸಂತ ನನ್ಗೇ ಸಿಕ್ಕಿ ಬಿಟ್ರೆ ಸಾಕು. ನನ್ನ ಜೀವನದಲ್ಲಿ ನಾನು ಏನೂ ಆಶೆ ಇಡೋಲ್ಲ.

**ರಾ ಮೆಹ್ತಾ** : - ಸಮಾಧಾನ ತಂದ್ಕೋ. ಧೈರ್ಯವಾಗಿರು. ನಿನ್ನ ಅವಶ್ಯಕತೆ ಇದ್ರೇ ನಿನ್ನ ಮತ್ತೇ ಕರೆಸ್ಕೋತೀನಿ ಹೋಗು. Rest ತಗೋ **(ಧಫೇದಾರನನ್ನು ಕೂಗಿ ಅವಳನ್ನು ಕರೆದೊಯ್ಯು ಎನ್ನುತ್ತಾನೆ)** ಆ ಕಡೆ ರೂಮಿನಲ್ಲಿ ಕೂಡಿಸು. ನಾನು ಕರೆದ ತಕ್ಷಣ ಇವಳನ್ನು ಕರೆದು ತಾ.

**ರಾ. ಮೆಹ್ತಾ** : - ಹೋಗಮ್ಮ. ದೇವರು ಅವಕಾಶ ಮಾಡಿಕೊಟ್ರೆ ನಿನ್ನನ್ನು ಪುನಃ ಕರೆಯೋ ಅವಶ್ಯಕತೆ ಇರೋಲ್ಲ. **(ಸರಳಾ ಹೋಗುತ್ತಾಳೆ. ರಾ. ಮೆಹ್ತಾ ಬೆಲ್ ಬಾರಿಸುತ್ತಾ)** ವಸಂತ ಶುಕ್ಲಾನನ್ನು ಇಲ್ಲಿಗೆ ಕರೆದು ತಾ. **(ಸ್ವಗತ)** ಅಚ್ಯುತ ಅಥವಾ ಲೋಹಿಯಾ ಸಿಕ್ಕಿ ಬಿಟ್ರೆ ನನ್ನ ಅದೃಷ್ಟದ ಬಾಗಿಲು ತೆರೆದ ಹಾಗೆ. ರಾವ್ ಸಾಹೇಬ್‌ನಿಂದ ಸರ್ ನೈಟ್ ಆಗ್ತೀನಿ ........... **(ವಸಂತ್ ಬರುತ್ತಾನೆ)** ಓಹ್. ಬನ್ನಿ ಮಿ. ವಸಂತ್ ಶುಕ್ಲಾ. ಈ ಕುರ್ಚಿ ಮೇಲೆ ಕುತ್ಕೊಳ್ಳಿ. ಸಿಗರೇಟ್ ತಗೋಳ್ತೀರೇನು? **( ಧಫೇದಾರ ಹೊರಗೆ ಹೋಗುತ್ತಾನೆ)**

**ವಸಂತ್** : - ಬೇಡ. Thanks

**ರಾ. ಮೆಹ್ತಾ** : - ಸೇದೋದಿಲ್ಲವೇನು?

**ವಸಂತ್** : - ಆಗೊಮ್ಮೆ. ಈಗೊಮ್ಮೆ ಮಾತ್ರ. ಅಭ್ಯಾಸವೇನೂ ಇಲ್ಲ.

**ರಾ. ಮೆಹ್ತಾ** : - ಹಾಗಿದ್ದರೆ ತಗೋಬಹುದಲ್ಲಾ. ಈಗ ನಾನು ಯಾವುದೇ ಅಧಿಕಾರಿ ತರಹ ಮಾತಾಡ್ತಾ ಇಲ್ಲ.

**ವಸಂತ್** : - ಅಂದರೇ ......

**ರಾ. ಮೆಹ್ತಾ** : - ನಿಮ್ಮ ಕುಟುಂಬದ ಒಬ್ಬ ಗೆಳೆಯನಾಗಿ. ಹಿತಚಿಂತಕನಾಗಿ ಮಾತಾಡ್ತೀನಿ. ನೀನೂ ಸಹಾ ತೆರೆದ ಹೃದಯದಿಂದ ಮಾತಾಡು.

**ವಸಂತ್** : - ಪೋಲಿಸ್ ಡಿಪಾರ್ಟ್‌ಮೆಂಟ್ನೂ ನಿಮ್ಮಂಥವರು ಇದ್ದಾರೆ ಎಂದು ನನಗೆ ತುಂಬಾ ಸಂತೋಷವಾಗುತ್ತಿದೆ ಮಿ. ರಾವ್ ಸಾಹೇಬ್.

**ರಾ. ಮೆಹ್ತಾ** : - ನಿಮ್ಮಂಥ ಧೈರ್ಯ. ಸ್ಥೈರ್ಯದ ವ್ಯಕ್ತಿಗಳನ್ನು ನೋಡಿದರೆ ಯಾವಾನಾದರೂ ಸರಿ ನಿಮ್ಮನ್ನು ಬೆಂಬಲಿಸುತ್ತಾರೆ ಮಿ. ವಸಂತ್.

**ವಸಂತ್** : - ಅಂದರೇ ನನಗೇನೂ ಅರ್ಥವಾಗಿಲ್ಲ.

**ರಾ. ಮೆಹ್ತಾ** : - ನನಗೆ ಎಲ್ಲಾ ಗೊತ್ತಿದೆ ಮಿ. ವಸಂತ್. ಅಂತೂ ಸರಳಳಂತಹ ಮುಗ್ಧ ಹುಡುಗಿಯನ್ನೇ ಆರಿಸಿದ್ದೀರಿ.

**ವಸಂತ್** : - **(ನಗುತ್ತಾ)** ಅವರ ಪರಿಚಯನೂ ನಿಮಗಿದೆಯೋ?

**ರಾ. ಮೆಹ್ತಾ** : - ನಮ್ಮ ಕೆಲಸವೇ ಆ ರೀತಿಯದ್ದು. ಎಲ್ಲಾರ ಬಗ್ಗೇನೂ ತಿಳ್ಕೊಳ್ಳೋದು. ಅಂದ್ಹಾಗೆ ಮದುವೆ ಯಾವಾಗ ಆಗಬೇಕೆಂದಿದ್ದೀರಿ?

**ವಸಂತ್** : - **(ತಮಾಷೆಯಾಗಿ)** ನೀವೂ ನನ್ನನ್ನು ಯಾವಾಗ ಬಿಡುತ್ತೀರಿ?

**ರಾ. ಮೆಹ್ತಾ** : - ನಾನು ಹೇಳಿದ ಹಾಗೆ ಕೇಳಿದ್ರೇ. ಈವಾಗ್ಲೇ ........ ...

**ವಸಂತ್** : - ಹಾಗಾದ್ರೇ ನಾನು ಈಗ್ಲೇ ಮದುವೆಗೆ ಸಿದ್ಧ.

**ರಾ. ಮೆಹ್ತಾ** : - ಅದಂತೂ ನಿಮ್ಮ ಕೈಲೇ ಇದೆ ........ ಬಯಸಿದ್ರೇ ........

**ವಸಂತ್** : - ಆಗಲೇ ನೀವೂ ರಾಜಕೀಯಕ್ಕೆ ಬಂದು ಬಿಟ್ರಿ. ನಮ್ಮ ಸ್ನೇಹದ ಬಗ್ಗೆ ........

**ರಾ. ಮೆಹ್ತಾ** : - ಪಾಪ ಆ ಹುಡುಗಿ ಎಷ್ಟೊಂದು ಯೋಚನೆ ಮಾಡ್ತಾಳೆ. ಗೊತ್ತೇನು?

**ವಸಂತ್** : - ಯಾರ ಬಗ್ಗೆ ಯೋಚನೆ ಮಾಡ್ತಾಳೆ?

**ರಾ. ಮೆಹ್ತಾ** : - ನಿಮ್ಮ ಬಗ್ಗೆ.....

**ವಸಂತ್** : - ನನ್ನ ಬಗ್ಗೇನಾ ? ಯಾತಕ್ಕಾಗಿ?

**ರಾ. ಮೆಹ್ತಾ** : - ಯಾಕೆ ಅಂದ್ರೆ? ತನ್ನ ಪ್ರಿಯಕರನ ತಲೆಯ ಮೇಲೆ ಸಾವಿನ ಕತ್ತಿ ತೂಗಾಡ್ತಾ ಇರೋದನ್ನ ನೋಡಿ ಯಾವ ಹೆಣ್ಣು ತಾನೇ ಸುಮ್ಮನಿರಲು ಸಾಧ್ಯ?

**ವಸಂತ್** : - ಬುದ್ಧಿ ಇರೋ ಹೆಣ್ಣು ಆ ರೀತಿ ಯೋಚಿಸೋದಿಲ್ಲ. ಯಾವ ಹೆಣ್ಣಿಗೆ ತನ್ನ ಕರ್ತವ್ಯದ ಪ್ರಜ್ಞೆ ಇರತ್ತೋ ಆ ..........

**ರಾ. ಮೆಹ್ತಾ** : - ಹೇಳು. ಯಾತಕ್ಕೆ ಅರ್ಧ ನಿಲ್ಲಿಸ್ತಿಯಾ?

**ವಸಂತ್** : - ಮತ್ತು ತನ್ನ ಜೊತೆಗಾರನ ಬಗ್ಗೆ ಪೂರ್ತಿ ಪ್ರೀತಿಯಿಂದ ಇರ್ತಾಳೋ ..........

**ರಾ. ಮೆಹ್ತಾ** : - ಅವಳೇನು ಮಾಡ್ತಾಳೆ?

**ವಸಂತ್** : - ಅವಳು ತನಗೆ ತೋಚಿದನ್ನು ಮಾಡ್ತಾಳೇ ..... ಹಾಗೂ ಪ್ರತೀಕ್ಷೆ ಮಾಡ್ತಾಇರ್ತಾಳೆ.

**ರಾ. ಮೆಹ್ತಾ** : - ಎಲ್ಲಿಯವರೆಗೂ?

**ವಸಂತ್** : - ಅವನು ಹಿಂದಿರುಗಿ ಬರುವ ತನಕ.

**ರಾ. ಮೆಹ್ತಾ** : - ಒಂದು ವೇಳೆ ಅವನು ಹಿಂದಿರುಗಿ ಬರದಿದ್ರೆ?

**ವಸಂತ್** : - ಖಂಡಿತವಾಗಿಯೂ ಅವನ ಮೇಲೆ ಪ್ರೀತಿ ಇದ್ದರೆ. ಆ ಸ್ನೇಹದ ನೆನಪಿನಲ್ಲಿ ತನ್ನ ಬದುಕನ್ನ ನಡೆಸಬೇಕಾಗುತ್ತೆ.

**ರಾ. ಮೆಹ್ತಾ** : - ಅಕಾಸ್ಮಾತ್ ಬೇರೆ ಒಂದು ಉಪಾಯ ಹೊಳೆದ್ರೇ ...........?

**ವಸಂತ್** : - ಬೇರೆ ಉಪಾಯ ಯಾವುದು ಇರೋಕ್ಕೆ ಸಾಧ್ಯ?

**ರಾ. ಮೆಹ್ತಾ** : - ತನ್ನ ಪ್ರಿಯತಮನ ಜೀವ ಉಳಿಸಿಕೊಳ್ಳಲು .........

**ವಸಂತ್** : - ಜೀವದ ಬೆಲೆಯೇನು? ಅದರ ಮೌಲ್ಯವೇನು? ಯಾರಿಗೋಸ್ಕರ ಆ ಜೀವ ಉಳಿಸ್ಕೊಳ್ಳಬೇಕು? ಸತ್ಯವನ್ನು ಬಯಸುವ ಯಾವುದೇ ಹೆಣ್ಣು ಈ ರೀತಿ ಮಾಡೋಲ್ಲ.

**ರಾ. ಮೆಹ್ತಾ** : - ಇದರಲ್ಲಿ ತಪ್ಪೇನೂ ಬಂತು? ತನ್ನ ಜೊತೆಗಾರ ತನ್ನ ಜೀವನವನ್ನು ತಾನೇ ಹಾಳು ಮಾಡ್ಕೊತ್ತಿದ್ರೆ ಯಾವ ಹೆಣ್ಣು ತಾನೇ.......

**ವಸಂತ್** : - ಯಾರ ಹೆಣ್ಣೋ ಹಾಗೆ ಮಾಡಿದ್ರೆ ನನಗೇನು. ನನ್ನ ಹೆಣ್ಣು ಆ ರೀತಿ ಮಾಡಲ್ಲ ಅನ್ನೋ ನಂಬ್ಕೆ ನನಗಿದೆ.

**ರಾ. ಮೆಹ್ತಾ** : - ಮಿ. ವಸಂತ್. ಯಾರದೋ ನಂಬಿಕೆ ಯಾವ ರೀತಿಯಲ್ಲಿ ಯಾರ ಮೇಲಿರಬೇಕೆಂಬ ಪುರಾಣ ನನಗೆ ಬೇಕಿಲ್ಲ. ನೀವು ಅಚ್ಯುತನನ್ನು ಎಲ್ಲಿ ಭೇಟಿ ಮಾಡಿದ್ದೀರಿ ಅಂತ ಹೇಳಿದರೆ ಸಾಕು. ಸುಮ್ಮನೆ ಮಾತು ಬೆಳಸೋದು ಬೇಡ.

**ವಸಂತ್** : - ಮತ್ತೇ ನೀವು ರಾಜಕಾರಣಕ್ಕೆ ಇಳಿಯುತ್ತಿದ್ದೀರ ಮಿ. ರಾವ್ ಸಾಹೇಬ್.

**ರಾ. ಮೆಹ್ತಾ** : - ಮಾತು ಅತಿರೇಕ ಹೋಗ್ತಾ ಇದೆ. ಯಾರೂ ಇಂಥಹ ಸುಂದರವಾದ ಬದುಕನ್ನು ಹಾಳು ಮಾಡಲು ಇಷ್ಟ ಪಡೋಲ್ಲ. ಆದರೆ ಪಾಪ ಆ ಹುಡುಗೀ ...........

**ವಸಂತ್** : - ಆಕೆಯ ಬಗ್ಗೆ ನೀವೇನು ಚಿಂತೆ ಮಾಡೋ ಅವಶ್ಯಕತೆ ಇಲ್ಲ ಮಿ. ರಾವ್ ಸಾಹೇಬ್. ಅವಳ ಯೋಗಕ್ಷೇಮನ ಅವಳೇ ನೋಡ್ಕೊತ್ತಾಳೆ.

**ರಾ. ಮೆಹ್ತಾ** : - ಪಾಪ, ಅವಳು ಅತ್ತು ಅತ್ತು ಸಾಕಾಗಿದ್ದಾಳೆ.

**ವಸಂತ್** : - ಮಿ. ರಾವ್ ಸಾಹೇಬ್, ನನಗೆ ಸರಳಾ ಚೆನ್ನಾಗಿ ಗೊತ್ತು. ಒಂದು ವೇಳೆ ನಾನು ಸೋಲಬಹುದು ಆದರೇ ಅವಳು ಸೋಲುವುದಿಲ್ಲ.

**ರಾ. ಮೆಹ್ತಾ** : - ನನಗೆ ಗೊತ್ತು, ಆದರೇ ನಿಮ್ಮ ಹಠದ ಬಗ್ಗೆ ಗೊತ್ತಾದ್ರೆ ಅವಳು ಸೋಲ್ತಾಳೋ ಇಲ್ವೋ ಎಂಬೋದು?

**ವಸಂತ್** : - ನನ್ಗೆ ಆ ರೀತಿ ಏನೂ ಅನ್ಸೋಲ್ಲ.

**ರಾ. ಮೆಹ್ತಾ** : - ಏಕೆ? **(ಗಂಟೆ ಬಾರಿಸುತ್ತಾ)** ಆ ಸರಳಾಳನ್ನು ಕರೆದು ತಾ. **(ಸರಳಾ ಬರುತ್ತಾಳೆ)** ಇವರೇ ವಸಂತ್ ಶುಕ್ಲಾ ಅಲ್ವೇನು?

**ಸರಳಾ** : - **(ಮೇಲುದನಿಯಲ್ಲಿ)** ಹೌದು.

**ರಾ. ಮೆಹ್ತಾ** : - ಇವರು ಅಚ್ಯುತರೊಡನೆ ಭೇಟಿ ಆಗ್ತಿದ್ದರು ಅಲ್ವೇನು?

**ಸರಳಾ** : - **(ಮೇಲುದನಿಯಲ್ಲಿ)** ಹೌದು .........

**ರಾ. ಮೆಹ್ತಾ** : - ನೀವು ಈ ಮಾತನ್ನು ವಸಂತ್‌ರವರಿಗೆ ಒಪ್ಕೊಳ್ಳೋದಿಕ್ಕೆ ಹೇಳ್ತೀರೇನು?

**ಸರಳಾ** : - **(ಅಳುತ್ತಾ)** ವಸಂತ್ .... ಈ ಮಾತು ಒಪ್ಕೋ ........

**ವಸಂತ್** : - **(ಗಂಭೀರನಾಗಿ)** ನೀವು ಈ ಮಾತನ್ನು ಯಾರ ಹತ್ತಿರ ಮಾತಾಡ್ತಿದ್ದೀರಿ?

**ಸರಳಾ** : - **(ಆಶ್ಚರ್ಯ)** ನಿನ್ನ ಹತ್ತಿರ, ಯಾಕೇ?

**ವಸಂತ್** : - ನನಗೆ ಇವರು ಯಾರೋ ಗೊತ್ತಿಲ್ಲ.

**ಸರಳಾ** : - **(ಜೋರಾಗಿ)** ವಸಂತ್ ....... ನೀನು ....... ನನ್ನ .........

**(ಅವನತ್ತ ಓಡುತ್ತಾಳೆ)**

**ವಸಂತ್** : - ದೂರ ಇರು. ನನ್ನನ್ನು ಮುಟ್ಟಿ ಅಪವಿತ್ರನ್ನಾಗಿ ಮಾಡಬೇಡ.

**ರಾ. ಮೆಹ್ತಾ** :- ಮಿ. ಶುಕ್ಲಾ, ಯಾಕೆ ಹುಚ್ಚುಚ್ಚಾಗಿ ಮಾತನಾಡ್ತ ಇದ್ದೀರ? ಸರಳಾ ನಿಮಗೆ ಪರಿಚಯ ಇಲ್ಲವೇನು?

**ವಸಂತ್** : - ಖಂಡಿತಾ ಇಲ್ಲ. ಇವಳ ಹೆಸರಿನ ಬೇರೆ ಸರಳ ಪರಿಚಯ ಇದೆ. ಅವಳಿಗೋಸ್ಕರ ಪ್ರಾಣ ಕೊಡ್ತೀನಿ. ಯಾರ ವಿಷಯದಲ್ಲಿ ನಿಮ್ಮ ಹತ್ತಿರ ಮಾತನಾಡಿದ್ದೇನೋ ಅವಳು. ...... ಅವಳು ......... **ಸತ್ತು ಹೋದ್ಲೂ**

**ರಾ. ಮೆಹ್ತಾ** : - **(ಗಂಟೆ ಬಾರಿಸುತ್ತಾ)** ಏ. ಡಾಕ್ಟರನ್ನು ಕರೆದು ತಾ. ಬೇಗ **(ಪೋಲಿಸ್ ಗುಂಪು ಸೇರಿತ್ತದೆ. ಆಗ ........)**

**(ತೆರೆ)**

## ಪಾತ್ರಗಳು

ಕಲ್ಯಾಣ
ಪಿ. ಮುಖರ್ಜಿ
ಮಿ. ಸೇನ್
ಜಡ್ಜ್ ಘೋಷಾಲ್
ತಾಯಿ
ಧೀರಜ್
ಸಚ್ಚಿತ್
ಸುವ್ರತ್
ಗಂಗೋಲಿ
ಸೇಠ್ ಜೀ
ಮತ್ತು ಇತರರು

**[ ರಂಗಭೂಮಿಯನ್ನು ಎರಡು ಭಾಗಗಳಾಗಿ ವಿಭಾಗಿಸಿದೆ. ಮುಂಭಾಗ ಖಾಲಿ ಇದೆ. ಹಾಗೂ ಅರ್ಧಕ್ಕೂ ಹೆಚ್ಚು ಜಾಗ ಬಿಟ್ಟು ಹಿಂಭಾಗದ ರಂಗ ಭೂಮಿಯು ನಾಲ್ಕೈದು ಅಡಿ ಎತ್ತರವಿದೆ. ಮತ್ತೊಂದು ಭಾಗ ಬೇರೆ ರೀತಿಯ ಬೆಳಕಿನಿಂದಲೂ, ಪರದೆಗಳಿಂದಲೂ ಕೂಡಿದೆ, ಮುಂಭಾಗ ಒಂದು ಸಾಮಾನ್ಯ ದಿವಾನ ಖಾನೆಯ (drawing room) ಹಾಗಿದೆ, ಮಧ್ಯಭಾಗದಲ್ಲಿ ಸೋಫಾ ಸೆಟ್ ಮತ್ತು ಒಂದೆರಡು ಕುರ್ಚಿಗಳು ಇವೆ. ಮಧ್ಯಭಾಗದಲ್ಲಿ ಅಸ್ತವ್ಯಸ್ತವಾದ ಮೇಜು ಮತ್ತು ಹಿಂಭಾಗದ ಗೋಡೆಯಲ್ಲಿ ಒಂದು ಬಾಗಿಲು ಮತ್ತು ತಂತಿಯ Mesh ಇರುವ ಒಂದು ದೊಡ್ಡ ಕಿಟಕಿ ಇದೆ. ಕಿಟಕಿಯ ಬಳಿ ಇರುವ ಟೀಪಾಯ್ ಮೇಲೆ phone ಇಟ್ಟಿದೆ.**

**ಪರದೆ ಏರುವ ಮೊದಲು ಒಂದು ರೀತಿ ಗಂಭೀರ ವಾತವರಣ, ಸಂಗೀತದ ಧ್ವನಿ ಏರುತ್ತಾ ಹೋದಮೇಲೆ ನಿಧಾನವಾಗಿ ಪರದೆ ಸರಿಯುತ್ತದೆ. ಆಗ .... ರಂಗದ ಮೇಲೆ ಮೂರು ಬಾರಿ ರಿವಲ್ವಾರ್ ಹಾರಿಸಿದ ಗುಂಡಿನ ಶಬ್ದ ಕೇಳುತ್ತಿದೆ. " ಅಯ್ಯೋ ಅಪ್ಪ, ಸತ್ತೆ ...... ಸತ್ತೆ ಎಂಬ ಧ್ವನಿಯ ಜೊತೆ ದೊಪ್ಪೆಂದು ಬಿದ್ದ ಶಬ್ದ ಕೇಳುತ್ತದೆ, ದೀಪ ಮಂದವಾಗಿ ಹತ್ತಿಕೊಂಡ ಮೇಲೆ ಮೇಜು ಮತ್ತು ಸೋಫಾದ ನಡುವೆ ಪೋಲಿಸ್ ಆಫೀಸರ್‌ನ ಡ್ರೆಸ್‌ನಲ್ಲಿ ಇರುವ ಒಬ್ಬ ಯುವಕ ಸತ್ತು ಬಿದ್ದಿರುತ್ತಾನೆ. ಬೆಳಕು ಒಂದಾದರ ಮೇಲೆ ಒಂದರಂತೆ ಪ್ರಕಾಶಮಾನ ವಾಗುವಂತೆ ಕೊನೆಗೆ ಕುರ್ಚಿಯ ಹಿಂದೆ ಕೈಯಲ್ಲಿ ರಿವಾಲ್ವರ್ ಹಿಡಿದು ನಿಂತಿರುವ ಹುಡುಗಿಯ ಮೇಲೆ ಬೀಳುತ್ತದೆ. ಹುಡುಗಿ ತುಂಬಾ ಸಿಟ್ಟಿನಿಂದ ಇರುವ ಹಾಗೆ ಕಾಣುತ್ತಾಳೆ. ಈಗ ರಂಗಭೂಮಿಯ ತುಂಬಾ ಪ್ರಕಾಶವಾಗುತ್ತದೆ]**

**ಕಲ್ಯಾಣಿ** : - ನಿನಗೆ ಏನಾಗಬೇಕಾಗಿತ್ತೋ ಅದೇ ಆಯ್ತು. **(ಹೆದರಿಕೆಯಿಂದ ಅಲ್ಲಿಂದಿಲ್ಲಿ ಓಡಾಡುತ್ತಾಳೆ. ಟೆಲಿಫೋನ್ ಬಳಿ ಹೋಗುತ್ತಾಳೆ. ರಿಂಗ್ ಮಾಡುತ್ತಾ)** ಕಲ್ಕತ್ತ. ಒನ್ ಡಬಲ್ ಜೀರೋ. ಎಸ್. ಎಸ್. ಪ್ಲೀಜ್.. ಹಲೋ .. ಎಲ್ಲಿಂದ ಮಾತಾಡ್ತಾ ಇರೋದು? ರಾವ್ ಬಜಾರ್ police station ಆ? ಸ್ವಲ್ಪ ಆಫಿಸರ್ ಇನ್ ಚಾರ್ಜ್ ಕರಿತಿರೇನು? ....... ಹಲೋ ಆಫೀಸರ್ ........ ಅರೆ ಯಾರು?......... ಮಿ. ಮುಖರ್ಜಿನ? ಹಾಂ, ನಾನು, ನಾನು ಕಲ್ಯಾಣಿ ಮುಜಂದಾರ್ ಮಾತಾಡ್ತಾ ಇರೋದು ..... ನಾನು ಬಾವೂ ಬಜಾರ್ ಮತ್ತು ಚಿತ್ತರಂಜನ್ ಅವೆನ್ಯೂ ಕ್ರಾಸಿಂಗ್ ಹತ್ತಿರ ಇರೋ ನಿರ್ಮಲ್ ಲೋಹಿಯ ರಸ್ತೆ 12ನೇ ನಂಬರಿನ ಮನೆಯಿಂದ ಮಾತಾಡ್ತಾ ಇರೋದು ...... ತಾವು ಇಲ್ಲಿಗೆ ದಯವಿಟ್ಟು ಅರ್ಜೆಂಟಾಗಿ ಬರುತ್ತಿರೇನು? ಇಲ್ಲಿ ಒಂದು ಖೂನಿ ಆಗಿದೆ. ಹೂ .... ಖೂನಿ. ಕೊಲೆಗಡಕ ಸಹಾ ಇಲ್ಲೇ ಇದ್ದಾನೆ. ಹಾಂ!....... ಅದು ನಾನೇ ....... ಹೌದು ನಾನೇ, ಕಲ್ಯಾಣಿ ಮುಜುಂದರ್.

**(ರಿಸಿವರ್ ಇಟ್ಟು, ಕುರ್ಚಿಯ ಮೇಲೆ ದೊಪ್ಪೆಂದು ಕೂರುತ್ತಾಳೆ. ಮೃತ ವ್ಯಕ್ತಿಯನ್ನು ತಿರಸ್ಕಾರದಿಂದ ನೋಡುತ್ತಾಳೆ. ಹೊರಗೆ ಮೆಟ್ಟಿಲ ಬಳಿ ಶಬ್ದ. ಕೆಲವರ ಪಾದಗಳ ಶಬ್ದ ಮತ್ತು ಗುಸು ಗುಸು ಶಬ್ದ ಕೇಳಿ ಬರುತ್ತದೆ.)**

**ಒಬ್ಬ** : - **(ಹೊರಗಿನಿಂದ)** ಇದೇ ...... ಇದೇ ಕೊಠಡಿಯಿಂದಲೇ ರಿವಲ್ವಾರ್ ಹಾರಿಸಿದ ಶಬ್ದ ಕೇಳಿ ಬಂದಿದ್ದು.

**ಮತ್ತೊಬ್ಬ** : - ಒಳಗೆ ಯಾರಿರ ಬಹುದು?

**ಮೂರನೆಯವನು** :- **(ಬಾಗಿಲು ಬಡಿಯುತ್ತಾ)** ಯಾರು. ಬಾಗಿಲು ತೆಗೀರಿ. ಬಾಗಿಲು .......

**ಕಲ್ಯಾಣಿ** : - ಓ. ಇಗ ಬಂತು ಹೇಡಿಗಳ ಗುಂಪು **(ತಿರಸ್ಕಾರದಿಂದ ನಗುತ್ತಾಳೆ)**

**ಮೂರನೆಯವ** : - ಯಾರು ಒಳಗೆ? ಖಂಡಿತವಾಗ್ಲೂ ಯಾರೋ ಮನೆ ಒಳಗೆ ನುಗ್ಗಿರಬೇಕು. ಬಾಗಿಲು ತೆಗೀರಿ. ಬಾಗಿಲು.

**ಒಬ್ಬ** : - ಅರೆ. ಕಿಟಕಿಯಿಂದ ಧುಮುಕಿ ಓಡಿ ಹೋಗಿರಬಹುದು. **(ಮುಚ್ಚಿದ ಕಿಟಕಿಯನ್ನು ತೆರೆಯಲು ಪ್ರಯತ್ನಿಸುತ್ತಾನೆ)**

**ಮತ್ತೊಬ್ಬ** : - ಯಾರಾದ್ರೂ ಪೋಲಿಸನವರಿಗೆ ತಿಳಿಸಿ.

**ಕಲ್ಯಾಣಿ** : - **(ಕೈಯಲ್ಲಿ ರಿವಲ್ವಾರ್ ಹಿಡಿದು ಬಾಗಿಲು ತೆಗೆದು)** ಏನೂ ಅವಶ್ಯಕತೆ ಇಲ್ಲ. ನೀವು ಇಲ್ಲಿಂದ ಹೊರಟು ಹೋಗಿ. ಯಾರಿಗೂ ಇಲ್ಲಿ ಕೆಲಸವಿಲ್ಲ.

**ಒಬ್ಬ** : - ಅಯ್ಯೋ ಚಂಡೀ ..........

**ಕಲ್ಯಾಣಿ** : - ಚಂಡಿನೋ. ಚಾಮುಂಡಿನೋ. ಹುಷಾರ್. ಯಾರಾದರೂ ಮುಂದೆ ಬಂದರೇ .........

**ಗುಂಪಿನಿಂದ ಒಬ್ಬ** : - ಯಾಕೆ ಹೆದರ್ತ್ಯೋತೀರಿ? ಒಳಗೆ ಏನಾಗಿದೆ ಅಂತ ನೋಡಿ.

**(ಬಾಗಿಲು ತೆರೆಯುತ್ತಾನೆ. ನಾಲ್ಕೈದು ಜನ ಒಳನುಗ್ಗುತ್ತಾರೆ)**

**ವ್ಯಕ್ತಿ೧** : - **(ಹೆದರುತ್ತಾ ಓಡುತ್ತಾನೆ)** ಅಯ್ಯೋ ಖೂನಿ! ಖೂನಿ!

**(ಹೊರಗಿನಿಂದ ಏನು? ಯೂರ್ದು? ಎಂಬ ಧ್ವನಿ ಕೇಳಿಬರುತ್ತದೆ)**

**ವ್ಯಕ್ತಿ೨** : -ಅಯ್ಯೋ ದುರ್ಗಮ್ಮ ನೀನೇ ಕಾಪಾಡು! ಕಾಪಾಡು! **(ಎಂದು ಹೇಳುತ್ತಾ ಮಂಕನಂತೆ ಹೊರಗೆ ಹೋಗುತ್ತಾನೆ)**

**ವ್ಯಕ್ತಿ೩** : -ಅಯ್ಯೋ. ಜಗಳ. ಖೂನಿ. ಖೂನಿ

**(ಗುಂಪಿನ ಎದುರಿಗೆ ಕಲ್ಯಾಣಿ ರಿವಾಲ್ವರ್ ಹಿಡಿದು ಅಲುಗಾಡದೆ ನಿಂತಿದ್ದಾಳೆ)**

**ವ್ಯಕ್ತಿ೧** : - ರಿವಾಲ್ವರ್ ರೆಡಿ ಆಗಿದೆ. ಮುಂದೆ ಹೋದರೆ ಗುಂಡೇಟು ಬಿಳುತ್ತೆ.

**ವ್ಯಕ್ತಿ೨** : - ಛೆ. ಛೆ! ಈ ಸಭ್ಯಗೃಹಸ್ಥರ ಬಡಾವಣೇಲಿ ಖೂನಿ ಅಂದರೇನು?

**ವ್ಯಕ್ತಿ** : - ಹಿಡ್ಕೊಳ್ಳಿ. ಅವ್ಳನ್ನ ಹಿಡಿದು ಪೋಲಿಸನವರಿಗೆ ಕೊಡಿ.

**(ಕೆಳಗೆ ಪೋಲಿಸ್ Jeep ನಿಂತ ಶಬ್ದ, ನಂತರ ಪೋಲಿಸ್ ಬೂ ಟುಗಳು ಮೆಟ್ಟಿಲು ಹತ್ತುತ್ತಿರುವ ಶಬ್ದ)**

**ಹೊರಗಿನ ಗುಂಪು** : - ಓ. ಪೋಲಿಸ್ ವ್ಯಾನು ಬಂತು. ಓಡಿ. ಇಲ್ದಿದ್ರೇ ನಮ್ಮನ್ನು ಹಿಡಕೊಂಡು ಹೋಗ್ತಾರೆ.

**ಒಳಗಿನ ಗುಂಪು** : - ನೋಡೋದಕ್ಕೆ ಸಭ್ಯಳಾಗಿ ಕಾಣ್ತಾಳೆ. ಆದರೇ ಅವಳು ನಿಂತಿರುವ ಭಂಗಿ ನೋಡಿ.

**ವ್ಯಕ್ತಿ೧** : - ಹುಚ್ಚಿ ಇರ್ಬೇಕು ಹುಚ್ಚಿ.

**ವ್ಯಕ್ತಿ೨** : - ಏನೇ ಹೇಳೀ. ಇದರಲ್ಲಿ ಏನೋ ರಹಸ್ಯ ಅಡಗಿರಬೇಕು.

**ವ್ಯಕ್ತಿ೩** : - ಓ! ಪೋಲಿಸ್ನೋರು ಬಂದೇ ಬಿಟ್ರು. ಆ ಚಂಡಿ ಚಾಮುಂಡಿ ನಿಜಾನೇ ಹೇಳಿದ್ದಾಳೆ.

**ಪೋಲಿಸ್ ಧ್ವನಿ** : - ಏಯ್. ದೂರ ಹೋಗಿ. ಇಲ್ಲೇನು ಕೋತಿ ಕುಣಿತ್ತಿದೇಯಾ?

**ಗುಂಪು** : - **(ಕೆಲವರು ಕಿಟಕಿ ಮತ್ತು ಬಾಗಿಲುಗಳ ಹತ್ತಿರ ನಿಲ್ಲುತ್ತಾರೆ)**

**ಗುಂಪು** : - ನೋಡಿ ಸಾರ್. ಇನ್ನೂ ರಿವಾಲ್ವರನ್ನು ಕೈಯಲ್ಲಿ ಹಿಡ್ಕೊಂಡು ನಿಂತಿದ್ದಾಳೆ.

**ಮಿ. ಮುಖರ್ಜಿ** : - **(ಬರುತ್ತಾ)** ಪರವಾಗಿಲ್ಲ. ನೀವೆಲ್ಲಾ ಇಲ್ಲಿಂದ ಹೊರಟು ಹೋಗಿ.

**ಕಲ್ಯಾಣಿ** : - ಒಳಗೆ ಬಹಳ ಜನ ಬರೋ ಅವಶ್ಯಕತೇನೂ ಇಲ್ಲ. ನಾನು ನಿಮ್ಮ ಜೊತೆ Police stationಗೆ ಬರೋಕ್ಕೆ ತಯಾರು. ತಗ್ಗೋಳ್ಳಿ ಈ ರಿವಾಲ್ವರನ್ನ.

**ಮಿ. ಮುಖರ್ಜಿ** : - ನೀವೂ ಇಲ್ಲೇ Statement ಕೊಡಬೇಕಾಗುತ್ತೆ. ದಫೇದಾರ್ ನಾಥೂಸಿಂಗ್ ಬರ್ಕೊ ಅವರ ಹೇಳಿಕೇನ.

**ಕಲ್ಯಾಣಿ** : - ನನ್ನನ್ನು ಏನೂ ಕೇಳಬೇಡಿ. ನಾನು ಒರ್ವ ಕೊಲೆಗಡುಕಿ ಹೆಣ್ಣು.

**ಮಿ. ಮುಖರ್ಜಿ** : - **(ಹೆಣದತ್ತ ನೋಡುತ್ತಾ)** ಅರೇ ಯಾರೋ Police officer ಥರ ಕಾಣುತ್ತೆ. ಹವಲ್ದಾರ್ ಈ ಎಲ್ಲಾ ಸಾಮಾನುಗಳು ಎಲ್ಲೆಲ್ಲಿ ಬಿದ್ದಿವೆ ಅಂತ ನೋಟ್ ಮಾಡ್ಕೋ. ಏಯ್. ರಾಮ್ ಕುಮಾರ್ phone ಮಾಡಿ Hospital ನಿಂದ Ambulance ತರಕ್ಕೆ ಹೇಳು. ಜೊತೆಗೆ ನೀನು ಈ ಹೆಣಾನಾ post mortmಗೆ ತೆಗೆದುಕೊಂಡು ಹೋಗು. **(ನಾಥೂ ಸಿಂಗನಿಗೆ ಹೆಣವನ್ನು ತೋರಿಸುತ್ತಾ)** ಇವರು ನಿನ್ಗೆ ಗೊತ್ತೇನು?

**ನಾಥು ಸಿಂಗ್** : - ಇಲ್ಲಾ ಸಾರ್. ನನಗೆ ಗೊತ್ತಿಲ್ಲ. ಮುಖಕ್ಕೆ ಗುಂಡಿನೇಟು ಬಿದ್ದಿದ್ದರಿಂದ ಗುರ್ತು ಹಿಡಿಯೋಕ್ಕೆ ಆಗ್ತಿಲ್ಲ.

**ಕಲ್ಯಾಣಿ** : - ಪೋಲಿಸ್ ಆಫೀಸರ್ ಇರಬಹುದು. ಮಿ. ಮುಖರ್ಜಿ ಬೇಡಿ ಹಾಕುವ ಯೋಚನೆ ನಿಮಗಿದ್ದರೆ ಹಾಕಿ. ನನಗಂತೂ ಓಡಿ ಹೋಗುವ ಆಸೆ ಇಲ್ಲಾ.

**ಒಬ್ಬ ಪೋಲಿಸ್** : - ಒಳ್ಳೆ ಹಲ್ಕಟ್ ರಂಡೆ ತರಾ ಕಾಣಿಸ್ತಾಳೇ. ಸ್ವಲ್ಪ ನಾಚಿಕೇನೂ ಇಲ್ಲ

**ಕಲ್ಯಾಣಿ** : - ನಾಚಿಕೆ. ಎಂಥಾ ನಾಚಿಕೆ?

**ಮಿ. ಮುಖರ್ಜಿ** : - ಜಾಸ್ತಿ ಮಾತನಾಡಬೇಡಿ. ನಾಥೂಸಿಂಗ್. ಇವಳನ್ನು ಕರ್ಕೊಂಡು ನಾನು police stationಗೆ ಹೋಗಬೇಕಾಗಿದೆ. ಕೊಠಡಿ ಪೂರಾ ಸರಿಯಾಗಿ ಮಹಜರ್ ಮಾಡಿ.

**(ಕಲ್ಯಾಣಿ ಮುಖರ್ಜಿ ಜೊತೆ ಹೊರಗೆ ಹೋಗುತ್ತಾಳೆ)**

**ಹೊರಗಿನ, ಗುಂಪು** : - ದಾರಿ ಬಿಡಿ. ದಾರಿ ಬಿಡಿ.

**ವ್ಯಕ್ತಿ.೧** : - ಏನು ಗತ್ತು ನೋಡು?

**ವ್ಯಕ್ತಿ.೨** : - ಏನೋ ಮಹತ್ಕಾರ್ಯ ಮಾಡಿದ ಹಾಗೇ?

**ವ್ಯಕ್ತಿ.೩** : - ಏನೇ ಆಗಲಿ ಬಹಳ ಗಟ್ಟಿಗಿತ್ತಿ ಹೆಣ್ಣು.

**ವ್ಯಕ್ತಿ.೪** : - ಪೇಪರ್‌ನೋರಿಗೆ ಒಂದು ಹೊಸ ಸುದ್ದಿ ಸಿಕ್ಕ ಹಾಗಾಯ್ತು.

**ವ್ಯಕ್ತಿ.೫** : - ಹೌದು. ನಾಳೆ sensational localing ನಲ್ಲಿ ಬರುತ್ತೆ.

**(ಕ್ರಮೇಣವಾಗಿ ಜನಗಳ ಕೋಲಾಹಲ ಕಡಿಮೆಯಾಗುತ್ತದೆ. ಸ್ವಲ್ಪ ಹೊತ್ತಿನ ನಂತರ ಮೂವರು ಜೂನಿಯರ್ ವಕೀಲರ ಪ್ರವೇಶ. ಕೋರ್ಟಿನ ವಾತವರಣ)**

**ಮಿ. ಮೈತ್ರಾ (ವಕೀಲ 1)** : - ಮಿ.ಚಟರ್ಜಿ. ನಿಮಗೆ ಇವತ್ತು ಕೊರ್ಟ್ ಇಲ್ಲದಿದ್ರೆ ಬನ್ನಿ ಹೋಗೋಣ.

ಜಸ್ಟಿಸ್ ಘೋಷಾಲ್‌ರವರ ಕೋರ್ಟಿನಲ್ಲಿ ಇವತ್ತೊಂದು Interesting case ಇದೆ.

**ಮಿ. ಮುಖರ್ಜಿ (ವಕೀಲ2)** : -ಅದೇ ಕಲ್ಯಾಣಿ case ತಾನೇ? ಬಹಳ Interesting ಊ.

ಅವಳು ಏನೂ ಹೇಳಬೇಕಾಗಿದೆಯೋ ಅದೆನ್ನಲ್ಲಾ sessions ಕೋರ್ಟಿನ ಮುಂದೆ ಹೇಳ್ತೀನಿ ಅಂತ ಹೇಳ್ತಿದ್ದಾಳೆ. ನಾನಂತೂ ಬಂದೇ ಬರುತ್ತೇನೆ. ನನ್ನ ಕಕ್ಷಿದಾರನಿಗೆ ನನ್ನ ಆರೋಗ್ಯ ಸರಿಯಿಲ್ಲ ಅಂತ ಮುಂದೆ ಕರ್‍ಕೋತೀನಿ.

**ಮಿ. ಜೋಯ್ (ವಕೀಲ 3)** : - **(ದೊಡ್ಡಸ್ತಿಕೆಯಿಂದ)** ಹಾಗಿದ್ರೆ ನಾನೂ ಮುಂದೆ ಹಾಕಿಸ್ಕೋಬೇಕಾಗುತ್ತೆ.

**ವಕೀಲ 1** : - **(ಆಶ್ಚರ್ಯದಿಂದ)** ಏಕೆ? ನಿನ್ನ ಕೇಸೇನು? ನಿನ್ನ ಹತ್ರನೂ ಕಕ್ಷಿದಾರರೂ ಬರುತ್ತಿದ್ದಾರೇನು? congrats

**ವಕೀಲ 2** : -ಅಂದ್ಹಾಗೆ, ಪ್ರಾಕ್ಟೀಸ್ ಶುರುಮಾಡಿ ಎಷ್ಟು ವರ್ಷ ಆಯ್ತು ಮಿ. ಜೋಯ್?

**ವಕೀಲ 3** : -ನೀನು ಹೀಗೆ ತಮಾಷೇ ಮಾಡ್ತೀರು. ಒಂದು ದಿವಸ ನಿನ್ಗೆ ಸರಿಯಾಗಿ ಉತ್ತರ ಕೊಡ್ತೀನಿ. ಬಿಹಾರಿ ಘೋಷ್ ಅಥವಾ ಚಿತ್ತರಂಜನ್ ದಾಸ್ ಒಂದು ದಿನಕ್ಕೆ ಆಗಲಿಲ್ಲ.

**ವಕೀಲ 1** : -ಓ! ಐಯಾಮ್ ವೆರಿ ಸಾರಿ ಮಿ. ಚಿತ್ತರಂಜನ್ ದಾಸ್ .........

**ವಕೀಲ 2** : -Oh! It's already eleven thirty ..... come on ......

**(ಮೂವರೂ ಹೋಗುತ್ತಾರೆ. ಕೋರ್ಟಿನ ಸ್ಟೇಜು ಜಡ್ಜ್ ಪ್ರವೇಶ)**

**ಜಡ್ಜ್ ಘೋಷಾಲ್** : - ಮಿ. ಗಂಗೂಲಿ ಮೊದಲನೆ ಕೇಸೂ ........

**ಗುಮಾಸ್ತ** : - ವೆಸ್ಟ್ ಬೆಂಗಾಲಿನ ಸ್ಟೇಟಿನವಿರುದ್ಧವಾಗಿ ಮಿಸೆಸ್. ಕಲ್ಯಾಣಿ ಮಜುಂದಾರ್.

**ಜಡ್ಜ್** : - ಮಿ. ಸೆನ್, ನಿಮ್ಮ ಕೇಸ್ ಸಿದ್ಧವಾಗಿದೆಯೋ?

**ಮಿ. ಸೆನ್** : - **(ಪಬ್ಲಿಕ್ ಪ್ರಾಸಿಕ್ಯೂಟರ್)** ಎಸ್. ಮೈ ಲಾರ್ಡ್.

**ಜಡ್ಜ್** : - ಅಪರಾಧಿಯನ್ನು ಕರೆದು ತನ್ನಿ.

**(ಮಿ. ಮುಖರ್ಜಿ ಕಲ್ಯಾಣಿಯನ್ನು ಕಟೆಕಟೆಯಲ್ಲಿ ನಿಲ್ಲಿಸುತ್ತಾರೆ. ಜನಗಳ ಗುಂಪಿನಿಂದ ಗುಸು ಗುಸು ಶಬ್ದ ಆರಂಭವಾಗುತ್ತದೆ)**

**ಜಡ್ಜ್** : - ಪ್ರತಿವಾದಿಯ ವಕೀಲರು ಯಾರು?

**ಕಲ್ಯಾಣಿ** : - ವಕೀಲರೇ? ನನಗೆ ಯಾವ ವಕೀಲರ ಅವಶ್ಯಕತೇನೂ ಇ‌ೀ ನಾನು ಏನು ಹೇಳಬೇಕೆಂದಿದ್ದೇನೋ ಅದನ್ನು ಧೈರ್ಯವಾಗಿ ಕೋರ್ಟಿನ ಮುಂದೆ ಹೇ ‌ತ್ತೇನೆ. ನನ್ಗೆ ಯಾವ ವಕೀಲನ ಅವಶ್ಯಕತೆನೂ ಇಲ್ಲ.

**ಜಡ್ಜ್** : - ಒಳ್ಳೇದು. ಮಿ. ಸೇನ್, ನಿಮ್ಮ ಕೇಸನ್ನು ಮುಂದುವರಿಸಿ.

**ಮಿ. ಸೇನ್** : - ಮೈ ಲಾರ್ಡ್! ನಿಮ್ಮ ಮುಂದೆ ತಂದಿರುವ ಈ ಹೆಂಗಸು ಅಂದರೆ ಕಲ್ಯಾಣಿ ಮಜುಂದಾರ್, ಅವರ ಮೇಲಿನ ಪ್ರಸ್ತುತ ಆರೋಪವೆಲ್ಲಾ .........

**ಕಲ್ಯಾಣಿ :- (ಮಧ್ಯದಲ್ಲಿ)** ಆರೋಪವೇ? ನನ್ನ ಮೇಲೆ?

**ಮಿ. ಸೇನ್** : - ಮಧ್ಯದಲ್ಲಿ ಮಾತಾಡಬೇಡಿ.

**ಜಡ್ಜ್ ಘೋಷಾಲ್** : - ಆರ್ಡರ್, ಆರ್ಡರ್

**ಮಿ. ಸೇನ್** . - ಇಂದಿಗೆ ಸರಿಯಾಗಿ ಒಂದು ತಿಂಗಳ ಹಿಂದೆ 22ನೇ ಜುಲೈ 1950ರ ಶನಿವಾರ ರಾತ್ರಿ ಒಂಬತ್ತುವರೆ ಸಮಯಕ್ಕೆ ಲಾಲ್ ಬಜಾರ್ police station ಗೆ phone ಬಂತು ..........

**ಕಲ್ಯಾಣಿ** : - ಸಂಕ್ಷಿಪ್ತವಾಗಿ ಹೇಳಿ ಮಿ. ಸೇನ್, ವಿಷಯ ಇಷ್ಟು, ನಾನು ಸ್ವತಃ .......

**ಮಿ. ಸೇನ್** : - ಕಾನೂನಿನ ದೃಷ್ಟಿಯಿಂದ ನಡೆಯಬೇಕಾದ್ದೆಲ್ಲಾ ನಡೆಯಲೇ ಬೇಕು.

**ಕಲ್ಯಾಣಿ**:- ಕಾನೂನು ಮತ್ತು ವ್ಯವಸ್ಥೆ .... ಹಾ ...... ಹಾ. **(ನಗುತ್ತಾಳೆ)** ಎಂಥ ನಿಯಮ? ಎಲ್ಲಿದೆ ವ್ಯವಸ್ಥೆ?

**ಜಡ್ಜ್** : - ನೀವು ಏನು ಹೇಳಬೇಕೆಂದಿದ್ದೀರಿ?

**ಕಲ್ಯಾಣಿ** : - ನಿಮ್ಮ ಕಾನೂನು ಮತ್ತು ವ್ಯವಸ್ಥೆಯಲ್ಲಿ ನನಗೇನೂ ಅರ್ಥ ಕಾಣೋಲ್ಲ. ನನಗೆ ಅದರ ಬಗ್ಗೆ ತಿರಸ್ಕಾರ ಇದೆ.

**ಜಡ್ಜ್** : - ಮೊದಲು ಆರೋಪದ Report ಓದಲಿ. ನಂತರ ನೀವು ಹೇಳಬೇಕಾದ್ದನ್ನು ಹೇಳಿ.

**ಮಿ. ಸೇನ್** : - ನಾನು ಸಂಕ್ಷಿಪ್ತವಾಗೇ ಮುಗಿಸುತ್ತೇನೆ ಮಿಸ್. ಕಲ್ಯಾಣಿ ಮಜುಂದಾರ್ ಜೂಲೈ 22ರ ರಾತ್ರಿ ನಿರ್ಮಲ್ ಲೋಹಿಯಾ ರಸ್ತೆ 12ನೇ ನಂಬರ್ ಮನೆಯಲ್ಲಿ ಗುರ್ತು ಸಿಗದ ಪೋಲಿಸ್ ಅಧಿಕಾರಿಯಬ್ಬರ ಕೊಲೆ ಮಾಡಿದ್ದಾರೆ .........

**ಜಡ್ಜ್** : - ಏನು? ಇನ್ನೂ ಪೋಲಿಸ್ ಅಧಿಕಾರಿಯ ಗುರ್ತು ಸಿಕ್ಕಿಲ್ಲವೇ?

**ಮಿ. ಸೇನ್** : - ಮೈ ಲಾರ್ಡ್! ಮೃತನ ಗುರ್ತು ಸಿಗದಂತೆ ಮುಖದ ಮೇಲೆ ಹೊಡೆಯಲಾಗಿದೆ.

**ಜಡ್ಜ್** : - ಆದರೂ ಬಟ್ಟೆ, ರಿವಾಲ್ವರ್‌ನಿಂದ, police register ಗಳಿಂದ ಏನೂ ಪತ್ತೆಯಾಗಲಿಲ್ವೇ?

**ಮಿ. ಸೇನ್** : - ಪೋಲಿಸರು ತನಿಖೆ ನಡೆಸುತ್ತಿದ್ದಾರೆ. ಆದರೂ ಈ ಕೇಸಿನಲ್ಲಿ ಮಿಸ್ ಮಜುಂದಾರ್ ವ್ಯಕ್ತಿಯೊಬ್ಬನ ಖೂನಿ ಮಾಡಿದ್ದಾರೆ ಅನ್ನೋದು ಮಹತ್ವದ ವಿಷಯ.

**ಜಡ್ಜ್** : - Go on with your case please.

**ಮಿ. ಸೇನ್** : - Yes, my lord. ಮತ್ತು phone ನಲ್ಲಿ ತಾನೇ ಪೋಲಿಸಿನವರಿಗೆ ಸುದ್ದಿ ಕೊಟ್ಟು ತಾನೇ ಪೋಲಿಸರಿಗೆ ವಶವಾಗಿದ್ದಾಳೆ. ಪೋಲಿಸರ report ನಲ್ಲಿ ಮಿಸ್. ಕಲ್ಯಾಣಿ ಪೂರ್ವ ಬಂಗಾಳದ ನಿರಾಶ್ರಿತ ಹೆಣ್ಣು ಎಂದು ತಿಳಿದು ಬಂದಿದೆ. ಮತ್ತು ಅವರ ಪ್ರಕಾರ ಈಕೆ ತನ್ನ ಸೌಂದರ್ಯ ಮತ್ತು ಬುದ್ಧಿಯಿಂದ ಅನೇಕರನ್ನು ತನ್ನ ಬಲೆಗೆ ಹಾಕಿಕೊಂಡು .......

**ಕಲ್ಯಾಣಿ** : - ಇದು ಸುಳ್ಳು .........ಖಂಡಿತಾ ಸುಳ್ಳು.

**ಜಡ್ಜ್** : - ಆರ್ಡರ್, ಆರ್ಡರ್

**ಮಿ. ಸೇನ್** : - **(ಓದು ಮುಂದುವರಿಸುತ್ತಾ)** ಅನೇಕರನ್ನು ಮೋಸಗೊಳಿಸಿದ್ದಾರೆ. ಕಳೆದ ಮೂರು ತಿಂಗಳಲ್ಲಿ ಕನಿಷ್ಠ ......

**ಕಲ್ಯಾಣಿ**:- **(ಕಿರುಚುತ್ತಾ)** ಕಾನೂನು ಮತ್ತು ವ್ಯವಸ್ಥೆಯ ರಕ್ಷಕರೇ ಕೇಳಿ .... ಇಲ್ಲಿಯವರೆಗೆ ನ್ಯಾಯಾಲಯದ ನಿಯಮಗಳನ್ನು ಗೌರವಿಸಿದೆ. ಆದರೆ ಇನ್ನೂ ಮುಂದೆ ಯಾರಿಂದಲೂ ನನ್ನನ್ನು ತಡೆಯಲು ಸಾಧ್ಯವಿಲ್ಲ.

**ಮಿ. ಸೇನ್** : - ಇದು ನ್ಯಾಯಾಲಯದ ನಿಂದನೆ ಮೈ ಲಾರ್ಡ್

**ಕಲ್ಯಾಣಿ** : - ಇರಬಹುದು. ಅದಕ್ಕಾಗಿ ನಿಮ್ಮ ಕಾನೂನು ಹೇಳುವ ಶಿಕ್ಷೆ ನನಗೆ ವಿಧಿಸಬಹುದು. ನಾನು ಅಪರಾಧಿ ಹೌದು. ಅಪರಾಧವನ್ನು ಮಾನವಾಗಿ ಒಪ್ಕೊಂಡು ಶಿಕ್ಷೆ ಅನುಭವಿಸಬೇಕೆಂದು ಮಾಡಿದ್ದೆ. ಆದರೆ ಕಾನೂನು ಮತ್ತು ವ್ಯವಸ್ಥೆಯ ಹೆಸರಿನಲ್ಲಿ ನೀವು

ಹೇಳುತ್ತಿರುವ ಕೆಟ್ಟ ಕತೆಗಳನ್ನು ಮತ್ತು ಸುಳ್ಳುಗಳನ್ನು ಕೇಳಿ ಸುಮ್ಮನಿರಲಾರೆ. ನನ್ನಂತಹ ನಿರಾಶ್ರಿತ ಮತ್ತು ಅಬಲೆಯರಾದ ಹೆಣ್ಣುಗಳ ದೃಷ್ಟಿಯಿಂದ ನಿಮ್ಮ ಕಾನೂನು ಮತ್ತು ವ್ಯವಸ್ಥೆಯನ್ನು ಪ್ರಶ್ನಿಸುತ್ತೇನೆ.

**ಜಡ್ಜ್** : - ನೀವು ಏನು ಹೇಳಬೇಕೆಂದಿದ್ದೀರಿ ಅದನ್ನು ಕೊಂಚ ತಾಳ್ಮೆ ಮತ್ತು ಶಾಂತ ರೀತಿಯಿಂದ ಹೇಳಿ.

**ಕಲ್ಯಾಣಿ** :- ಶಾಂತಿ, ತಾಳ್ಮೆ ನನಗೆ, ಹೃದಯದಲ್ಲಿ ಬೆಂಕಿ ಉರಿಯುತ್ತಿದೆ. ನ್ಯಾಯಾಧೀಶರೇ, ನಿಮಗೆ ಹೆಣ್ಣು ಮಕ್ಕಳಿದ್ದಾರೇನು? ಮಿ. ಸೇನ್ ನಿಮಗೆ ವಯಸ್ಸಿಗೆ ಬಂದ ಮಗಳಿದ್ದಾಳೇನು?

**ಮಿ. ಸೇನ್** : - ಇದು ಮಿತಿ ಮೀರಿ ಹೋಗ್ತಾ ಇದೆ ಮೈ ಲಾರ್ಡ್, ಅಪರಾಧಿಯನ್ನು ..........

**ಜಡ್ಜ್** : - **(ಶಾಂತವಾಗಿ)** ಇವರಿಗೆ ಹೇಳೋದಕ್ಕೆ ಅವಕಾಶ ಕೊಡಿ ಮಿ. ಸೇನ್. ಹೇಳಮ್ಮ ತಂಗಿ.

**ಕಲ್ಯಾಣಿ** : - 1946ರ ಢಾಕಾ ಗಲಾಟೆಯಲ್ಲಿ ನಮ್ಮ ತಂದೆ ಯೂನಿವರ್ಸಿಟಿಯಿಂದ ಮನೆಗೆ ವಾಪಸ್ಸು ಬರುತ್ತಿದ್ದರು. ಯಾವನೋ ಜಾತಿವಾದಿಯ ಚೂರಿಗೆ ಬಲಿಯಾದರು. ಅಂದಿನಿಂದ ನಾವು ನೆಲೆ ಇಲ್ಲದ ಹಾಗಿದ್ದೇವೆ.

**ಮಿ. ಸೇನ್** : - ಯಾರು? ಪ್ರೊ. ಎಮೆಲ್ ಮಜುಂದಾರ್? ಅವರು ನಿಮ್ಮ ತಂದೆಯೇ?

**ಕಲ್ಯಾಣಿ** : - ಹೌದು.

**ಮಿ. ಸೇನ್** : - ನಿಮ್ಮಂಥ ಸುಸಂಸ್ಕೃತ ಹುಡುಗಿ ಈ ರೀತಿ ಯಾಕೆ? ........

**ಜಡ್ಜ್** : - ಉದ್ವೇಗ ಬೇಡ, ಮಿ. ಸೇನ್. ಮುಂದಕ್ಕೆ ಹೇಳಿ ಮಿಸ್ ಕಲ್ಯಾಣಿ.

**ಕಲ್ಯಾಣಿ** : - ಬಂಗ್ಲಾದೇಶ ಪೂರ್ವ ಮತ್ತು ಪಶ್ಚಿಮ ಎಂದು ವಿಭಜನೆ ಆದ ಮೇಲೆ ನಾವು ಢಾಕಾದಲ್ಲೇ ಇರುವ ಮನಸ್ಸು ಮಾಡಿದೆವು ಆದರೆ ಅಲ್ಲಿಯ ಪರಿಸ್ಥಿತಿ ಭಯಾನಕವಾಗಿತ್ತು. ಹೇಗೋ final M.A ತನಕ ಬಂದೆ. ಅಲ್ಲಿಗೆ ಓದನ್ನು ನಿಲ್ಲಿಸಬೇಕಾಯಿತು. ತಮ್ಮನ ಓದು ಮತ್ತು ಸಂಸಾರದ ಖರ್ಚನ್ನು ತೂಗಿಸಲು ಅಸಾಧ್ಯವಾಯಿತು. ಫೆಬ್ರವರಿ, ಮಾರ್ಚ್ ತಿಂಗಳ ದಂಗೆಯಿಂದ ಗೂಂಡಾಗಳಿಂದ ರಕ್ಷಣೆ ಪಡೆಯಲು ನಾನು, ತಾಯಿ ಮತ್ತು ತಮ್ಮ ಕಾನೂನಿನ ಆಶ್ರಯ ಹುಡುಕಿಕೊಂಡು ಸಿಮ್ಲಾ ಪಟ್ಟಣಕ್ಕೆ ಬಂದೆವು. ನಾವೂ ಇನ್ನೂ ಆಶ್ರಯ ಹುಡುಕುತ್ತಲೇ ಇದ್ದೆವು. ಆಗ ಒಂದು ದಿನ ..........

**(ರಂಗದ ಮುಂಭಾಗದಲ್ಲಿ ಕತ್ತಲೆ ಉಂಟಾಗುತ್ತದೆ. ಮತ್ತೆ ಬೆಳಕು ಬಂದಾಗ ರೈಲ್ವೇ ಸ್ಟೇಷನ್ ವೈಟಿಂಗ್ ರೂಮಿನ ಒಂದು ಕೊಠಡಿ, ಸ್ಟೇಷನ್‌ನಲ್ಲಿ ಕಾಣಬಹುದಾದ ಗಲಾಟೆ, ಓಡಾಟ. ವೈಟಿಂಗ್ ರೂಮ್‌ನಲ್ಲಿ ಹರಡಿರುವ ಸಾಮಾನುಗಳ ಮಧ್ಯೆ ಸುಮಾರು 50 ವರ್ಷದ ವೃದ್ಧೆ ಬಿಳಿಸೀರೆ ಉಟ್ಟು ಕೂತಿರುವುದು ಕಾಣುತ್ತದೆ. ಅವಳ ತೊಡೆಯ ಮೇಲೆ ತಲೆ ಇಟ್ಟುಕೊಂಡು 15 ವರ್ಷದ ಹುಡುಗನೊಬ್ಬ ಮಲಗಿದ್ದಾನೆ)**

**ಧೀರಜ್** : - **(ಮಲಗಿಕೊಂಡೇ)** ಅಮ್ಮ, ಅಕ್ಕ ಯಾಕೆ ಇಷ್ಟು ಹೊತ್ತಾದರೂ ಬರಲಿಲ್ಲ? ನನಗೆ ತುಂಬಾ ಹಸಿವಾಗ್ತಾ ಇದೆ.

**ತಾಯಿ** : - ತಡಿ ಮಗೂ, ಇನ್ನೇನು ಬರಬಹುದು.

**(ರಂಗದ ಮುಂಭಾಗದಿಂದ ಕಲ್ಯಾಣಿ ಕೈಯಲ್ಲಿ ಕೆಲವು ಪದಾರ್ಥಗಳನ್ನು ಹಿಡಿದು ಬರುವಳು.**

**ಅವಳ ಹಿಂದೆ ಇಬ್ಬರೂ ಅಥವಾ ಮೂವರು ಯುವಕರು ತಮ್ಮ ತಮ್ಮಲ್ಲೇ ಸನ್ನೆ ಮಾಡುತ್ತಾ ಬರುವರು)**

**ಕಲ್ಯಾಣಿ** : - ಬಹಳ ಹಸಿವಾಗುತ್ತಿದೆಯಾ ಧೀರಜ್? ನೋಡು ನಿನಗೆ ತಿಂಡಿ ತಂದಿದ್ದೀನಿ ಎದ್ದು ಕೂತ್ಕೋ.

**(ಧೀರಜ್ ಎದ್ದು ಕೂರುತ್ತಾನೆ, ಅಷ್ಟರಲ್ಲಿ ಒಳಗೆ ಬಂದ ಯುವಕರಲ್ಲೊಬ್ಬ ಗಟ್ಟಿಯಾಗಿ ಕೆಮ್ಮಿ ಅವರ ಗಮನ ಸೆಳೆಯುತ್ತಾನೆ)**

**ಸಚ್ಚಿತ್** : - ದಯವಿಟ್ಟು ಕ್ಷಮಿಸಿ. ನಾನು ಸಚ್ಚಿತ್ ರಾವ್. ಬಾಂಗ್ಲ ಮಹಿಳಾ ರಕ್ಷಣಾ ಸಮಿತಿಯ ಅಧ್ಯಕ್ಷ. ನಮ್ಮ ಸಮಿತಿ ಪೂರ್ವ ಬಂಗಾಲದಿಂದ ಬರುವ ಸಹಾಸ್ರಾರು ಅನಾಥ ಸ್ತ್ರೀಯರ ಮತ್ತು ಮಕ್ಕಳ ಕ್ಷೇಮವನ್ನು ನೋಡಿಕೊಳ್ಳುತ್ತಿದೆ. ಇವರು ಶ್ರೀ ಗಂಗೋಲಿ, ನಮ್ಮ ಉಪಾಧ್ಯಕ್ಷರು. ಇವರು ಮಿ. ಸುವ್ರತ್ ನಮ್ಮ ಖಜಾಂಚಿಗಳು.

**ಸುವ್ರತ್** : - ನಮಸ್ಕಾರ ತಾಯಿ. ನಮಸ್ತೇ ಮಿಸ್......

**ತಾಯಿ** : - ಇವಳ ಹೆಸರು ಕಲ್ಯಾಣಿ ಅಂತ. ಈ ಹುಡುಗನ ಹೆಸರು ಧೀರಜ್.

**ಗಂಗೋಲಿ** : - ತುಂಬಾ ಒಳ್ಳೇದು. ಬಹಳ ಸುಂದರವಾಗಿದೆ. ನಿಮ್ಮನ್ನು ನೋಡಿದರೆ ನೀವು ಪ್ರಗತಿಶೀಲರು ಅಂತ ಕಾಣುತ್ತೆ.

**ಸಚ್ಚಿತ್** : - **(ಅವನನ್ನು ತಡೆಯುತ್ತಾ)** ನಾವು ಹೇಳೋದು ಏನಂದ್ರೇ, ತಾವೂ ಸಹ ನಾವು ಮಾಡುತ್ತಿರುವ ಕೆಲಸದಲ್ಲಿ ನಿಮ್ಮ ಅವಶ್ಯಕತೆ ಇದೆ. ತಮ್ಮಂಥ ಸ್ತ್ರೀಯರು ಬಂದು ..........

**ತಾಯಿ** : - ಕಲ್ಯಾಣಿ. ದೇಶ ಕಲ್ಯಾಣಕೋಸ್ಕರ ದುಡಿಯ ಬೇಕೆಂದು ಅವರ ತಂದೆಗೆ ತುಂಬಾ ಆಸೆ ಇತ್ತು.

**ಸಚ್ಚಿತ್** : - ಮಿಸ್. ಕಲ್ಯಾಣಿಯವರೇ ನೀವು ನಮ್ಮ ಜೊತೆ ಸೇರಿಕೊಂಡು ಇಂತಹ ಕಾರ್ಯಕ್ಕೆ ಚಂದಾ ಎತ್ತುವುದಾದರೆ ತುಂಬಾ ಅನುಕೂಲವಾಗುತ್ತೆ.

**ಸುವ್ರತ್** : - ನಿಮ್ಮಂಥಹ ಅನೇಕ ತರುಣಿಯರು ದೇಶದ ನಾನಾ ಭಾಗಗಳಿಂದ ಬಂದು ನಮಗೆ ನೆರವು ನೀಡುತ್ತಿದ್ದಾರೆ.

**ಕಲ್ಯಾಣಿ** : - ನೋಡಿ. ನನ್ನ ತಾಯಿ ಅಂಗ ವಿಕಲರು. ಇನ್ನು ನನ್ನ ತಮ್ಮ ಚಿಕ್ಕ ಹುಡುಗ. ಇವರಿಗಾಗಿ ನನ್ನ ಕರ್ತವ್ಯ ಇರೋದ್ರಿಂದ ನಾನು ಇನ್ನೇನೂ ಮಾಡುವಂತಿಲ್ಲ.

**ಸಚ್ಚಿತ್** : - ಓಹ್! ನೀವು ಅದಕ್ಕಾಗಿ ಯೋಚನೆ ಮಾಡಬೇಡಿ. ನಿಮ್ಮ ತಾಯಿಯವರಿಗೆ ಬೇರೆ ವ್ಯವಸ್ಥೆ ಮಾಡುತ್ತೇವೆ ಮತ್ತು ನಿಮ್ಮ ತಮ್ಮನನ್ನು ಬಾಲಗಂಜ್‌ನ ಸರಕಾರಿ ಸ್ಕೂಲಿಗೆ ಸೇರಿಸುತ್ತೇವೆ.

**ತಾಯಿ** : - ಅದರಲ್ಲಿ ತಪ್ಪೇನಿದೆ ಮಗಳೇ?

**ಗಂಗೋಲಿ** : - ಮಿಸ್. ಕಲ್ಯಾಣಿಯವರೇ. ನಿಮ್ಗೂ ಸೆಕ್ರೆಟರಿಯೇಟ್‌ನಲ್ಲಿ ಕೆಲಸ ಕೊಡಿಸುತ್ತೇವೆ. ಸುವ್ರತನಿಗೆ ಅಲ್ಲಿ ಎಲ್ಲಾರೂ ಪರಿಚಯವಿದ್ದಾರೆ.

**ಸುವ್ರತ್** : - ಅದಕ್ಕೇನಂತೇ. Rehabilitation ಸೆಕ್ಷನ್‌ನಲ್ಲಿ ಬಾಂಗ್ಲಾ ನಿರಾಶ್ರಿತರಿಗಾಗಿ ಕಾದಿಟ್ಟಿರುವ ಕೆಲಸಗಳಲ್ಲಿ ಒಂದನ್ನು ಕೊಡಿಸೋ ವ್ಯವಸ್ಥೆ ಮಾಡಿದರಾಯಿತು. ಮಿ. ಬೇನಿ ವಿಶ್ವಾಸ್‌ಗೆ ಒಂದು ಮಾತು ಹೇಳಿದರೆ ಸಾಕು.

**ತಾಯಿ** : - ಎಂಥಾ ಒಳ್ಳೇಯ ಜನ ಕಲ್ಯಾಣಿ.

**ಕಲ್ಯಾಣಿ** : - ಅಮ್ಮಾ, ಗುರ್ತು ಪರಿಚಯ ಇಲ್ಲದೋರ ಜೊತೇಲಿ .........

**ತಾಯಿ** : - ಏನೋ. ಇಂಥಾ ಒಳ್ಳೇ ಜನಗಳ ಜೊತೆ ಭೇಟಿ ಆಗಿರುವುದು ನಮ್ಮ ಪುಣ್ಯ

**(ರಂಗ ಮಂದಿರ ಮತ್ತೆ ಕತ್ತಲಿನಿಂದ ತುಂಬುತ್ತದೆ. ಬೆಳಕು ಬಂದಾಗ ಕಲ್ಯಾಣಿ ಮತ್ತೆ ನ್ಯಾಯಾಲಯದ ಕಟಕಟೆಯಲ್ಲಿ ನಿಂತಿರುತ್ತಾಳೆ)**

**ಕಲ್ಯಾಣಿ** : - ಅಂದು ನಾನು ಅವರ ಜೊತೆ ಹೊರಟೆ. ಕಾರುಗಳಲ್ಲಿ ಓಡಾಡಿಸಿದರು. ದೊಡ್ಡ ದೊಡ್ಡ ಹೋಟೆಲಿಗೆ ಕರೆದೊಯ್ದರು. ಮತ್ತೆ ಸಂಜೆಯಾಗುತ್ತಾ ಬಂದಂತೆ ನಾನು ವಾಪಸ್ಸು ಹೋಗಲು ಆತುರ ಪಟ್ಟೆ. ಆಗ ಸುವ್ರತ ಯಾರೋ ಬನರಸ್ ದಾಸ್ ಎಂಬ ದೊಡ್ಡ ಸಾಹುಕಾರರು ಇದ್ದಾರೆ ಅವರನ್ನು ನೋಡಿ ಹೋಗೋಣವೆಂದ. **(ಬೆವರು ಒರೆಸಿಕೊಳ್ಳುತ್ತಾಳೆ)**

**ಜಡ್ಜ್** : - ನೀವು ತುಂಬಾ ಸುಸ್ತಾಗಿದ್ದೀರಾ.

**ಕಲ್ಯಾಣಿ** : - ಇಲ್ಲ, ಇಲ್ಲ, ಅದಾದ ಮೇಲೆ ಪಟ್ಟಣದಿಂದ ಬಹುದೂರ ಇರುವ ಭವ್ಯವಾದ ಬಂಗಲೆ ಬಳಿ ಕರೆದೊಯ್ದರು. ವಿಶಾಲವಾದ ಡ್ರಾಯಿಂಗ್ ರೂಮಿನಲ್ಲಿ ನನ್ನನ್ನು ಕೂರಿಸಿ ಈಗ ಬರ್ತೀವಿ ಅಂತ ಹೇಳಿ ಹೋದರು. ಅರ್ಧ ಗಂಟೆ ಕಾದ ಮೇಲೆ ನನ್ನ ಮನಸ್ಸಿನಲ್ಲಿ ಕೆಟ್ಟ ಯೋಚನೆ ಶುರುವಾಯ್ತು ಮತ್ತೇ ........

**(ಕತ್ತಲಾಗುತ್ತದೆ. ಬೆಳಕು ಬಂದಾಗ ವಿಶಾಲವಾದ ಅಲಂಕರಿಸಿದ ಡ್ರಾಯಿಂಗ್ ರೂಮ್. ಕುರ್ಚಿಯ ಮೇಲೆ ಭಯಾತುರಳಾಗಿ ಕಲ್ಯಾಣಿ ಕೂತಿದ್ದಾಳೆ. ಬಾಗಿಲಿನಿಂದ ಸಚ್ಚಿತ್, ಸುವ್ರತ್ ಮತ್ತು ಗಂಗೋಲಿಯ ಜೊತೆ ಮತ್ತಿಬ್ಬರು ಒಳ್ಳೆ ಜುಬ್ಬ, ಪಂಚೆಗಳಿಂದ, ಬೀಡ, ಬಾಯಲ್ಲಿ ಸಿಗರೇಟು, ಪ್ರವೇಶಿಸುತ್ತಾರೆ)**

**ಸುವ್ರತ್** : - ನೋಡಿ ಸೇಠ್‌ಜೀ. ಬರೇ ಇಪ್ಪತ್ತು ವಯಸ್ಸು

**ಗಂಗೋಲಿ** : - ಗುಲಾಬಿ ಮೊಗ್ಗು ಇದ್ದ ಹಾಗೆ ಇದ್ದಾಳೆ.

**ಸಚ್ಚಿತ್** : - ಸೇಠ್‌ಜೀ. ಒಂದು ಮಾತು. ನೀವು ಕಲ್ಯಾಣ ಸಮಿತಿಗೆ ........

**ಸೇಠ್‌ಜೀ** : - ಎಷ್ಟು ಬೇಕೋ ಅಷ್ಟು ತಗೋ.

**ಕಲ್ಯಾಣಿ** : - **(ಹೆದರಿಕೆಯಿಂದ)** ಸಚ್ಚಿತ್ ಬಾಬು ಬಹಳ ವೇಳೆಯಾಗಿದೆ. ಮನೆಯಲ್ಲಿ ಅಮ್ಮ ಮತ್ತು ತಮ್ಮ ಕಾಯುತ್ತಿರುತ್ತಾರೆ.

**ಸಚ್ಚಿತ್** : - ಹೌದು. ಹೌದು ಮಿಸ್. ಮಜುಂದಾರ್. ಇಲ್ಲಿನ ಕೆಲಸ ಮುಗಿದ ತಕ್ಷಣ ಹೊರಟು ಬಿಡೋಣ.

**ಕಲ್ಯಾಣಿ** : - ಇನ್ನು. ಇಲ್ಲೇನು ಕೆಲಸ.

**ಸೇಠ್‌ಜೀ** : - ಇದು ನಿನ್ನ ಮನೆಯಂದೇ ತಿಳಿದಿಕೋ. ನಾನು ಮತ್ತು ಇವರೆಲ್ಲಾ ನಿನ್ನ ಚರಣದಾಸರು.

**ಸಚ್ಚಿತ್** : - ಅಷ್ಟೇ. ಮೈ ಡಿಯರ್ ಕಲ್ಯಾಣಿ.

**ಕಲ್ಯಾಣಿ** : - ನಿಮ್ಮಂಥ ಸಭ್ಯರು ಮಾತನಾಡುವ ಲಕ್ಷಣವಲ್ಲ. ಇದು.

**ಗಂಗೋಲಿ** : - ಸಭ್ಯ ಸಮಾಜವಂತೂ ಇಲ್ಲಿಂದ ಬಹಳ ದೂರ ಇದೆ.

**(ಕಲ್ಯಾಣಿ ಹತ್ತಿರ ಬರುತ್ತಾನೆ)**

**ಕಲ್ಯಾಣಿ** : - ದೂರ ಇರು. ಇಲ್ಲದಿದ್ರೆ ನಾನು ಕಿರುಚ್ಕೊತೀನಿ.

**ಸುವ್ರತ್** : - ಇದು ಕಾಡು. ಹುಡುಗಿ. ಕಾಡು. ಡೊಂಟ್ ಮೇಕ್ ಎ ಸೀನ್. ಬಾ. ಬಿಸಿನೆಸ್

ತರ ಮಾತಾಡು. ಸೇಠ್‌ಜೀ ಅಂತೂ ತುಂಬಾ ಉದಾರಿಗಳು.

**ಕಲ್ಯಾಣಿ** : - ಹಲ್ಲು ಹಿಡಿದು ಮಾತಾಡಿ.

**(ಅವರುಗಳು ಹತ್ತಿರ ಬರುತ್ತಿದ್ದಂತೆ ಓಡುವುದಕ್ಕೆ ಪ್ರಯತ್ನಿಸುತ್ತಾಳೆ. ಆದರೆ ಬಾಗಿಲುಗಳ ಬಳಿ ಅವರು ಬಂದಿರುತ್ತಾರೆ. ಕಲ್ಯಾಣಿ ಚೀತ್ಕರಿಸುತ್ತಾಳೆ. ಕತ್ತಲಾಗುತ್ತದೆ. ದೊಪ್ಪೆಂದು ಬಿದ್ದ ಶಬ್ದ. ಸಂಗೀತ ಜೋರಾಗುತ್ತದೆ.)**

**(ಮತ್ತೆ ಬೆಳಕಾದಾಗ ಮುಂಚಿನಂತೆ ನ್ಯಾಯಾಲಯದ ದೃಶ್ಯ)**

**ಕಲ್ಯಾಣಿ** : - ಮುಂದೆ ನನಗೆ ಎಚ್ಚರವಾದಾಗ ನನ್ನ ತಲೆ ಸಿಡಿಯುತ್ತಿತ್ತು. ದೇಹ ಮತ್ತು ಮನಸ್ಸು ಅದಕ್ಕಿಂತ ಹೆಚ್ಚಾಗಿ ಆತ್ಮಕ್ಕೆ ಪೆಟ್ಟಾಗಿತ್ತು. ನನ್ನನ್ನು ಮೂರ್ಛಾವಸ್ಥೆಯಲ್ಲಿ ರಾತ್ರೋರಾತ್ರಿ ಗೊತ್ತಿಲ್ಲದ ಸ್ಥಳದಲ್ಲಿ ಎಸೆದಿದ್ದರು. ಮೇಲೆದ್ದು ಎರಡು ಹೆಜ್ಜೆ ಇಡುವಷ್ಟರಲ್ಲಿ ಮತ್ತೆ ತಲೆ ತಿರುಗಿ ಬಿದ್ದು ಬಿಟ್ಟೆ. ಎಚ್ಚರವಾದಾಗ ಆಸ್ಪತ್ರೆಯ ಜನರಲ್ ವಾರ್ಡ್‌ನಲ್ಲಿದ್ದೆ. ನನ್ನ ಆರೋಗ್ಯ ಸುಧಾರಿಸಿದ ಮೇಲೆ ಸರಕಾರದ ಕಡೆಯಿಂದ ಬಾವೂ ಬಜಾರಿನ ನಿರ್ಮಲ್ ಲೋಹಿಯಾ ರಸ್ತೆಯಲ್ಲಿ ಆಶ್ರಯ ಸಿಕ್ಕಿತು.

**ಜಡ್ಜ್** : - ಅಂದರೇ ಆ ಘಟನೆ ಆದ ಎರಡು ತಿಂಗಳ ಮೇಲೆ ನೀವು ಆಸ್ಪತ್ರೆಯಿಂದ ಹೊರಗೆ ಬಂದಿರಿ. ಹೌದಾ?

**ಕಲ್ಯಾಣಿ**:- ಹೌದು. ಮತ್ತೆ ಹೋದ ಶನಿವಾರದ ಘಟನೆ..........

**(ಕತ್ತಲೆ ಆಗುತ್ತದೆ. ಕಲ್ಯಾಣಿ ಓದುತ್ತಾ ಕುಳಿತಿದ್ದಾಳೆ. ಬಾಗಿಲು ತಟ್ಟಿದ ಶಬ್ದ. ಕಲ್ಯಾಣಿ ಬಾಗಿಲು ತೆರೆಯುತ್ತಾಳೆ. ಪೋಲಿಸ್ ವೇಶ ಧರಿಸಿದ ಅಧಿಕಾರಿಯೊಬ್ಬನ ಪ್ರವೇಶ)**

**ಕಲ್ಯಾಣಿ** : - ಯಾರು ನೀವು? ಇಷ್ಟು ಹೊತ್ತಿನಲ್ಲಿ ಇಲ್ಲೇನು ಕೆಲಸ?

**ಯುವಕ** : - ಯಾಕೆ? ನನ್ನ ಗುರ್ತು ಸಿಗಲಿಲ್ಲವೇನು?

**ಕಲ್ಯಾಣಿ** : - ಇಲ್ಲ. ನೀವು ಯಾರೋ ಗೊತ್ತಿಲ್ಲ.

**ಯುವಕ** : - ಸರಿಯಾಗಿ ನೋಡು. ಈಗ್ಗೆ ಮೂರು ತಿಂಗಳ ಹಿಂದೆ ನಾವು ಸಿಮ್ಲಾ ಸ್ಟೇಷನ್‌ನಲ್ಲಿ ಭೇಟಿಯಾಗಿದ್ದೆವು. ಜ್ಞಾಪಕವಿದೆಯೇ?

**ಕಲ್ಯಾಣಿ**:- ಯಾರು?...........ಓಹ್! ಸಚ್ಚಿತ್. ಸಚ್ಚಿತ್ ರಾಯ್! ಈ ವೇಶದಲ್ಲಿ ..........

**ಯುವಕ** : - ನಿನ್ನ ಹತ್ತಿರ ಬರೋಕ್ಕೆ ಇದಕ್ಕಿಂತ ಸುಲಭವಾದ ಮಾರ್ಗ ಇನ್ನಾವುದೂ ತೋಚಲಿಲ್ಲ. ನಿನಗೆ ಇವನ್ನೆಲ್ಲಾ ಕಂಡು ಹೆದರಿಕೆ ಆಗೋದಿದ್ರೆ ನೋಡು ಇವನ್ನೆಲ್ಲಾ ಬಿಚ್ಚಿ ಒಂದು ಕಡೆ ಇಡ್ತೀನಿ.

**(ಬೆಲ್ಟ್, ರಿವಲ್ವಾರ್ ಎಲ್ಲಾ ಬಿಚ್ಚಿ ಸೋಫಾದ ಮೇಲೆ ಇಡುತ್ತಾನೆ)**

**ಕಲ್ಯಾಣಿ**:- ಛೆ. ಪಾಪಿ. ಇಲ್ಲಿಗ್ಯಾಕೆ ಬಂದಿದ್ದೀಯಾ? ಹೊರಟು ಹೋಗು. ಪಾಪಿ... ನಾಯಿ

**ಸಚ್ಚಿತ್** : - ನಾನು ನಿನ್ನನ್ನು ನಿನ್ನ ತಾಯಿಯ ಬಳಿ ಕರೆದೊಯ್ಯಲು ಬಂದಿದ್ದೇನೆ.

**ಕಲ್ಯಾಣಿ** : - ನನಗೆ ಅವರನ್ನು ಭೇಟಿ ಮಾಡಲು ಇಷ್ಟವಿಲ್ಲ. ಈ ಜನ್ಮದಲ್ಲಿ ನಾನು ಅವರ ಮುಖವನ್ನು ನೋಡಲಾರೆ. ದಯವಿಟ್ಟು ಇಲ್ಲಿಂದ ಮೊದಲು ತೊಲಗು.

**ಸಚ್ಚಿತ್** : - ನಾನು ಆ ಸೇಠ್‌ಗಿಂತ ಕೀಳಾಗಿದ್ದೀನಾ? **(ಕಲ್ಯಾಣಿಯ ಬಳಿ ಬರುತ್ತಾನೆ)**

**ಕಲ್ಯಾಣಿ** : - ದೂರ ಹೋಗು. ಬೇಡ ಇಲ್ಲದಿದ್ದರೆ **(ಸೋಫಾ ಮೇಲಿರುವ ರಿವಲ್ವಾರ್ ಕೈಗೆ ತೆಗೆದುಕೊಳ್ಳುತ್ತಾಳೆ)**

**ಸಚ್ಚಿತ್** : - ಅರೇ, ಅದರ ತುಂಬಾ ಗುಂಡುಗಳಿವೆ. ಹುಡುಗಾಟ ಆಡಬೇಡ.

**(ಇನ್ನೂ ಹತ್ತಿರ ಬರುತ್ತಾನೆ)**

**ಕಲ್ಯಾಣಿ** : - ಬೇಡ, ಬೇಡ ............

**ಸಚ್ಚಿತ್** : - ನನ್ನನ್ನು ಹೆದರಿಸುತ್ತೀಯಾ?

**(ಮುಂದೆ ಬರುತ್ತಾನೆ. ಬೆಳಕು ಕಡಿಮೆ ಆಗುತ್ತಾ ಹೋಗುತ್ತಿದ್ದಂತೆ ಮೂರು ಬಾರಿ ಗುಂಡಿನ ಶಬ್ದ ಕೇಳಿ ಬರುತ್ತದೆ. "ಅಯ್ಯೋ, ಅಪ್ಪ" ಎಂಬ ಚೀತ್ಕಾರ, ಪೂರ್ತಿ ಕತ್ತಲಾಗುತ್ತದೆ. ಪುನಃ ಬೆಳಕು ಬಂದಾಗ ಮತ್ತೆ ನ್ಯಾಯಾಲಯದ ದೃಶ್ಯ)**

**ಕಲ್ಯಾಣಿ** : - ಹೌದು, ಹೌದು, ನಾನು ಕೊಲೆಗಡುಕಿ ಮಿ. ಸೇನ್ ನನ್ಗೆ ಶಿಕ್ಷೆ ಕೊಡಿ. ನನ್ನನ್ನು ಗಲ್ಲಿಗೇರಿಸಿ ........

**ಜಡ್ಜ್** : - ದಯವಿಟ್ಟು ಶಾಂತರಾಗಿ ಮಿಸ್. ಕಲ್ಯಾಣಿ. Honrable gentlemen of the jury ಈ ವಿಷಯದಲ್ಲಿ ನೀವೇನು ಹೇಳ ಬಯಸುತ್ತೀರ?

**(ಜ್ಯೂರಿಯ ಸದಸ್ಯರಲ್ಲಿ ಗುಸು ಗುಸು ಮಾತು)**

**ಹಿರಿಯ ಜ್ಯೂರಿ** : - ಈ ಹೆಂಗಸನ್ನು ಬಿಡುಗಡೆ ಮಾಡಬೇಕು. ಯಾಕೆಂದರೆ ಕೇವಲ ಆತ್ಮರಕ್ಷಣೆಗೋಸ್ಕರ ಖೂನಿ ಮಾಡಿದ್ದು.

**ಕಲ್ಯಾಣಿ** : - **(ಭಾವೋದ್ವೇಗದಿಂದ)** ಬಿಡುಗಡೆ? ನನಗೆ ಬಿಡುಗಡೆ? ಯಾವುದರಿಂದ? ನನಗೆ ಸಾವು ಬೇಕು. ಈ ಅಪವಿತ್ರ ಶರೀರದಲ್ಲಿ ಕಳೆದ ಎರಡು ತಿಂಗಳಿಂದ ಒಂದು ಜೀವ ಬೇರೆ ಓಡಾಡ್ತಾ ಇದೆ.

**ಎಲ್ಲಾರೂ** : - ಛಿ! ಛಿ! ಏನು ಹೇಳ್ತಿದ್ದಾಳೆ ಇವಳು?

**ಕಲ್ಯಾಣಿ** : - ಏಕೆ? ಈ ಪಾಪದ ಕೆಲಸ ನನ್ನದಲ್ಲ. ಈ ಕಳಂಕ ನನ್ನದಲ್ಲ. ಈ ಕುರುಡು ಸಮಾಜದಲ್ಲಿ ಮೃಗಗಳಂಥಾ ಜನರ ಮಧ್ಯೆ ಕಳಂಕಹೀನಳಾಗಿ ನಾನು ಏಕಾದರೂ ಬದುಕಬೇಕು? ನ್ಯಾಯಾಧೀಶರೇ ದಯವಿಟ್ಟು ನನಗೂ, ನನ್ನ ಹೊಟ್ಟೆಯಲ್ಲಿರುವ ಜೀವಕ್ಕೂ ಮರಣದಂಡನೆಯನ್ನು ಕೊಟ್ಟು ನಮ್ಮನ್ನು ನೋವುಗಳಿಂದ ಬಿಡುಗಡೆ ಮಾಡಿ.

**ಜಡ್ಜ್** : - ನ್ಯಾಯಾಲಯ ನೀವು ಆತ್ಮರಕ್ಷಣೆಗೆ ಕೊಲೆ ಮಾಡಿದ್ದು ಎಂದು ತೀರ್ಮಾನಿಸಿದೆ. ಆದ್ದರಿಂದ ನಿಮ್ಮನ್ನು ಬಿಡುಗಡೆ ಮಾಡಿದೆ.

**(ಕಲ್ಯಾಣಿ ತೂರಾಡುತ್ತಾ ಕೆಳಗಿಳಿಯುತ್ತಾಳೆ. ಯಾವುದೋ ಹಸುಗೂಸಿನ ನೋವು ತುಂಬಿದ ಧ್ವನಿಯೊಂದು ಕೇಳಿ ಬಂದಂತಾಗಿ ಸ್ತಬ್ಧಳಾಗಿ ನಿಲ್ಲುತ್ತಾಳೆ)**

**ಧ್ವನಿ** : - "ಅಮ್ಮಾ, ಅಮ್ಮಾ, ಎಲ್ಲಿಗೆ ಹೋಗ್ತಾ ಇದ್ದೀಯಾ? ನೀನು ಆತ್ಮಹತ್ಯೆ ಮಾಡಿಕೊಂಡರೆ ನನ್ನ ಗತಿಯೇನು? ನಾನು ಬದುಕ ಬೇಕಾಗಿದೆ. ನನ್ನಂಥಾ ಸಹಸ್ರಾರು ಮಕ್ಕಳು ಈ ದೇಶದಲ್ಲಿದ್ದಾರೆ. ಅವರೆಲ್ಲರಿಗೂ ಸ್ವಾಭಿಮಾನದಿಂದ ಬದುಕೋ ಅವಕಾಶ ಕೊಡಲ್ವೇನು? ಅಮ್ಮಾ ಸಮಾಧಾನ ತಂದ್ಕೋ. ನಿನ್ನ ಹೃದಯದ ನೋವುಗಳನ್ನೆಲ್ಲಾ ಹೊರಕ್ಕೆ ಹಾಕು. ಏಳಮ್ಮ"

**(ಕಲ್ಯಾಣಿ ಕಲ್ಲಿನಂತೆ ನಿಂತಿದ್ದಾಳೆ, ನಿಧಾನವಾಗಿ ಮುಖದ ಮೇಲೆ ಮುಗುಳ್ನಗೆ ತೇಲುತ್ತದೆ)**

**ಕಲ್ಯಾಣಿ** : - ಬನ್ನಿ .......... ಓ ಪುಟ್ಟ ಮಕ್ಕಳೇ, ಬನ್ನಿ, ನಿಮಗೆ ಸ್ವಾಗತ.

**(ತೆರೆ)**

# ಲೇಖಕ ಪರಿಚಯ

**ರಸಿಕಲಾಲ್ ಛೋಟಾಲಾಲ್ ಪಾರೀಖ್** (1897-1981) ವಿದ್ವಾಂಸ, ಸಾಹಿತಿ ಹಾಗೂ ಪ್ರಾಚ್ಯ ವಸ್ತು ಸಂಶೋಧಕರು. ಗಾಂಧೀಜಿ ಅವರಿಂದ ಸ್ಥಾಪಿತವಾದ ಗುಜರಾತ್ ವಿದ್ಯಾಪೀಠದಲ್ಲಿ ಮೊದಲು ದಶಕದ ಅಧ್ಯಾಪಕರೂ ಮತ್ತು '**ಪುರಾತತ್ವ**' ಎಂಬ ಪತ್ರಿಕೆಯ ಸಂಪಾದಕರೂ ಆಗಿ ಸೇವೆ ಸಲ್ಲಿಸಿದರು. ಗುಜರಾತ್ ವಿದ್ಯಾ ಸಭಾದ ಭೋ. ಜೆ. ವಿದ್ಯಾಭವನದ ಅಧ್ಯಕ್ಷರು ಹಾಗೂ ಭಾರತೀಯ ಸಂಸ್ಕೃತಿಯಲ್ಲಿ ಸ್ನಾತಕೋತ್ತರ ಪ್ರಾಧ್ಯಾಪಕರಾಗಿದ್ದರು. ಎರಡು ವರ್ಷಗಳವರೆಗೆ ಗುಜರಾತಿ ಪರಿಷತ್ತಿನ ಪ್ರಮುಖರಾಗಿದ್ದರು. ನಾಟ್ಯಶಾಸ್ತ್ರದ ಬಗ್ಗೆ ಸಾಕಷ್ಟು ಜ್ಞಾನ ಹಾಗೂ ರಂಗಮಂಚ ಮತ್ತು ನಾಟಕಗಳ ಬಗ್ಗೆ ಹೆಚ್ಚಿನ ಶ್ರದ್ಧೆ ಉಳ್ಳವರಾಗಿದ್ದರು. ಅವರ '**ಶರ್ವಿಳಕ**' ಎಂಬ ನಾಟಕಕ್ಕೆ ಸಾಹಿತ್ಯ ಅಕಾಡೆಮಿ ಪುರಸ್ಕಾರ ದೊರೆತಿದೆ. ಈ ಸಂಗ್ರಹದಲ್ಲಿನ ಅವರ ನಾಟಕ '**ಮೈನಾ ಗೂಜರೀ**' (**ಮೈನಾಳ ಗೌಳಿತಿ**) ಅಹಮದಾಬಾದ್, ಮುಂಬೈ, ದೆಹಲಿ ಮುಂತಾದ ಅನೇಕ ನಗರಗಳಲ್ಲಿ ಯಶಸ್ವಿಯಾಗಿ ಅಭಿನಯಿಸಲ್ಪಟ್ಟಿದೆ. ಇವರ ಒಂದು ಕಥಾ ಸಂಗ್ರಹ, ವಿಮರ್ಶೆಗಳ ಒಂದು ಸಂಗ್ರಹ ಹಾಗೂ ಒಂದು ಕಾವ್ಯ ಸಂಗ್ರಹ ಪ್ರಕಟವಾಗಿವೆ. ದಿ|| ರಾಮನಾರಾಯಣರವರೊಡನೆ ಅನುವಾದ ಮಾಡಿದ '**ಕಾವ್ಯಪ್ರಕಾಶ**', '**ವೈದಿಕ ಪಾಠಾವಳಿ**'ಯ ಸಂಪಾದನೆ, '**ಆನಂದ ಮೀಮಾಂಸೆ**' ಮತ್ತು '**ಗುಜರಾತ್ ಕೀ ರಾಜಧಾನಿಯಾ**' ಎಂಬ ವಿಮರ್ಶಾತ್ಮಕ ಗ್ರಂಥಗಳು ಇವರ ವಿದ್ವತ್ತನ್ನು ಪ್ರತಿಬಿಂಬಿಸುತ್ತವೆ.

**ಚಂದ್ರವದನ ಮೆಹತಾ** (1901-1990) ನಾಟಕಕಾರ ಹಾಗೂ ಕವಿಗಳಾದ ಇವರು ಯೌವನದಲ್ಲಿ ಒಳ್ಳೆಯ ನಟರೂ, ದಿಗ್ದರ್ಶಕರೂ ಆಗಿದ್ದರು. ರಂಗಮಂಚದ ಹಾಗೂ ಸಾಹಿತ್ಯದ ನಾಟಕಗಳ ನಡುವಣ ಇರುವ ಅಂತರವನ್ನು ಕಡಿಮೆ ಮಾಡುವುದರಲ್ಲಿ ಇವರ ಪಾತ್ರ ಮಹತ್ವದ್ದಾದುದು. ಅನೇಕ ವರ್ಷಗಳವರೆಗೆ ಶಿಕ್ಷಕರೂ ಆಕಾಶವಾಣಿಯ ಅಧಿಕಾರಿಗಳೂ ಆಗಿದ್ದರು. ಬರೋಡಾದಲ್ಲಿನ ಮಹಾರಾಜ ಸಯ್ಯಾಜಿರಾವ್ ವಿಶ್ವವಿದ್ಯಾಲಯದ ನಾಟ್ಯ ಸಂಗೀತ ಮಹಾ ವಿದ್ಯಾಲಯದಲ್ಲಿ ನಾಟ್ಯ ಶಾಸ್ತ್ರದ ಅತಿಥಿ ಪ್ರಾಚಾರ್ಯರಾಗಿದ್ದರು. ನಾಟಕ ಮತ್ತು ರಂಗಮಂಚದ ಬಗ್ಗೆ ಆಳವಾದ ಅಧ್ಯಯನ ಕೈಗೊಂಡು ಯೂರೋಪ್ ಮತ್ತು ಅಮೇರಿಕಾದ ರಂಗಮಂದಿರಗಳ ಪರಿಷತ್ತುಗಳಲ್ಲಿ ಭಾಗವಹಿಸಿ, ಪಾಶ್ಚಾತ್ಯ ರಂಗಮಂಚದ ಬಗ್ಗೆ ಬಹಳಷ್ಟು ತಿಳಿದುಕೊಂಡರು. ಇವರು ಐತಿಹಾಸಿಕ ನಾಟಕ, ಪ್ರಹಸನ, ಟ್ರಾಜೆಡಿ, ಮಕ್ಕಳ ನಾಟಕ, ಏಕಾಂಕ, ಯಥಾರ್ಥವಾದಿ ನಾಟಕ,

ಕಾಲ್ಪನಿಕ ನಾಟಕ, ರೇಡಿಯೋ ನಾಟಕ ಮುಂತಾದ ಪ್ರಕಾರಗಳಲ್ಲಿ ಕೃತಿ ರಚನೆ ಮಾಡಿದ್ದಾರೆ. ಇವರ ಸುಮಾರು ಇಪ್ಪತ್ತು ನಾಟಕಗಳ ಪೈಕಿ **ಆಗ್‌ಗಾಡೀ, ಸಾಗಾ ಬಾಬಾ, ರಮಕಂಡಾನಿ ದುಕಾನ್, ಸೀತಾ, ಪಾಂಜರಾ ಪೋಳ್, ಧರಾ ಗುರ್ಜರೀ** ಪ್ರಸಿದ್ಧ ನಾಟಕಗಳು.

**ಯಶವಂತ ಪಂಡ್ಯಾ** (1906-1955) ಎಂ.ಎ ಪದವಿಧಾರರಾದ ಶ್ರೀಯುತರು ಒಂದು ದಶಕದ ಕಾಲ ಸಾಹಿತ್ಯ ಸೃಷ್ಟಿಯ ಕ್ಷೇತ್ರದಲ್ಲಿ ನಾಟ್ಯಕಲೆಯ ಉಪಾಸಕರಾಗಿದ್ದರು. ವಿಮಾ ಉದ್ಯಮ ಹಾಗೂ, ದೆಹಲಿ ಪ್ರವಾಸದಿಂದ ಇವರ ಲೇಖನ ಪ್ರವೃತ್ತಿ ಕುಂಠಿತವಾಯಿತು. ಇದಕ್ಕೆ ಮೊದಲು ಇವರು ಏಳು ಪುಸ್ತಕಗಳನ್ನು ಬರೆದಿದ್ದರು. ಇವುಗಳಲ್ಲಿ ಮಕ್ಕಳ ನಾಟಕ, ಏಕಾಂಕಗಳ ಮೂರು ಸಂಗ್ರಹಗಳು ಸೇರಿವೆ. **ಪಡ್‌ದಾ ಪಾವಳ್ ಮತ್ತು ಅ.ಸೌ. ಕುಮಾರಿ ಪುನರ್ ಮುದ್ರಣವಾಗಿವೆ. ಹರಟೆ, ಲಘು ನಾಟಕ, ಹಾಗೂ ಏಕಾಂಕಗಳನ್ನು ಬರೆಯುವುದರಲ್ಲಿ ಶ್ರೀ ಪಾಂಡ್ಯಾ ಅಗ್ರಗಾಮಿಗಳಾಗಿದ್ದರು. ವೀಣಾ ಮತ್ತು ಶರದ್ ಎಂಬ ವಾರ್ಷಿಕ ಪತ್ರಿಕೆಗಳ ಸಂಪಾದನೆ ಹಾಗೂ ಪ್ರಕಟಣೆಯನ್ನು ಕೈಗೊಂಡಿದ್ದರು. ತಮ್ಮ ಮೃದು ಸ್ವಭಾವದಿಂದಾಗಿ ಇವರು ದೆಹಲಿಯಲ್ಲಿದ್ದಾಗ ಗುಜರಾತಿನ ಸಾಂಸ್ಕೃತಿಕ ರಾಯಭಾರಿಗಳಾಗಿದ್ದರು.**

**ಬಟುಭಾಯಿ ಉಮರ್‌ವಾಡಿಯಾ** (1899-1950) ವಿದ್ಯಾರ್ಥಿದೆಶೆಯಲ್ಲೇ ಇವರ ಮನಸ್ಸಿನಲ್ಲಿ ಸಾಹಿತ್ಯ ಪ್ರೇಮದ ಬೀಜಾರೋಪಣೆಯಾಗಿತ್ತು. ಪಧವೀಧರರಾಗುತ್ತಿದ್ದಂತೆಯೇ **'ಚೇತನ'** ಮತ್ತು **'ವಿನೋದ'** ಎಂಬ ಎರಡು ಮಾಸ ಪತ್ರಿಕೆಗಳ ಹಾಗೂ **'ಸುದರ್ಶನ'** ಎಂಬ ವಾರ ಪತ್ರಿಕೆಯನ್ನು ಪ್ರಾರಂಭಿಸುವ ಕಾರ್ಯದಲ್ಲಿ ತೊಡಗಿದ್ದರು. ಸರಕಾರಿ ನೌಕರಿ, ವಕೀಲವೃತ್ತಿ, ಹಾಗೂ ಅಹಮದಾಬಾದ್ ಮಿಲ್ ಮಾಲೀಕರ ಸಂಘದ ಕಾರ್ಯದರ್ಶಿಯಾಗಿ ಪಡೆದ ಜೀವನಾನುಭವಗಳು ಮತ್ತು ಸತತವಾಗಿ ಬದಲಾಗುತ್ತಿದ್ದ ವೃತ್ತಿಗಳು ಇವರಲ್ಲಿ ಸಾಹಿತ್ಯ ಸೃಷ್ಟಿಯ ಬಗ್ಗೆ ಔದಾಸೀನ್ಯ ತಾಳುವಂತೆ ಮಾಡಿದುವು. ತಾತ್ಕಾಲೀನ ವಿಶಿಷ್ಟ ವ್ಯಕ್ತಿಗಳ ಸರಸತೆ ಹಾಗೂ ಪ್ರಗಲತೆಗಳಿಂದ ಕೂಡಿದ ರೇಖಾ ಚಿತ್ರಗಳು ಮತ್ತು ರಸಾತ್ಮಕ ಪತ್ರಶೈಲಿಯ ಸಾಹಿತ್ಯ ವಿವೇಚನೆಯಲ್ಲದೆ, ಕಥೆ ಹಾಗೂ ನಾಟಕ ಸೃಷ್ಟಿಯಲ್ಲಿ ಹೊಸತನವನ್ನು ತರುವ ಸುಂದರ ಪ್ರತಿಭೆಯನ್ನು ತೋರಿದರು. ಇವರ ಇಬ್ಸನ್ ಮಾದರಿಯ ಸಮಸ್ಯಾತ್ಮಕ ಗದ್ಯನಾಟಕಗಳು ಗುಜರಾತಿಯ ನಾಟಕ ಹಾಗೂ ಏಕಾಂಕಗಳ ಸ್ಪಷ್ಟ ಬೆಳಣಿಗೆಯನ್ನು ಸೂಚಿಸುತ್ತವೆ. **"ಮತ್ಸ್ಯಗಂಧಾ ಅನೆ ಗಾಂಗೇಯ್ ಅನೆ ಬೀಜಾನಾಟಕೋ, ಮೂಲಾದೇವಿ ಅನೆ ಬೀಜಾನಾಟಕೋ ಮತ್ತು ಶಕುಂತಲಾ ರಸದರ್ಶನ"** ಇವರ ಮುಖ್ಯ ನಾಟಕಗಳು.

**ಉಮಾಶಂಕರ ಜೋಷಿ** (1911-1988) ಆಧುನಿಕ ಗುಜರಾತಿನ ಅಗ್ರಗಣ್ಯ ಕವಿಗಳು ಹಾಗೂ ವಿದ್ವಾಂಸರು. ಕಥೆ, ನಾಟಕ, ಪ್ರಬಂಧ ಮತ್ತು ವಿಮರ್ಶೆಯ ಕ್ಷೇತ್ರದಲ್ಲಿ ಇವರದೇ ಪ್ರಮುಖ ಸ್ಥಾನ. ಮೂರು ದಶಕಗಳಿಗೂ ಮೇಲ್ಪಟ್ಟು ಗುಜರಾತಿ ಸಾಹಿತ್ಯದ ಪ್ರಾಧ್ಯಾಪಕರು. ಗುಜರಾತ್ ವಿಶ್ವ ವಿದ್ಯಾನಿಲಯ ಹಾಗೂ ವಿಶ್ವಭಾರತಿಯ ಉಪಕುಲಪತಿಗಳಾಗಿದ್ದರು. **ಸಂಸ್ಕೃತಿ** ಎಂಬ ಮಾಸ ಪತ್ರಿಕೆಯ ಸಂಪಾದಕರೂ ಆಗಿದ್ದರು. ಎರಡು ವರ್ಷಗಳ ಕಾಲ ಗುಜರಾತ್ ಸಾಹಿತ್ಯ ಪರಿಷತ್ತಿನ ಪ್ರಧಾನರಾಗಿದ್ದರು. ಸಂಸತ್ತಿನ ರಾಜ್ಯಸಭೆಗೆ ರಾಷ್ಟ್ರಪತಿಗಳಿಂದ ನಾಮಕರಣಗೊಂಡ ಸದಸ್ಯರಾಗಿದ್ದರು. ಇವರ ಕಾವ್ಯ ಸಂಗ್ರಹ **'ನಿಶೀಥಾ'**ಕ್ಕೆ ಭಾರತೀಯ ಜ್ಞಾನ ಪೀಠದ ಪುರಸ್ಕಾರ ದೊರೆತಿದೆ. ಇವರು ಹತ್ತು ಕಾವ್ಯ ಕೃತಿಗಳು, ಎರಡು ಕಥಾ

ಸಂಗ್ರಹಗಳು, ಒಂದು ಕಾದಂಬರಿ, ಐದು ವಿಮರ್ಶಾತ್ಮಕ ಲೇಖನಗಳ ಸಂಗ್ರಹ. **'ಶಾಕುಂತಲ' ಹಾಗೂ ಉತ್ತರ ರಾಮ ಚರಿತದ ಅನುವಾದ, ಎರಡು ಏಕಾಂಕ ಸಂಗ್ರಹಗಳು, ಒಂದು ಪ್ರಬಂಧ ಸಂಗ್ರಹ ಮತ್ತು ಪದ್ಯ ನಾಟಕದಲ್ಲಿ ಎರಡು ಪ್ರಯೋಗಾತ್ಮಕ ಸಂಗ್ರಹಗಳನ್ನು ಸಾಹಿತ್ಯಕ್ಕೆ ಕೊಟ್ಟಿದ್ದಾರೆ. 'ಸಾಪನಾ ಮಾರಾ'** ಮತ್ತು **'ಶಹೀದ್'** ಎಂಬುವು ಇವರ ಏಕಾಂಕ ನಾಟಕಗಳ ಸಂಗ್ರಹಗಳು. ಮೊದಲನೆಯ ಸಂಗ್ರಹವು ವಾಸ್ತವವಾದಿ ಏಕಾಂಕ ಕಲೆಯ ದೃಷ್ಟಿಯಿಂದ ಲೇಖಕರನ್ನು ಪ್ರಾದೇಶಿಕ ಭಾಷೆಯ ಪ್ರಮುಖ ಸಾಹಿತಿಯನ್ನಾಗಿ ಮಾಡುತ್ತದೆ.

**ದುರ್ಗೇಶ ಶುಕ್ಲ** (1911-)ಗುಜರಾತಿ ಸಾಹಿತ್ಯದಲ್ಲಿ ಎಂ.ಎ ಮಾಡಿದ್ದಾರೆ. ಕೆಲವು ವರ್ಷಗಳ ವರೆಗೂ ಮಾಧ್ಯಮಿಕ ವಿದ್ಯಾಲಯದಲ್ಲಿ ಶಿಕ್ಷಕರಾಗಿದ್ದರು. ಈಗ ಇವರು ಲೇಖನಿಯಿಂದ ಜೀವಿಸುವ ಸಾಹಿತಿ. ಒಂದು ಕಾದಂಬರಿ, ಮೂರು ಕಥಾ ಸಂಗ್ರಹ ಮತ್ತು ಎರಡು ಕಾವ್ಯಕೃತಿಗಳನ್ನು ರಚಿಸಿರುವ ಇವರ **ನಾಟ್ಯ ಸಂಗ್ರಹ ಒಂದು ಅಸಾಧಾರಣ ಕೃತಿ. ಪೃಥ್ವೀನಾ ಆಯು, ಹೈಯೆಭಾರ್, ಉತ್ಸವಿಕಾ, ಉಲ್ಲಸಿಕಾ ಮುಂತಾದವು ಈ ಸಂಗ್ರಹದಲ್ಲಿನ ಮುಖ್ಯ ನಾಟಕಗಳು. ಇವರು ವಿದೇಶೀ ಭಾಷೆಗಳ ನಾಟಕಗಳನ್ನು ಅನುವಾದಿಸಿದ್ದಾರೆ. ಶಾಲಾ ಕಾಲೇಜಿನ ವಿದ್ಯಾರ್ಥಿಗಳಿಗೆ ಇವರ ನಾಟಕಗಳು ತುಂಬಾ ಅಚ್ಚುಮೆಚ್ಚು.**

**ಚುನೀಲಾಲ್ ಮಡಿಯಾ** (1922 - 1968) ವಾಣಿಜ್ಯ ಶಾಸ್ತ್ರದಲ್ಲಿ ಪದವೀಧರರಾದರೂ ಪತ್ರಿಕೋದ್ಯಮವನ್ನು ಮೆಚ್ಚಿಕೊಂಡರು. ಕೆಲವು ವರ್ಷಗಳ ಕಾಲ ಯುನೈಟೆಡ್ ಸ್ಟೇಟ್ಸ್ ಇನ್‌ಫರ್‌ಮೇಷನ್ ಸರ್ವಿಸ್‌ನಲ್ಲಿ ಕೆಲಸ ಮಾಡಿದ ನಂತರ, **ರುಚಿ ಎಂಬ ಮಾಸ ಪತ್ರಿಕೆಯನ್ನು ಪ್ರಾರಂಭಿಸಿದರು.ವಿದ್ಯಾರ್ಥಿ ದೆಶೆಯಿಂದಲೇ ಸಾಹಿತ್ಯ ರಚನೆಗೆ ಕೈಹಾಕಿದ ಅವರು ಮೊಟ್ಟಮೊದಲು ಘೂಘ್‌ವತಾಂಪೂರ್'** ಎಂಬ ಕಥಾ ಸಂಗ್ರಹದಿಂದ ಹೆಸರುವಾಸಿಯಾದರು. ತರುವಾಯ ಕಾದಂಬರಿ, ನಾಟಕ, ಏಕಾಂಕ, ಕವಿತೆ, ವಿಮರ್ಶೆ, ಪ್ರಬಂಧ ಮುಂತಾದ ಎಲ್ಲಾ ಸಾಹಿತ್ಯ ಪ್ರಕಾರಗಳ ಮೇಲೂ ತಮ್ಮ ಲೇಖನಿಯನ್ನು ಹರಿಯಬಿಟ್ಟರು. ಮಧ್ಯ ಸೌರಾಷ್ಟ್ರದ ಆಡು ಭಾಷೆಯಲ್ಲಿ ಕಥೆ, ಕಾದಂಬರಿ, ನಾಟಕ ಮುಂತಾದವುಗಳ ಪ್ರಯೋಗ ಹಾಗೂ ಜನಜೀವನದ ಯಥಾರ್ಥ ಚಿತ್ರಣ ಇವರ ವೈಶಿಷ್ಟ್ಯ. ಇವರು ಸುಮಾರು ಹತ್ತು ಕಥಾ ಸಂಗ್ರಹಗಳನ್ನೂ, ಹತ್ತು ಕಾದಂಬರಿಗಳನ್ನೂ ಬರೆದಿದ್ದಾರೆ. **ರಂಗದಾ, ವಿಷವಿಮೋಚನ್, ರಕ್ತ ತಿಲಕ್** ಮುಂತಾದುವು ಇವರ ಏಕಾಂಕ ಸಂಗ್ರಹಗಳು, ಇವರು ಮೂರು ಅಂಕಗಳನ್ನುಳ್ಳ ಮೂರು ನಾಟಕಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಎರಡು ಪ್ರಹಸನಗಳು.

**ಪುಷ್ಕರ ಚಂದರ್‌ವಾಕರ್** (1920-)ಎಂ.ಎ. ಮುಗಿಸಿ ಅಧ್ಯಾಪನ ವೃತ್ತಿಯನ್ನು ಕೈಗೊಂಡರು. ಈಗ ಇವರು ಸೌರಾಷ್ಟ್ರ ವಿಶ್ವವಿದ್ಯಾಲಯದಲ್ಲಿ ಜನಪದ ಸಾಹಿತ್ಯದಲ್ಲಿ ರೀಡರ್ ಆಗಿದ್ದರು. ಕಥೆ, ಕಾದಂಬರಿ ಮತ್ತು ಏಕಾಂಕಗಳನ್ನು ಬರೆದಿದ್ದಾರೆ. ಜಾನಪದ ಸಾಹಿತ್ಯದ ಸಂಶೋಧನೆ ಹಾಗೂ ಪ್ರಕಾಶನದಲ್ಲಿ ಅಭಿರುಚಿ ಇರುವುದರಿಂದ ಅನೇಕ ವರ್ಷಗಳಿಂದ ಕ್ಷೇತ್ರ ಕಾರ್ಯದಲ್ಲಿ ನಿರತರಾಗಿದ್ದಾರೆ. ಕಥಾ ಸಂಗ್ರಹ, ಕಾದಂಬರಿ ಮತ್ತು ಜನ ಸಾಹಿತ್ಯದ ಸಂಪಾದನೆ ಇವರ ಪ್ರಕಾಶಿತ ರಚನೆಗಳು. **ಪಿಯರನೋ ಪಡೋಶಿ ಮತ್ತು ಯಜ್ಞ ಇವರ ಏಕಾಂಕ ಸಂಗ್ರಹಗಳು.**

**ಪನ್ನಾಲಾಲ್ ಪಟೇಲ್** (1912-1989)ಇವರ ವಿದ್ಯಾಭ್ಯಾಸ ಮೆಟ್ರಿಕ್ ವರೆಗೂ ಸಾಗಲಿಲ್ಲ. ಆದರೂ ಸಹ ರಾಜಸ್ಥಾನದ ಈಶಾನ್ಯ ಭಾಗದ ತಮ್ಮ ಪ್ರದೇಶದ ಹಿನ್ನೆಲೆಯನ್ನೊಳಗೊಂಡ

ಗ್ರಾಮೀಣ ಕಾದಂಬರಿಗಳಿಂದ ಗುಜರಾತಿನ ಜನತೆಯನ್ನು ಮುಗ್ಧಗೊಳಿಸಿದ ಆಧುನಿಕ ಗುಜರಾತಿನ ಶಕ್ತಿ ಸಂಪನ್ನ ಸಾಹಿತಿಯಾದರು. ಇವರ **'ವಳಾ ಮಣಾ'** ಮತ್ತು **'ಮಳಿಲಾ ಜೀವ್'** (ಜನುಮದ ಜೋಡಿ) ಕಥೆಗಳು ಗುಜರಾತಿಗೆ ಮೊದಲು ಮಳೆ ಬಿದ್ದಾಗ ಮಣ್ಣಿನಿಂದ ಹೊರ ಬರುವ ಕಂಪಿನ ಅನುಭವ ಮಾಡಿಕೊಟ್ಟವು. **'ಮಾನವೀನೀ ಭವಾಯಿ'** (ಜೀವನ ಒಂದು ನಾಟಕ) ಎಂಬ ಕಥೆ ಇವರ ಪ್ರತಿನಿಧಿ ರಚನೆ. ಇವರ ವಿಶಿಷ್ಟವಾದ ಬರೆವಣಿಗೆಗೆ ರಣಜಿತ್ ರಾಯ್ ಸ್ವರ್ಣ ಪದಕ ಮತ್ತು ಭಾರತೀಯ ಜ್ಞಾನ ಪೀಠ ಪ್ರಶಸ್ತಿ ದೊರೆಯಿತು. ಅನೇಕ ಕಾದಂಬರಿಗಳು ಹಾಗೂ ಕಥಾ ಸಂಗ್ರಹಗಳ ಲೇಖಕರಾದ ಇವರು **'ಜುಮಾಯೀರಾಜ್'** ' **ಡೋಲಿಯಾಂ ಸಾನ್ ಪೀ ಸಮನಾ** ' ಎಂಬ ಎರಡು ನಾಟಕಗಳನ್ನೂ ಬರೆದಿದ್ದಾರೆ.

**ಜಯಂತಿ ದಲಾಲ್** (1909-1970) ಸ್ವಾತಂತ್ರ್ಯ ಚಳವಳಿಯಲ್ಲಿ ಧುಮುಕಿದ ಕಾರಣ ಪದವೀಧರರಾಗುವುದು ಸಾಧ್ಯವಾಗಲಿಲ್ಲ. ಸ್ವಾತಂತ್ರ್ಯದ ನಂತರ ಸಮಾಜವಾದಿ ಕಾರ್ಯ ಕರ್ತರಾದರು. **'ಬಿಖರೇ ಮೋತಿ'** ಎಂಬ ಚಿತ್ರದ ನಿರ್ಮಾಪಕರಾಗಿ ಅದರಲ್ಲಿ ತಾವೂ ಅಭಿನಯಿಸಿದರು. ತರುವಾಯ ಪತ್ರಿಕೋದ್ಯಮಿ ಹಾಗೂ ಪ್ರಕಾಶಕರಾಗಿ ಒಂದು ಮುದ್ರಣಾಲಯವನ್ನು ನಡೆಸತೊಡಗಿದರು. ಇವರ **ರೇಖಾ ಎಂಬ ಮಾಸಪತ್ರಿಕೆ ಹಾಗೂ ಗತಿ ಗ್ರಂಥ ಮಾಲೆಯ ಪ್ರಕಾಶನಗಳಿಂದ ಗುಜರಾತಿ ಸಾಹಿತ್ಯದಲ್ಲಿ ಒಂದು ಹೊಸ ಕಾಂತಿ ಕಂಡುಬಂದಿತು. ಎರಡು ಕಾದಂಬರಿಗಳು, ಅನೇಕ ಕಥಾ ಸಂಗ್ರಹಗಳು, ಎರಡು ಪುಸ್ತಕಗಳು ಇವಿಷ್ಟನ್ನು ಬರೆದ ಮೇಲೆ ಇವರು ನಾಲ್ಕು ಏಕಾಂಕ ಸಂಗ್ರಹಗಳನ್ನೂ ಒಂದು ನಾಟಕವನ್ನು ರಚಿಸಿದರು. ಇವರು ಹದಿನೈದು ವಿದೇಶೀ ನಾಟಕಗಳನ್ನು ಅನುವಾದಿಸಿದ್ದಾರೆ. ಇವುಗಳಲ್ಲಿ ಟಾಲ್‌ಸ್ಟಾಯ್‌ರವರ ಜಗತ್ಪ್ರಸಿದ್ಧ ವಾರ್ ಅಂಡ್ ಪೀಸ್ ಮತ್ತು ಆರ್‌ವೇಲರ ಅನಿಮಲ್‌ಫಾರ್ಮ್ ಸಹ ಸೇರಿವೆ. ವ್ಯಂಗ್ಯಲೇಖನಗಳನ್ನು ಬರೆಯುವುದರಲ್ಲಿ ಇವರಿಗೆ ಅಭಿರುಚಿ ಇತ್ತು. ಜವನಿಕಾ, ಅವತರಣ, ಪ್ರವೇಶಬೀಜೋತ್ರೀ ಜೋ ಪ್ರದೇಶ ಮತ್ತು 'ಚೋಥೋ ಪ್ರವೇಶ್'** ಇವರು ಬರೆದ ನಾಟಕಗಳು.

**ಕೃಷ್ಣ ಲಾಲ್ ಶ್ರೀಧರಾಣಿ** (1911-1960) ರಾಷ್ಟ್ರೀಯ ಶಿಕ್ಷಣ ಸಂಸ್ಥೆಯಲ್ಲಿ ಶಿಕ್ಷಣ ಪಡೆದ ಮೇಲೆ ಅಮೆರಿಕಾಕ್ಕೆ ಹೋಗಿ ಸಂಶೋಧನೆಯಲ್ಲಿ ನಿರತರಾದರು. ಅಲ್ಲಿ ಅನೇಕ ವರ್ಷಗಳಿಂದ ಪತ್ರಿಕೋದ್ಯಮಿ ಹಾಗೂ ಲೇಖಕರಾಗಿ ಹೆಸರುವಾಸಿಯಾದರು. ಇವರು ಅಮೇರಿಕಾದಲ್ಲಿದ್ದಾಗ ಬರೆದ **'ಮೈ ಇಂಡಿಯಾ', ಮೈ ಅಮೆರಿಕಾ, ವಾರ್ ವಿಥೌಟ್ ವಯಲೆಂಸ್** ಮುಂತಾದ ಐದು **ಪುಸ್ತಕಗಳು ಭಾರತ, ಗಾಂಧೀಜಿ ಹಾಗೂ ಅಹಿಂಸಾತ್ಮಕ ಸ್ವಾತಂತ್ರ್ಯ ಸಂಗ್ರಾಮದ ಮೇಲೆ ಬೆಳಕು ಬೀರುತ್ತದೆ. ಈ ಪುಸ್ತಕಗಳು ಇಂಗ್ಲಿಷ್ ಭಾಷೆಯಲ್ಲಿವೆ. ಭಾರತಕ್ಕೆ ಹಿಂದಿರುಗಿದ ಮೇಲೆ ದೆಹಲಿಯಲ್ಲಿದ್ದುಕೊಂಡು ಅನೇಕ ಸ್ವದೇಶೀ ಹಾಗೂ ಅಮೆರಿಕನ್ ವೃತ್ತ ಪತ್ರಿಕೆಗಳ ಪ್ರತಿನಿಧಿಯಾಗಿ ಕಾರ್ಯ ಕೈಗೊಂಡರು. ಕವಿ ಹಾಗೂ ನಾಟಕಕಾರರಾಗಿ ಇವರು ತಮ್ಮ ಪ್ರತಿಭೆಯನ್ನು ತೋರಿದರು. ಕೋಡಿಯಾಂ ಮತ್ತು ಮೋರಾನಾಂ ಈಡಾ ಕಾವ್ಯಸಂಗ್ರಹಗಳು, 'ವಡಲೋ'** ಮತ್ತು **'ಪದ್ಮಿನಿ '** ನಾಟಕಗಳನ್ನು ಇವರು ಅಮೆರಿಕಾಕ್ಕೆ ಹೋಗುವ ಮೊದಲೇ ಬರೆದಿದ್ದರು. **'ಪಿಯೋ ಗೋರಿ'** ಎಂಬ ಏಕಾಂಕ ಸಂಗ್ರಹ ಅಮೇರಿಕಾದಿಂದ ಮರಳಿದ ಮೇಲೆ ಬರೆಯಲ್ಪಟ್ಟಿದ್ದು. ಈ ಸಂಗ್ರಹದಲ್ಲಿ ಬಂದಿರುವ ನಾಟಕವನ್ನು ಅದರಿಂದಲೇ ಆಯ್ದುಕೊಳ್ಳಲಾಗಿದೆ.

**ಗುಲಾಬ್‌ದಾಸ್ ಬ್ರೋಕರ್** (1909-) ಷೇರು ವ್ಯಾಪಾರದ ವೃತ್ತಿಯಲ್ಲಿದ್ದ ಇವರು ಸ್ವಂತ ಇಚ್ಛೆಯಿಂದ ನಿವೃತ್ತರಾಗಿದ್ದಾರೆ. ಪದವೀಧರರಾದ ಮೇಲೆ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸೇರಿ ಜೈಲಿಗೆ ಹೋದರು. ಸೆರಮನೆಯಲ್ಲೇ ಅವರ ಲೇಖನ ವೃತ್ತಿ ಪ್ರಾರಂಭವಾಗಿ ಈವರೆಗೂ ನಡೆದು ಬಂದಿದೆ. ಸಾಹಿತ್ಯ ಕ್ಷೇತ್ರದಲ್ಲಿ ಇವರು ಕಥೆಗಾರರಾಗಿ ಪ್ರತಿಷ್ಠೆ ಪಡೆದರು. ಆರು ಕಥಾ ಸಂಗ್ರಹಗಳ ನಂತರ ಒಂದು ಕಾವ್ಯ ಸಂಗ್ರಹ ಹಾಗೂ ಎರಡು ವಿಮರ್ಶಾತ್ಮಕ ಪ್ರಬಂಧ ಸಂಗ್ರಹಗಳನ್ನು ಬರೆದರು. ಧನ್ ಸುಖ್ ಲಾಲ್‌ರವರೊಂದಿಗೆ ಬರೆದ ನಾಟಕ **"ಧೂಮ್ರಸೇರ್"'** ಹಾಗೂ ಸ್ವಂತ ಏಕಾಂಕಗಳ ಸಂಗ್ರಹ **"ಜ್ವಲಂತ ಅಗ್ನಿ"** ನಾಟಕ ಕ್ಷೇತ್ರದಲ್ಲಿ ಇವರ ಲೇಖನಿ ಎಷ್ಟು ಮುಂದುವರೆದಿದೆ ಎಂಬುದನ್ನು ತೋರಿಸುತ್ತವೆ. ಇವರು ಅನೇಕ ವರ್ಷಗಳ ಕಾಲ ಭಾರತೀಯ ಪಿ.ಇ.ಎನ್ ನ ಕಾರ್ಯದರ್ಶಿಯಾಗಿದ್ದರಲ್ಲದೆ ಗುಜರಾತಿ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯೂ ಆಗಿದ್ದರು. ಈ ಪರಿಷತ್ತಿನ ಪತ್ರಿಕೆಯಾದ '**ಪರಖ್**'ನ ಸಂಪಾದಕರೂ ಆಗಿದ್ದರು.

**ಶಿವ್‌ಕುಮಾರ್ ಜೋಷಿ** (1916-1988) ತಮ್ಮ ಸ್ಥಳವಾದ ಅಹಮದಾಬಾದಿನಲ್ಲಿ ಪದವೀಧರರಾದ ನಂತರ ಅನೇಕ ವರ್ಷಗಳವರೆಗೂ ಕಲ್ಕತ್ತೆಯಲ್ಲಿ ವಾಸಿಸುತ್ತಾ ಬಟ್ಟೆಯ ವ್ಯಾಪಾರ ಮಾಡುತ್ತಿದ್ದರು. ವಿದ್ಯಾರ್ಥಿ ದೆಶೆಯಿಂದಲೇ ಇವರಲ್ಲಿ ನಾಟಕ ಮತ್ತು ಅಭಿನಯದ ಬಗ್ಗೆ ಅಭಿರುಚಿ ಇತ್ತು. ತರುವಾಯ ಹವ್ಯಾಸಿ ರಂಗಮಂಚ ಇವರನ್ನು ಆಕರ್ಷಿಸಿತು. ಇವರ ಲೇಖನ ಪ್ರವೃತ್ತಿ ನಾಟಕ ರಚನೆಯ ಕಡೆ ಹೊರಳಿತು. 1950 ರಿಂದ ಸಾಹಿತ್ಯ ರಚನೆಯ ಉದಯೋನ್ಮುಖ ಕಾಲ ಪ್ರಾರಂಭವಾಯಿತು. ಅವರು ಅನೇಕ ದೀರ್ಘ ನಾಟಕಗಳನ್ನು. ಏಕಾಂಕ ಸಂಗ್ರಹಗಳನ್ನು ಬರೆದಿದ್ದಾರೆ. **ಸುಮಂಗಲಾ, ಅಂಗಾರ್ ಭಸ್ಮ, ಸಾಂಧ್ಯ ದೀಪಿಕಾ, ಪೂರ್ವಾಂಕುರ್, ಪಾಂಚ್ ಮನಾವಾ ಪಾರೇವಾಂ, ಅನಂತ್ ಸಾಧನಾ, ಸೋನಾನಿ ನೀ ಹಾಂಸಡೀ ಮಾಪಾನಿ ಹಾಂ ಸಡೀ** ಮುಂತಾದವು ಇವರ ಸುಪ್ರಸಿದ್ಧ ಕೃತಿಗಳು, ನಾಟಕಗಳಷ್ಟೇ ಅಲ್ಲದೆ ಇವರು ಕಥೆ ಕಾದಂಬರಿಗಳನ್ನೂ ಬರೆದಿದ್ದಾರೆ.

Printed at The Central Electric Press A12/1 Naraina Indl. Area, Phase-I, New Delhi-110028